ನೇಮಿಚಂದ್ರ ವಿರಚಿತ

# ನೇಮಿನಾಥ ಪುರಾಣಂ

(ಅರ್ಧನೇಮಿ)

ಸಂಪಾದಕ

ಬಿ. ಎಸ್. ಸಣ್ಣಯ್ಯ, ಎಂ.ಎ.

ಪ್ರಕಾಶಕರು:

ಸಾಧನ ಸಾಹಿತ್ಯ ಮಂದಿರ

ಜಗನ್ಮೋಹನ ಪ್ಯಾಲೇಸ್ ರಸ್ತೆ, ಮೈಸೂರು.

# ವಿಷಯಸೂಚಿ



# ಚಿತ್ರಗಳು

ದಿಸಿ, ಸಂಪ್ರತಿಸಿ, ಪ್ರಕಟಮಾಡುವ ಸುಯೋಗ ದೊರೆತುದು ನನ್ನ ಪುಣ್ಯವೆಂದೇ ಬಗೆದಿದ್ದೇನೆ.

ಈ ಕೃತಿಯ ಪಾಠವನ್ನು ನಾಲ್ಕು ಪ್ರತಿಗಳು ಮತ್ತು ಒಂದು ಅಚ್ಚಿನ ಪ್ರತಿಯ ಆಧಾರದಿಂದ ನಿರ್ಣಯಿಸಲಾಗಿದೆ. ಇವುಗಳಲ್ಲಿ ಅತ್ಯಂತ ಪ್ರಾಚೀನವಾದ ಪ್ರತಿ ಯೆಂದರೆ 'ಜ' ಪ್ರತಿ. ಇದರ ಒಂದು ವಿಶೇಷವೆಂದರೆ ಅಲ್ಲಲ್ಲಿ ಇರುವ ರೇಖಾ ಚಿತ್ರಗಳು. ಇದರಿಂದ ಕಾವ್ಯಗಳನ್ನು ಚಿತ್ರಗಳಮೂಲಕ ಪರಿಚಯ ಮಾಡಿಕೊಡು ವುದು ಹಿಂದೆಯೇ ರೂಢಿಯಲ್ಲಿದ್ದುದನ್ನು ಕಾಣಬಹುದಾಗಿದೆ. ಈ ಚಿತ್ರಗಳನ್ನು ಕಾವ್ಯದಲ್ಲಿ ಅಲ್ಲಲ್ಲಿಯೇ ಸಂದರ್ಭಕ್ಕೆ ತಕ್ಕಂತೆ ಕೊಡಲಾಗಿದೆ. ಈ ಮೂಲಕ ಆಗಲೇ ಶಿಥಿಲವಾಗಿರುವ ಚಿತ್ರಗಳು ಒಂದೆಡೆ ಬೆಳಕಿಗೆ ಬಂದಿರುವುದು ಸಂತೋಷದ ಸಂಗತಿ. ಪರಿಶೋಧನೆಗೆ ಉಪಯೋಗಿಸಿಕೊಂಡಿರುವ ಪ್ರತಿಗಳ ವಿವರವಿಂತಿದೆ.

'ಚ':—ಇದು ಪ್ರಾಚ್ಯವಿದ್ಯಾ ಸಂಶೋಧನಾಲಯದ ೨೬೦ ನೆಯ ನಂಬರಿನ ಮೈಕ್ರೊಫಿಲಂ ಪ್ರತಿ, ಓಲೆಯ ಪ್ರತಿ. ಇದರಲ್ಲಿರುವ ಪಾಠಗಳು ಸಾಮಾನ್ಯವಾಗಿವೆ. ಶಕಟರೇಫ ಇದ್ದರೂ ಸರಿಯಾಗಿ ಪ್ರಯೋಗವಾಗಿಲ್ಲ. ಪ್ರತಿಯ ಕೊನೆಯಲ್ಲಿ ಪ್ರತಿ ಕಾರನು ಬರೆದಿರುವ

ಬರೆ ಶಾಲೀವಾಹನಂ ಪೋಗದೆ ಶಕ ವರುಷಂ ಸಾರೆ ಸಂವತ್ಸರಂ ಸಾ ।
ಸಿರದಾನೂರ್ಱಱುಱು ಸಂದೊಪ್ಪುವ ಕಲಿಯುಗ ರಕ್ತಾಕ್ಷಿಯಾ ಮಾಘ ಮಾಸಾ ।
ಪರಪಕ್ಷಂ ಸಚ್ಚತುರ್ದಶ್ಯ ಹಿಮಕಿರಣವಾರಂ ಬರಲ್ ಪದ್ಮರಾಜಂ ।
ಬರೆದತ್ಯಂತಕ್ಕಱಿಂದತ್ಯಧಿಕ ಬಕುತಿಯಿಂದೀ ನೇಮಿ ಪತ್ರ್ಯಾವ್ಯನುಂ ॥

ಎಂಬ ಪದ್ಯದಿಂದ ಪ್ರತಿಯ ಕಾಲ ಕ್ರಿ. ಶ. ೧೬೮೫ ನೆಯ ರಕ್ತಾಕ್ಷಿ ಸಂವತ್ಸರದ ಮಾಘಮಾಸದ ಕೃಷ್ಣಪಕ್ಷದ ಚತುರ್ದಶೀ ಸೋಮವಾರ ಎಂದೂ, ಪ್ರತಿಕಾರನು ಪದ್ಮರಾಜ ಪಂಡಿತನೆಂದೂ ತಿಳಿದುಬರುತ್ತದೆ.

'ಜ':—ಪ್ರಾ. ವಿ. ಸಂ ದ ೩೬೧ ನೆಯ ನಂಬರಿನ ಮೈಕ್ರೋಫಿಲಂ ಪ್ರತಿ. ಇದು ಕಾರ್ಕಳದ ಶ್ರೀ ಆದಿರಾಜ ಇಂದ್ರರು ಕಳುಹಿಸಿಕೊಟ್ಟಿದ್ದ ಓಲೆ ಪ್ರತಿ. ಇದು ಈಗ ದೊರೆತಿರುವ ಪ್ರತಿಗಳಲ್ಲೆಲ್ಲಾ ಪ್ರಾಚೀನವಾದುದು. ಇದರಲ್ಲಿ ಸೊಗಸಾದ ರೇಖಾ ಚಿತ್ರಗಳಿವೆ. ಸ್ವಲ್ಪ ಶಿಥಿಲವಾಗಿದೆ. ಇದ್ದುದರಲ್ಲಿ ಪಾಠಗಳು ಉತ್ತಮ ವಾಗಿವೆ. ಶಕಟರೇಫ ಪ್ರಯೋಗವಿದೆ.

'ಟ':—ಇದು 'ಚ' ಪ್ರತಿಯನ್ನೇ ಹೋಲುತ್ತದೆ. ಶಕಟರೇಫ ಇದ್ದರೂ ಸರಿಯಾಗಿಲ್ಲ. ಇದು ಪ್ರಾ. ವಿ. ಸಂ. ದ ಕ. ಎ. ೫೪ ನೆಯ ನಂಬರಿನ ಕಾಗದದ ಪ್ರತಿ.

'ಡ'.—ಪ್ರಾ. ವಿ ಸಂ ದ ಕೆ. ಎ. ೨೪೯ ನೆಯ ನಂಬರಿನ ಕಾಗದದ ಪ್ರತಿ. ಶಕಟರೇಫ ಇಲ್ಲ, ಅಶುದ್ಧ. ಕೆಲವೆಡೆ ಕೆಲವು ಪದ್ಯಗಳನ್ನೇ ಬಿಟ್ಟಿದೆ.

# ಮುನ್ನುಡಿ

ಅರ್ಧನೇಮಿ ಪುರಾಣವೆಂದು ಸುಪ್ರಸಿದ್ಧವಾಗಿರುವ ಈ ಕೃತಿಯನ್ನು ರಚಿಸಿರುವವನು ಸು.ಕ್ರಿ.ಶ. ೧೧೭೦ರಲ್ಲಿ ಜೀವಿಸಿದ್ದ ನೇಮಿಚಂದ್ರ. ಹೊಯ್ಸಳ ವೀರಬಲ್ಲಾಳನ (೧೧೭೩–೧೨೨೦) ಪ್ರಧಾನಿಯಾದ ಪದ್ಮನಾಭನು ಈತನಿಗೆ ಆಶ್ರಯದಾತನಾಗಿದ್ದನೆಂದೂ, ಈತನಿಗೆ "ಅಭಿನವಸೇನಾನಿ ಎಂಬ ಹೆಸರೂ, ಕಲಾಕಾಂತ ಕವಿರಾಜಮಲ್ಲ, ಕವಿಧವಳ, ಶೃಂಗಾರ ಕಾರಾಗೃಹ [illegible] ರಾಜ ಕುಂಜರ, ಸಾಹಿತ್ಯ ವಿದ್ಯಾಧರ. ವಿದ್ಯಾವಧೂ ವಲ್ಲಭ, ಸುಕ [illegible], [illegible] ಪ್ರಸಿದ್ಧ ವಿನೋದ, ಭಾರತೀಚಿತ್ತ ಚೋರ, ಚತುರ್ಭಾಷಾ [illegible] ರ ಕವಿಶೇಖರ, ಕೃತಿಕುಲಗೇಹ, ವಾಗ್ವಲ್ಲಕೀವೈಣಿಕ ಮೊದಲಾದ [illegible] ಇದ್ದುವೆಂದು ತಿಳಿದು ಬರುತ್ತದೆ."[1] ಈತನು ಲೀಲಾವತೀ ಪ್ರಬಂಧವೆಂಬ [illegible] ಕಾವ್ಯವನ್ನು ರಚಿಸಿದ್ದಾನೆ. ಕನ್ನಡ ಸಾಹಿತ್ಯ [illegible] ಸವುಳಿಂಬುದಕ್ಕೆ ನಂಜುಂಡ ಕವಿಯ

> ಕಾಮಂಬರಿಸು ಸೋರಿಸಿ ಲೀಲಾವತಿ
> ಗಾರಿಸಿಗಂ ಕಪ್ಪಸಿಟ್ಟು
> ಮೇಲೆ ನಿಗುನು ನೆಟ್ಟಿಸಿದ ನೇಮಿಚಂದ್ರನ
> ಪಾರಗನು ಬಲಿಗೊಂಚೆ[2]

ಎಂಬ ಮಾತುಗಳೇ ಸಾಕ್ಷಿಯಾಗಿವೆ.

ಇಪ್ಪತ್ತೆರಡನೆಯ ತೀರ್ಥಂಕರನ ಕಥೆಯೆಂದು ಜೈನರೂ ಭಾಗವತ ಪುರಾಣದ ಇನ್ನೊಂದು ಸ್ವರೂಪವೆಂದು ವೈದಿಕರೂ ಈ ಕಥೆಯನ್ನು ಶ್ರದ್ಧಾಭಕ್ತಿಗಳಿಂದ ಅಭ್ಯಾಸಮಾಡುತ್ತಿರುತ್ತಾರೆ. ಕರ್ಣಪಾರ್ಯ, ಮಹಾಬಲ, ಬಂಧುವರ್ಮ, ಸಗರನ–ಮುಂತಾದ ಕವಿಗಳು ಇದೇ ವಸ್ತುವನ್ನೇ ಆರಿಸಿಕೊಂಡಿರುವುದರಿಂದ ಇದು ಜನಪ್ರಿಯವೂ ಸ್ವಾರಸ್ಯಪೂರ್ಣವೂ ಸನಾತನವೂ ಆದ ಮಹಾಕಾವ್ಯವಸ್ತುವೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ವಸ್ತು ಸುಪ್ರಸಿದ್ಧ, ವಸ್ತುವನ್ನು ಗ್ರಹಿಸಿ ರಸಭರಿತ ಕಾವ್ಯವನ್ನು ರಚಿಸ ಹೊರಟಿರುವವನು 'ಭಾರತೀ ಚಿತ್ತಚೋರ'ನಾದ ನೇಮಿಚಂದ್ರ. ಕಾವ್ಯ ಅತ್ಯಂತ ರಮಣೀಯವಾಗಿರುವುದರಲ್ಲಿ ಸಂದೇಹವೇ ಇಲ್ಲ. ಆದರೆ ಅದೇನು ಕಾರಣವೋ ಕಥೆ ಕಂಸವಧಾ ಪ್ರಸಂಗದವರೆಗೆ ಹರಿದು ಅಷ್ಟಕ್ಕೆ ನಿಂತಿತು. ಅರ್ಧನೇಮಿಪುರಾಣ ಎಂಬ ಹೆಸರನ್ನು ಪಡೆಯಿತು. ಇಂತಹ ಸತ್ಕಾವ್ಯವನ್ನು ಸಂಪಾ

---

1 ಕರ್ಣಾಟಕ ಕವಿಚರಿತೆ (ಪರಿಷತ್ ಮುದ್ರಣ) ಪು ೨೮೭

2 ರಾಮನಾಥಚರಿತ, ೧ನೆಯ ಸಂಧಿ, ಪದ್ಯ ೩೧

'ಣ' : — ಇದು ಶ್ರೀ. ಮಂ. ಆ. ರಾಮಾನುಜಯ್ಯಂಗಾರ್, ಅವರಿಂದ ಪರಿಶೋಧಿತವಾಗಿ ೧೯೧೪ ರಲ್ಲಿ ಪ್ರಕಟಗೊಂಡ ಅಚ್ಚಾದ ಪ್ರತಿ. ಇದರಲ್ಲಿ ಕ, ಗ ಸಂಕೇತಗಳಿಂದ ಪಾಠಾಂತರಗಳನ್ನು ಗುರುತಿಸಿದೆ. ಈ ಪಾಠಾಂತರಗಳನ್ನು ಕ, ಗ ಸಂಕೇತದಿಂದಲೇ ಈ ಪುಸ್ತಕದಲ್ಲಿಯೂ ಕೊಟ್ಟಿದೆ.

ಈ ದೊರೆತಷ್ಟು ಪ್ರತಿಗಳ ಸಹಾಯದಿಂದಲೇ ಪರಿಶೋಧಿಸಲು ಅನೇಕ ಎಡರು ತೊಡರುಗಳಿದ್ದರೂ ಈ ಹೊತ್ತಗೆಯು ಹೊರಬರಲು ಶ್ರೀ ಎಚ್. ದೇವೀರಪ್ಪ, ಎಂ.ಎ., ಶ್ರೀ ಡಿ. ಜವರೇಗೌಡ, ಎಂ.ಎ. ಇವರ ಒತ್ತಾಯ ಮತ್ತು ಸಹಕಾರವೇ ಮುಖ್ಯಕಾರಣ ವಾಗಿದೆ. ಹೆಸರು ನನ್ನದಿದ್ದರೂ ಉಸಿರು ಪ್ರೊ|| ಡಿ. ಎಲ್. ನರಸಿಂಹಾಚಾರ್ಯ, ಎಂ.ಎ. ಅವರದು. ಇದಕ್ಕೆ ಜೀವಕಳೆ ಬಂದುದು ಈ ಮಹನೀಯರಿಂದ. ಇವರು ನಾನು ಎಂದೇ ಹೋಗಲಿ ಪ್ರೀತಿಯಿಂದ ಕಂಡು ಕರಡು ಪ್ರತಿಯನ್ನು ಓದಿ, ತಿದ್ದಿ, ಸೂಕ್ತ ಸಲಹೆಗಳನ್ನಿತ್ತು ಕಾವ್ಯವು ಅನಷ್ಟು ಉತ್ತಮವಾಗಿ ಪ್ರಕಟವಾಗಲು ಸಹಾಯ ಮಾಡಿದ್ದಾರೆ. ಈ ಮಹನೀಯರೆಲ್ಲರಿಗೂ ನಾನು ಅತ್ಯಂತ ಚಿರಋಣಿ. ಪರಿಶೋಧನೆಗೆ ಪ್ರತಿಗಳನ್ನು ಕೊಟ್ಟು ರೇಖಾಚಿತ್ರಗಳನ್ನು ಹಾಕಿಕೊಳ್ಳಲು ಅವಕಾಶಮಾಡಿಕೊಟ್ಟ ಪ್ರಾ. ವಿ. ಸಂ. ದ ಪ್ಯೆರೆಕ್ಟರವರಿಗೆ ನನ್ನ ಅನಂತ ಪ್ರಣಾಮಗಳು.

ಪ್ರಕಾಶನದ ಪೂರ್ಣ ಹೊರೆಯನ್ನು ಹೊರಲು ಮುಂದೆ ಬಂದು ಪುಸ್ತಕವನ್ನು ತರುವುದರಲ್ಲಿ ಶ್ರಮಿಸಿದ ಶ್ರೀ ಎನ್. ಶ್ರೀಕಂಠಯ್ಯನವರಿಗೂ, ಇಷ್ಟು ಅಂದವಾಗಿ ಮುದ್ರಣಮಾಡಿ ಸಕಾಲಕ್ಕೆ ಪುಸ್ತಕಗಳನ್ನು ಒದಗಿಸಿಕೊಟ್ಟ ಗೆಳೆಯ ಶ್ರೀ ನ. ಕೃಷ್ಣ ಅವರಿಗೂ ನನ್ನ ಧನ್ಯವಾದಗಳು.

೨೨—೧೨—೧೯೬೧ ಇತಿ,

ಮೈಸೂರು ಬಿ. ಎಸ್. ಸಣ್ಣಯ್ಯ

# ಒಪ್ಪೋಲೆ

| ಪುಟ—ಪದ್ಯ | ತಪ್ಪು | | ಒಪ್ಪು |
|---|---|---|---|
| 16— ೨೯ | ಸಿಂಹಸಥರನನ್ನು | — | ಸಿಂಹರಥನನ್ನು |
| 18— ೧೮ | ಅರ್ಧನೇಮಿಗೆ | — | ಅರ್ಧನೇಮಿ |
| ೪— ೨೧ | ಮರ್ಹನ್ಮು್ಖ | — | ಮರ್ಹನ್ಮುಖ |
| ೫— ೨೭ | ವೈಕಟಕಂ | — | ದ್ವೈಕಟಕಂ |
| ೧೦— ೫೭ | ಪೂರ್ವಾಪರ | — | ಪೂರ್ವಾಪರ |
| ೨೨—೧೧೧ | ಪದ್ಮದಂದಂದಿಂ | — | ಪದ್ಮದಂದದಿಂ |
| ೨೪—೧೨೦–ಗದ್ಯ | ಚಕ್ರವತ್ರಿ | — | ಚಕ್ರವರ್ತಿ |
| ೫೩— ೩೩–ವ | ನಗರಮನಾಳ್ವು | — | ನಗರಮನಾಳ್ವ |
| ೫೮— ೬೦ | ಮಲ್ಲಿಗೆಯಿಂ ಕೈ | — | ಮಲ್ಲಿಗೆಯಿಂ ಕೈ |
| ೬೨— ೭೪–ವ | ಮರ್ಗುಬ್ದು | — | ಮರ್ಗುಬ್ದು |
| ೮೬— ೬೩ | [1]ಮೆಲ್ಲೈಕಿಲ್[1] | — | [1]ಸ್ಟೇಲ್ಲೈಕಿಲ್[1] |
| ೧೦೨—೧೨೭ | ಕಡವಿಸಿಲಿಂ | — | ಕಡುವಿಸಿಲಿಂ |
| ೧೧೧— ೧೦ ನೆ ಪಂಕ್ತಿ | ಕೇರಿಯೋಳಂ | — | ಕೇರಿಯೊಳಂ |
| ೧೮೩— ೮೧–ವ | ಕಂಭಮನಂ[6]ಜನ[6] | — | ಕಂಭಮನಂ[6][ಜನ][6] |
| ೧೮೩— ೮೨ | [7]ಬಿಣ್ಪೆನಿತಾಯ್ತೇ | — | [7]ಬಿಣ್ಪಿ[ನಿ]ತಾಯ್ತೇ |
| ೧೮೩—ಪಾಠಾಂತರ | 7 ಬಿಣ್ಪೆಂತಾಯ್ತೇ (ಚಟಡಣ) | — | (೬ ನೇ ಪಾಠಾಂತರದ ಕೊನೆಗೆ) ಬಿಣ್ಪೆಂತಾಯ್ತೆ |
| | ಬಿಣ್ಕೆತ್ತಾಯ್ತೇ (ಜ) (ಚಟಡಣ) | | (ಚಟಡಣ) ಬಿಣ್ಕೆತ್ತಾಯೇ (ಜ) |
| ,, — ,, | 5 ಗಜ (ಚಟಡಣ) | — | 5 ಗಜ (ಚಜಟಡಣ) |
| ೧೯೩— ೨೧–ವ | ತೊರೆದೆಚ್ಚು | — | ತೊರೆದೆಚ್ಚು |
| ೧೯೪—ಪಾಠಾಂತರ | 9 ಕಜ್ಜ (ಣ) | — | 9 ಕಂಜ(ಚಜಟಡ)ಕಜ್ಜ(ಣ) |
| ೨೧೦— ,, | 10 ವೆ (ಜ) | — | 10 ವಿದಿ (ಚಟಡಣ) |
| ೨೧೨— ,, | 4 ಅರ್ಪಿನಂ | — | 4 ಲಿರ್ಪಿನಂ |
| ೨೨೦—೧೩ ನೆ ಪಂಕ್ತಿ | ವತ್ರಪದ್ಮ | — | ವಕ್ತ್ರಪದ್ಮ |
| ೨೨೦—೩೩ ,, | ಸುವ್ರತಿಷ್ಟಂ | — | ಸುಪ್ರತಿಷ್ಠ |
| ೨೪೩—೩೨ ,, | ಬೆಟ್ಟಿ | — | ಬೆಟ್ಟ |
| ೨೪೬—೩೧ ,, | ಬೆಲು | — | ಬೆಸ್ಲು |

# ಕವಿ ಕಾವ್ಯವಿಚಾರ

ನೇಮಿಚಂದ್ರನು ಪಂಪ, ಪೊನ್ನ, ರನ್ನರಂತೆಯೇ ಒಂದು ಲೌಕಿಕ ಕಾವ್ಯವನ್ನೂ, ಮತ್ತೊಂದು ಮತೀಯ ಕಾವ್ಯವನ್ನೂ ರಚಿಸಿದ್ದಾನೆ. ತನ್ನ ಹೆಸರನ್ನುಳಿದು ಸ್ವವಿಷಯವನ್ನಾಗಲಿ, ತನ್ನ ಕಾಲವನ್ನಾಗಲಿ ಕಾವ್ಯದಲ್ಲೆಲ್ಲಿಯೂ ಹೇಳಿಕೊಂಡಿಲ್ಲ ಮತ್ತು ತನ್ನ ಹಿಂದಿನ ಕವಿಗಳಾರನ್ನೂ ಸ್ತುತಿಸಿಲ್ಲ. ಆದರೆ, ತನ್ನ ಆಶ್ರಯದಾತರನ್ನು ಹೊಗಳಿರುವುದರಿಂದ, ಆಶ್ರಯದಾತರ ಕಾಲದ ಆಧಾರದ ಮೇಲೂ, ಇವನಾದ ಮೇಲೆ ಬಂದ ಕವಿಗಳು ಈತನನ್ನು ಸ್ತುತಿಸಿರುವುದರಿಂದಲೂ ಈತನ ಕಾಲ ನಿರ್ಣಯವಾಗಿದೆ.

ಕವಿಯು ತನ್ನ ಮೊದಲ ಕಾವ್ಯವಾದ 'ಲೀಲಾವತಿ' ಗ್ರಂಥದ ಕೊನೆಯಲ್ಲಿ ಹೇಳುವ

ಅಂಬುಧಿವೇಷ್ಟಿತಾವನಿಗೆ ಲಕ್ಷ್ಮಣದೇವನೆ ರಾಜನೆಂದು ಲೋ
ಕಾಂಬಿಕೆಯಪ್ಪ ಪುಣ್ಯಸತಿ ಚಂದಲದೇವಿಯೆ ದೇವಿಯೆಂದು ಸೇ
ವ್ಯಂ ಬುಧ ನೇಮಿಚಂದ್ರನೆ ಕವೀಂದ್ರಂ....... ....

ಧರೆಯಂ ರಕ್ಷಿಸುತಿರ್ಕೆ ಲಕ್ಕ ಬರಿಸಂ ಲಕ್ಷ್ಮೀಧರೋರ್ವೀಶ್ವರಂ
ಸಿರಿಯಂತಾತನ ತೋಳೊಳಿರ್ಕೆ ಸತತಂ ಶ್ರೀ ಚಂದ್ರಿಕಾದೇವಿ ಸಾ
ವಿರಮುಂ ಕಾವ್ಯಮನೊಲ್ದು ಪೇಳ್ಗೆ ಸುಖದಿಂ ಚಂದ್ರೋದಯಂ ಸಪ್ತಸಾ
ಗರ ಪರಿಯಂತ ಧರಿತ್ರಿಯೊಳ್ನೆಲಸುಗೀ ಕಾವ್ಯಂ ಶುಭಂ ಮಂಗಳಂ ||

ಎಂಬ ಈ ಪದ್ಯಗಳಿಂದ ಲಕ್ಷ್ಮಣರಾಜನ ಆಶ್ರಯದಲ್ಲಿ ಲೀಲಾವತಿ ಗ್ರಂಥವನ್ನು ರಚಿಸಿದಂತೆ ತಿಳಿದುಬರುತ್ತದೆ. 'ಸೌಂದತ್ತಿಯ ರಟ್ಟವಂಶಕ್ಕೆ ಸೇರಿದ ಇಬ್ಬರು ಲಕ್ಷ್ಮಣರಾಜರ ಹೆಸರು ಇತಿಹಾಸದಲ್ಲಿ ಪ್ರಸಿದ್ಧವಾಗಿವೆ. ಮೊದಲನೆಯವನು ೧೧೪೦ ರಲ್ಲಿಯೂ, ಎರಡನೆಯವನು ೧೨೨೮ ರಲ್ಲಿಯೂ ರಾಜ್ಯವಾಳುತ್ತಿದ್ದರೆಂದು ಖಚಿತವಾಗಿದೆ. ಮೊದಲನೆಯವನ ಹೆಂಡತಿ ಚಂದಲದೇವಿಯಾದುದರಿಂದ, ಅವನ ಆಶ್ರಯದಲ್ಲಿಯೇ, ಅಂದರೆ ಸು. ೧೧೪೦ ಕ್ಕೆ ಮುಂಚೆಯೇ ಲೀಲಾವತಿಯನ್ನೂ ಆಮೇಲೆ ವೀರಬಲ್ಲಾಳನು ಚಕ್ರವರ್ತಿಯಾದ ಮೇಲೆ ನೇಮಿನಾಥಪುರಾಣವನ್ನೂ ರಚಿಸಿರುವಂತೆ ಊಹಿಸಬಹುದು.'[1]

ಎರಡನೆ ಬಲ್ಲಾಳ ಅಥವಾ ವೀರಬಲ್ಲಾಳನು ೧೧೭೩–೧೨೨೦ ರವರೆಗೆ ಆಳುತ್ತಿದ್ದನು. ನೇಮಿನಾಥಪುರಾಣದಲ್ಲಿ ವೀರಬಲ್ಲಾಳನನ್ನೂ, ಆತನ ಆಸ್ಥಾನದಲ್ಲಿದ್ದ

1 ನೇಮಿಚಂದ್ರ—ಶ್ರೀ ಎಸ್. ಅನಂತರಂಗಾಚಾರ್, ಎಂ.ಎ., ಪುಟ ೪.

ಸೆಜ್ಜೆವಳ್ಳಿ ಪದ್ಮನಾಭನನ್ನೂ ಕವಿಯು ಸ್ತುತಿಸಿರುವುದರಿಂದ ಈ ಕಾವ್ಯವು ವೀರ ಬಲ್ಲಾಳನ ಆಸ್ಥಾನದಲ್ಲಿ ಬರೆದುದೆಂಬುದರಲ್ಲಿ ಸಂಶಯವಿಲ್ಲ.

ನೇಮಿಚಂದ್ರನನ್ನು ೧೨೩೦ ರಲ್ಲಿದ್ದ ಜನ್ನನೂ, ೧೨೦೫ ರಲ್ಲಿದ್ದ ಪಾರ್ಶ್ವನಾಥನೂ ಹೊಗಳಿರುವುದರಿಂದ ಇವರಿಗಿಂತ ಹಿಂದೆಯೇ ನೇಮಿಚಂದ್ರನ ಕಾವ್ಯಗಳು ಪ್ರಸಿದ್ಧವಾಗಿರಬೇಕು. ಇವರಿಂದ ನೇಮಿಚಂದ್ರನ ಕಾಲವನ್ನು ಸು. ೧೧೯೦ ಎಂದು ಒಪ್ಪಿಕೊಳ್ಳಬಹುದು.

ಈತನು ಸಮಂತಭದ್ರ, ಪೂಜ್ಯಪಾದ – ಮೊದಲಾದವರನ್ನು ಸ್ತುತಿಸಿ ಕನ್ನಡ ಕವಿಗಳಾರನ್ನೂ ಹೆಸರಿಸದೆ ಮುಂದುವರಿಯುತ್ತಾನೆ. ಚತುರ್ಭಾಷಾ ಪಂಡಿತ, ಕವಿ ಚಕ್ರವರ್ತಿ – ಮೊದಲಾದ ಹಲವಾರು ಬಿರುದುಗಳನ್ನು ಪಡೆದಿದ್ದಾನೆ. ಕವಿಗಳ ವಿಷಯದಲ್ಲಿದ್ದ ಆತನ ಹೆಮ್ಮೆ ಅಸಾಧಾರಣವಾದುದು. ಆದಕ್ಕೆ 'ಕಟ್ಟುಗೆ ಕಟ್ಟಿದಿರ್ಕೆ ಕಡಲಂ ಕಪಿಸಂತತಿ' ಎಂಬ ಪದ್ಯವನ್ನು ಲೀಲಾವತಿಯಲ್ಲಿಯೂ, 'ಕುವಳಯ ದಲದಂ ರವಿ ಕಾಣದುದಂ ಕವಿ ಕಾಣ್ಬನೆನಿಪ್ಪ ವಚನಮೇಂ ತಪ್ಪುಗುಮೇ' (ನೇ. ಪು. ಆ. ೧–೩೩) ಎಂಬ ಪದ್ಯವನ್ನು ನೇಮಿನಾಥಪುರಾಣದಲ್ಲಿಯೂ ನೋಡಬಹುದು. ಇಂತಹ ಕವಿ,ಕಾವ್ಯ ವಿಷಯದಲ್ಲಿ ಹಲವಾರು ಉತ್ತಮ ಪದ್ಯಗಳು ಗ್ರಂಥದಲ್ಲಿ ಬರುತ್ತವೆ.

### ಕಥಾಸಾರ

ಸುಗಂಧಿಲ ದೇಶದಲ್ಲಿ ಜನಭರಿತವಾದ ಸಿಂಹಪುರವಿತ್ತು. ಇದರ ಅರಸ ಅರ್ಹದ್ದಾಸನು ಪತ್ನಿ ಜಿನದತ್ತೆಯೊಡನೆ ಸುಖವಾಗಿ ಕಾಲಕಳೆಯುತ್ತಿರಲು, ಅವರಿಗೆ ಬಹುಕಾಲ ಮಕ್ಕಳಾಗಲಿಲ್ಲ. ಕೊನೆಗೆ ಮಲಧಾರಿ ಸ್ವಾಮಿಗಳ ಆದೇಶದಂತೆ ಒಂದು ಗಂಡುಮಗುವಾಯಿತು. ಆತನಿಗೆ ಅಪರಾಜಿತನೆಂದು ಹೆಸರಿಟ್ಟರು. ಮಗನು ಸಕಲ ವಿದ್ಯಾ ಪ್ರವೀಣನಾದುದನ್ನು ಅರಿತ ಅರ್ಹದ್ದಾಸನು ಮಗುವಿಗೆ ತಕ್ಕ ಕನ್ಯೆಯನ್ನು [illegible] ಪ್ರೀತಿಮತಿಯೆಂಬ ರಾಜಕುಮಾರಿಯನ್ನು ತಂದು ಮದುವೆಮಾಡಿದನು. ಕೊನೆಗೆ ಅರ್ಹದ್ದಾಸನು ವೈರಾಗ್ಯಪರನಾಗಿ ಅಪರಾಜಿತನಿಗೆ ಪಟ್ಟಗಟ್ಟಿ ತಾನು ತಪಸ್ಸಿಗೆ ನಡೆದನು. ಜಿನದತ್ತೆಯೂ ಪತಿಯನ್ನೇ ಹಿಂಬಾಲಿಸಿದಳು.

ಅಪರಾಜಿತನು ಸಮ್ಯಕ್ ದರ್ಶನಾದಿ ಶ್ರಾವಕಗಳನ್ನು ಕೈಗೊಂಡು ಪಟ್ಟಣಕ್ಕೆ ಒಂದು ರಾಜ್ಯವಾಳುತ್ತಾ ಸುಖವಾಗಿ ಕಾಲಕಳೆಯುತ್ತಿರಲು, ಒಂದುದಿನ ವಿಮಲ ವಾಹನರಿಂದ ತನ್ನ ತಂದೆ ಅರ್ಹದ್ದಾಸನೂ ಮುಕ್ತಿಗೆ ಸಂದರೆಂಬ ಮಾತನ್ನು ಕೇಳಿ ಮೂರ್ಛೆಹೋದನು. ಎಚ್ಚತ್ತು ಸುವರ್ಣಬೆಟ್ಟವನ್ನೇರಿ ಸ್ವರ್ಗವನ್ನು ಸೇರಿ ಅಲ್ಲಿ ತನ್ನ ತಂದೆಯನ್ನು ಸಂಧಿಸುವೆನೆಂದು ಬಗೆಯಲು, ಈ ಇಷ್ಟಾರ್ಥವು ಈತನ ಏಳನೆಯ [illegible]ಗುವುದೆಂದು ಆಕಾಶವಚನವಾಗುವುದು. ಆದರೂ ತಂದೆಯ ಅಗಲಿಕೆಯನ್ನು ಸಹಿಸದ ಅರಸು ತಂದೆಯನ್ನೂ, ಜಿನನನ್ನೂ ಕಂಡಲ್ಲದೆ ಆಹಾರತೆಗೆದುಕೊಳ್ಳುವುದಿಲ್ಲ

ವೆಂದು ಪ್ರತಿಜ್ಞೆಮಾಡಿ ಸೈನ್ಯದೊಡನೆ ದೇವಾಚಳಪ್ರಸ್ಥದತ್ತ ನಡೆದನು. ಈ ವಿಷಯ ವನ್ನು ತಿಳಿದ ದೇವೇಂದ್ರನು ಐಂದ್ರಜಾಲಿಕ ವಿದ್ಯೆಯಿಂದ ಅರ್ಹದ್ದಾಸನನ್ನೂ, ಜಿನನಿರುವ ಸಭಾದೃಶ್ಯವನ್ನೂ ನಿರ್ಮಿಸಿ ತೋರಿಸಿದನು. ಅಪರಾಜಿತನು ಆ ರೂಪನ್ನೆ ಲೆಪ್ಪದಿಂದ ಮಾಡಿಸುವ ಯೋಚನೆಯಿಂದ ಹಿಂದಿರುಗಿ ಸುಖವಾಗಿದ್ದನು.

ಒಂದುದಿನ ಅಪರಾಜಿತನು ಪ್ರೀತಿಮತಿಯೊಡನೆ ಬಸದಿಗೆ ಹೋಗಿ ನಮಸ್ಕರಿಸು ತ್ತಿರಲು ಆಕಾಶಮಾರ್ಗದಿಂದ ಇಬ್ಬರು ಚಾರಣರು ಇಳಿದು ಬಂದರು. ಅವರನ್ನು ಅಪರಾಜಿತನು ಎದುರುಗೊಂಡು ಸತ್ಕರಿಸಲು, ಅವರು ಅಪರಾಜಿತನ ಜನ್ಮಾಂತರ ಕಥೆಯನ್ನು ಹೇಳಿದರು.

ಪುಷ್ಕರಾರ್ಧದ ಪಶ್ಚಿಮ ದಿಕ್ಕಿನಲ್ಲಿ ಅಪರ ವಿದೇಹವಿದ್ದಿತು. ಅಲ್ಲಿ ಐಶ್ವರ್ಯ ಭರಿತವಾದ ಗಂಧಿಲ ವಿಷಯವೆಂಬ ನಾಡಿನಲ್ಲಿ ಸೂರ್ಯಪ್ರಭವೆಂಬ ಪಟ್ಟಣವಿದ್ದಿತು. ಅದನ್ನು ಸೂಯಪ್ರಭರಾಜ ಆಳುತ್ತಿದ್ದನು. ಆತನ ಹೆಂಡತಿ ಧಾರಿಣಿ. ಇವರಿಗೆ ಚಿಂತಾ ಗತಿಯೆಂಬ ಮಗ ಹುಟ್ಟಿದನು. ರಾಗಕ್ಕೆ ಭೋಗ ಉಪಭೋಗಗಳು ಹುಟ್ಟುವಂತೆ ಚಿಂತಾಗತಿಗೆ ಮನೋಗತಿ, ಚಪಳಗತಿಯರೆಂಬ ತಮ್ಮಂದಿರಾದರು. ಚಿಂತಾಗತಿಯು ತಮ್ಮಂದಿರೊಡಗೂಡಿ ರಾಜ್ಯಭಾರ ಮಾಡುತ್ತಿದ್ದನು.

ಅತ್ತ ಅರಿಂದಮ ಪುರದರಸು ಅರಿಂಜಯ ಖೇಚರ ಮತ್ತು ಆತನ ಪತ್ನಿ ಅಜಿತ ಸೇನಾದೇವಿಗೆ ವಿಳಾಸವತಿಯೆಂಬ ಮಗಳು ಹುಟ್ಟಿದಳು.

ಅರಿಂಜಯನು ಮಗಳಿಗೆ ಸ್ವಯಂವರವನ್ನೇರ್ಪಡಿಸಿದನು. ಈಕೆಯ ಸೌಂದರ್ಯಕ್ಕೆ ಮಾರುಹೋಗಿದ್ದ ಹಲವರು ಖೇಚರರು ನೆರೆದರು. ಚಿಂತಾಗತಿಯೂ ತಮ್ಮಂದಿರೊಡನೆ ಬಂದನು. ಗತಿ ವಿದ್ಯೆಯಲ್ಲಿ ವಿಳಾಸವತಿಯನ್ನು ಮೀರಿಸಿ ಬರುವ ಪುರುಷನಿಗೆ ಆಕೆಯು ಮಾಲೆಯನ್ನು ಹಾಕುವಳೆಂದು ಹೇಳಲು, ಚಿಂತಾಗತಿಯು ವಿಳಾಸವತಿ ಯನ್ನು ಗತಿವಿದ್ಯೆಯಲ್ಲಿ ಸೋಲಿಸಿದನು. ವಿಳಾಸವತಿಯು ಸೋತು ಸಿಗ್ಗಾಗಿ ಚಿಂತಾ ಗತಿಗೆ ಮಾಲೆಯನ್ನು ಹಾಕಲು ಹಾರವನ್ನು ಎತ್ತಿದಳು. ಆದರೆ ಚಿಂತಾ ಗತಿಯು ಹಿಮ್ಮೆಟ್ಟನಿಂತು 'ಇದು ನನ್ನ ತಮ್ಮಂದಿರ ಗೆಲವಲ್ಲದೆ ನನ್ನ ಗೆಲವಲ್ಲ. ಅವರಲ್ಲಿ ನಿನ್ನ ಮನಬಂದವರಿಗೆ ಮಾಲೆ ಹಾಕು' ಎನ್ನಲು, ವಿಳಾಸವತಿಯು, ನೀನು ನನಗೆ ದೂರಪ್ರಿಯನಾದೆ. ನಿನ್ನ ನೋಟಕ್ಕೆ ಗುಣಕ್ಕೆ ಸೋತ ನಾನು ನಿನ್ನನ್ನು ಮದುವೆ ಯಾಗದೆ ಹೆರವರನ್ನು ವರಿಸಿ ಕುಲಕ್ಕೆ ಅಪಕೀರ್ತಿ ತರಲೇ ?' ಎಂದವಳೇ ತಪಸ್ಸೆಂಬ ಮದುವಣಿಗನನ್ನು ವರಿಸಿದಳು. ಚಿಂತಾಗತಿಯೂ ತಮ್ಮಂದಿರ ಸಮೇತ ತಪಸ್ಸನ್ನು ಸ್ವೀಕರಿಸಿ, ಆಯುಸ್ಸನ್ನು ಕಳೆದು ಮಹೇಂದ್ರಕಲ್ಪದಲ್ಲಿ ಸಾಮಾನಿಕ ದೇವತೆಗಳಾದರು.

ಆ ಚಿಂತಾಗತಿಯೇ ಈಗ ಅಪರಾಜಿತ. ಚಾರಣರೇ ಚಪಲಗತಿ ಮತ್ತು ಮನೋ ಗತಿ. ಚಾರಣರು ಅಪರಾಜಿತನ ಪೂರ್ವ ವೃಂತ್ತಾಂತವನ್ನು ಕೇಳಿ ಆತನನ್ನು ನೋಡಲು ಬಂದಿದ್ದರು. ಇವರ ಅನ್ಯೋನ್ಯ ಪ್ರೀತಿಗೆ ಪೂರ್ವಜನ್ಮದ ಕಥೆಯನ್ನು ಇಂತೆಂದು ಹೇಳಿದರು.

ಮಗಧಮಂಡಲದಲ್ಲಿ ಒಂದು ಕಾಡಿದ್ದಿತು. ಅದು ಕ್ರೂರ ಮೃಗಗಳಿಂದ ತುಂಬಿದ್ದಿತು. ಅಲ್ಲಿ ಒಂದು ಬೇಡರ ಪಾಳಯವಿದ್ದಿತು. ಆ ಹಳ್ಳಿಗೆ ವಿಂಧ್ಯಕನೆಂಬುವನು ಅಧಿಪ. ಅತನು ಮಹಾಶೂರ ಮತ್ತು ಒಳ್ಳೆಯ ಬೇಟೆಗಾರ. ಅತನೊಂದು ದಿನ ತನ್ನ ಮನಃಪ್ರಿಯೆ ವಾಗುರೆಯೊಡನೆ ಬೇಟೆಗೆ ಹೋಗಿದ್ದಾಗ ದೂರದಲ್ಲಿ ಬೆಟ್ಟದ ಮೇಲೆ ಎರಡು ಗಿರಿಶಿಖರಗಳಂತಿದ್ದ ಮುನೀಂದ್ರರನ್ನು ಹೊಡೆದು ಕೆಡಹುವೆನೆಂದು ವಾಗುರೆಗೆ ಹೇಳಿದನು. ಆಗ ವಾಗುರೆಯು ಅವರು ಮುನಿಗಳೆಂದು ತಿಳಿದು ಗಂಡನನ್ನು ತಡೆದಳು. ವಿಂಧ್ಯಕನು ಬಾಣವನ್ನು ಎಸೆದು ಬೆಟ್ಟವನ್ನೇರಿ ಮುನೀಂದ್ರರಿಗೆ ನಮಸ್ಕರಿಸಿ ಧರ್ಮೋಪದೇಶದಿಂದ ವ್ರತವನ್ನು ಸ್ವೀಕರಿಸಿದನು. ವಾಗುರೆಯೂ ಮನವಿಲ್ಲದ ಮನದಿಂದ ಗಂಡನನ್ನೇ ಅನುಸರಿಸಿದಳು.

ಹೀಗೆ ಇಬ್ಬರೂ ಅಹಿಂಸಾ ವ್ರತಧಾರಿಗಳಾಗಿ ಹಿಂದಿರುಗಿ ಕಂದಮೂಲಗಳನ್ನು ತಿಂದು ಜೀವಿಸುತ್ತಿದ್ದರು. ಜೊತೆಯ ಬೇಡಿತಿಯರು ವಾಗುರೆಯನ್ನು ಕುರಿತು 'ನೀನುಂ ನಿನ್ನ ಗಂಡನುಂ ಪುಲಿಯಂತಿರ್ದು ನರಿಯಂತಿರೇಕಿರ್ದಪಿರ್' ಎನ್ನಲು, ಆಕೆಯು ಕಣ್ಣಲ್ಲಿ ನೀರು ತಂದು ಆದುದೆಲ್ಲವನ್ನೂ ವಿವರಿಸಿದಳು. ಆ ಬೇಡಿತಿಯರು ವಾಗುರೆಯನ್ನು ತಮ್ಮೊಡನೆ ಬಂದು ಬಾಯ್ಗೆ ಬಯಸಿದುದನ್ನುಂಡು ಪ್ರೈಗೆ ಬೆಚ್ಚಂತಿರೆಂದು ಹೇಳಲು, ಆಕೆಯು ತಲೆಯಲ್ಲಾಡಿಸಿ ಗಂಡನಾದುದನ್ನೇ ಆಗುವೆನೆಂದಳು.

ಒಂದು ದಿನ ವಿಂಧ್ಯಕನು ಹಣ್ಣುಗಳನ್ನು ಕೀಳಲು ಹೋಗಿ ಹಾವು ಕಡಿದು ಸತ್ತು ವೃಷಭದತ್ತನೆಂಬ ರಾಜನಿಗೆ ಇಭ್ಯಕೇತುವೆಂಬ ಮಗನಾಗಿ ಹುಟ್ಟಿದನು. ವನಚರಿಯಾದ ವಾಗುರೆಯೂ ತನ್ನ ಪತಿಯಗತಿಯೇ ತನಗೂ ಸರಿಯೆಂದು ಹಾವಿನ ಹಲ್ಲಿಗೆ ಕೈಕೊಟ್ಟು ಸತ್ತು ಆ ಪಟ್ಟಣದಲ್ಲಿ ಧೀವರನಾಗಿ ಹುಟ್ಟಿದಳು. ಸಕಲ ಸಂಪತ್ತಿನಿಂದ ಕೂಡಿದ ವೃಷಭದತ್ತನ ಮನೆಯಲ್ಲಿ ಇಭ್ಯಕೇತು ಸುಂದರನಾಗಿ ಬೆಳೆದು ಯೌವನವನ್ನು ತಾಳಿದನು. ರೂಪಿಗೆ ತಕ್ಕಂತೆ ನಾಟ್ಯಪ್ರಾವೀಣ್ಯತೆ, ಕಾವ್ಯಪಾಂಡಿತ್ಯ, ರಸಜ್ಞತೆ ಆತನಲ್ಲಿ [illegible] ತುಳುಕುತ್ತಿದ್ದುವು.

ಇತ್ತ ರಾಜಗೃಹನಗರದ ಪ್ರಭು ಜಿತಶತ್ರುವಿಗೆ ಆತನ ಅರಸಿ ಸುಪ್ರಭೆಯಲ್ಲಿ ಹುಟ್ಟಿದ ಕಮಲಪ್ರಭೆ ರೂಪಾತಿಶಯದಿಂದ ಮೆರೆಯುತ್ತಿದ್ದಳು. ಈಕೆಯ ಸ್ವಯಂವರ ನೇರ್ಪಟ್ಟಿತು. ಸ್ವಯಂವರಕ್ಕೆ ಇಭ್ಯಕೇತುವೂ ಬಂದನು. ಕಮಲಪ್ರಭೆಯ ಕೈಲಿದ್ದ ಮಾಲೆ ಇಭ್ಯಕೇತುವಿನ ಕೊರಳಿಗೇ ಬಿದ್ದಿತು.

[illegible] ರಾಜನ ಕಿರಿಯ ಹೆಂಡತಿ ವಸಂತಸೇನೆಗೆ ಮದನಸುಂದರಿಯೆಂಬ ಮಗ[illegible] ನೃತ್ಯ, ಸಂಗೀತ, ಸಾಹಿತ್ಯದಲ್ಲಿ ಅದ್ವಿತೀಯಳಾಗಿದ್ದುದನ್ನು ತಿ[illegible]ಗೆ ತಕ್ಕ ವರನೆಂದರೆ ಇಭ್ಯಕೇತುವೇ ಎಂದು ಬಗೆದು ಆತನಿಗೆ ಕೊಟ್ಟು [illegible] ಮಾಡಿದನು. ಅನಂತರ ಜಿತಶತ್ರುವು ಇಭ್ಯಕೇತುವಿಗೇ ರಾಜ್ಯಭಾರವನ್ನು [illegible] ತಪಸ್ಸಿಗೆ ನಡೆದನು. ಇಭ್ಯಕೇತುವಿನ ತಂದೆಯೂ ಮಗನಿಗೆ ಪಟ್ಟ

ಗಟ್ಟಿ ತಾನು ದೀಕ್ಷೆಯನ್ನು ಕೈಗೊಂಡನು. ಇಭ್ಯಕೇತುವು ಎರಡೂ ಐಶ್ವರ್ಯಕ್ಕೆ ಅಧಿಪತಿಯಾದನು.

ಒಂದು ದಿನ ಇಭ್ಯಕೇತುವು ಒಡ್ಡೋಲಗಗೊಟ್ಟಿರಲು ಒಬ್ಬ ಬೇಡನು ಆನೆಯ ಕುಂಭಸ್ಥಳದ ಮುತ್ತುಗಳನ್ನೂ, ಕಸ್ತೂರೀ ಮಿಗವನ್ನೂ, ಸಿಂಹದ ಮರಿಯನ್ನೂ ತಂದು ಅರಸನಿಗೆ ಕಾಣಿಕೆಯಾಗಿ ಕೊಡಲು, ಇಭ್ಯಕೇತುವಿಗೆ ಆತನ ಮೇಲೆ ಮೋಹ ಹುಟ್ಟಿ ಅವನನ್ನು ಸೇನಾಪತಿಯನ್ನಾಗಿ ಮಾಡಿದನು.

ಹೀಗೆ ಇಭ್ಯಕೇತುವು ಸೇನಾಪತಿ ಸಮೇತ ರಾಜ್ಯಭಾರಮಾಡುತ್ತಿರುವಲ್ಲಿ ಒಂದು ಸಲ ಮಂದರಸ್ಥ ಭಟ್ಟಾರಕರಲ್ಲಿ ಹೋಗಿ ಧರ್ಮವನ್ನು ಕೇಳಿ, ಆ ಬೇಡನಲ್ಲಿ ತನಗೆ ಅತ್ಯಧಿಕಮೋಹ ಹುಟ್ಟಲು ಕಾರಣವೇನೆಂದು ಕೇಳಲು, ಮುನಿಗಳು ಹಿಂದೆ ಇಭ್ಯ ಕೇತುವು ವಿಂಧ್ಯಕನಾಗಿದ್ದುದನ್ನೂ, ಆಗ ಆತನ ಹೆಂಡತಿಯಾಗಿದ್ದ ವಾಗುರೆಯೆಂಬು ವಳೇ ಈಗ ಬೇಡನಾಗಿರುವುದನ್ನೂ ತಿಳಿಸಿದರು. ಇದರಿಂದ ಇಭ್ಯಕೇತುವಿಗೆ ಪೂರ್ವ ಜನ್ಮ ಸ್ಮರಣೆಯುಂಟಾಗಿ ತನ್ನ ಮಗನಿಗೆ ರಾಜ್ಯವನ್ನು ವಹಿಸಿ ತಾನು ತಪಸ್ಸಿಗೆ ನಡೆದನು. ಕಮಲಪ್ರಭೆಯೂ ಗಂಡನನ್ನೇ ಅನುಸರಿಸಿದಳು. ಸೇನಾಪತಿಯಾಗಿದ್ದ ಧೀವರನೂ ವ್ರತವನ್ನು ಕೈಗೊಂಡನು.

ಇಭ್ಯಕೇತು ಮನ್ಮಥನಿಗೆ ಧೂಮಕೇತುವಾಗಿ ತಪಸ್ಸನ್ನಾಚರಿಸಿ ಸೌಧರ್ಮ ಕಲ್ಪದಲ್ಲಿ ಶ್ರೀ ನಿಳಯ ವಿಮಾನದಲ್ಲಿ ಶ್ರೀದೇವನೆಂಬ ದೇವನಾದನು. ಕಮಲಪ್ರಭೆ ಸುಪ್ರಭವಿಮಾನದಲ್ಲಿ ವಿಮಲಪ್ರಭದೇವನಾದನು. ಧೀವರನು ವಿದ್ಯುತ್ಪ್ರಭ ವಿಮಾನ ದಲ್ಲಿ ಶ್ರುತಪ್ರಭಾಂಕದೇವನಾದನು. ಅಲ್ಲಿಂದ ಮೂವರೂ ಚಿಂತಾಗತಿ, ಮನೋಗತಿ ಮತ್ತು ಚಪಲಗತಿಯಾಗಿ ಹುಟ್ಟಿದರು.

ಹೀಗೆ ಚಾರಣರು ಹೇಳಿದ ಪೂರ್ವವೃತ್ತಾಂತವನ್ನು ಕೇಳಿದ ಅಪರಾಜಿತನು ತಪಸ್ಸನ್ನು ಸ್ವೀಕರಿಸಿ, ದೇಹ ತ್ಯಾಗಮಾಡಿ ಇಪ್ಪತ್ತೆರಡು ಸಾಗರ ಆಯುಷ್ಯದಿಂದ ಕೂಡಿದ ಅಚ್ಯುತಸಾಂತಕರ ವಿಮಾನದಲ್ಲಿ ಅಚ್ಯುತೇಂದ್ರನಾಗಿ ಹುಟ್ಟಿದನು. ಅಲ್ಲಿಯೂ ಅವನ ಭೋಗತೃಷ್ಣೆ ಆರದಾಯಿತು.

ಜಂಬೂದ್ವೀಪದ ಭರತ ಕ್ಷೇತ್ರದಲ್ಲಿ ಕುರುಜಾಂಗಣ ದೇಶದಲ್ಲಿ ಹಸ್ತಿನಾ ಪುರವೆಂಬ ಪಟ್ಟಣವಿದ್ದಿತು. ಸುಖಸಂಪತ್ತಿನ ಆಗರವಾದ ಆ ಪುರದ ಅಧಿಪತಿ ಶ್ರೀ ಚಂದ್ರರಾಜ. ಆತನ ರಾಣಿ ಶ್ರೀಮತಿ. ಇವರಿಗೆ ಸುಪ್ರತಿಷ್ಠನೆಂಬ ಮಗನು ಹುಟ್ಟಿದನು. ಈತನಿಗೆ ಸುನಂದಾ ದೇವಿಯನ್ನು ಕೊಟ್ಟು ಮದುವೆಮಾಡಿದರು. ಇವರಿಗೆ ಸುದೃಷ್ಟನೆಂಬ ಮಗ ಹುಟ್ಟಿದನು. ರಾಜಸುಖದಿಂದ ಓಲಾಡುತ್ತಿದ್ದ ಸುಪ್ರತಿಷ್ಠನು ಒಂದುದಿನ ಕರುಮಾಡದಲ್ಲಿ ಮಲಗಿರುವಾಗ ಉಲ್ಕಾಪಾತವಾದುದನ್ನು ಕಂಡು, ರಾಜ್ಯವನ್ನು ತ್ಯಜಿಸಿ ತಪಸ್ಸನ್ನು ಮಾಡಿ ಉತ್ತರವಿಜಯಂತಿ ವಿಮಾನದಲ್ಲಿ ಅಹಮಿಂದ್ರನಾಗಿ ಹುಟ್ಟಿದನು. ಈತನೇ ಮುಂದೆ ಹರಿವಂಶದ ಸಮುದ್ರ ವಿಜಯನಿಗೆ ಮಗನಾಗಿ ನೇಮಿನಾಥನಾಗಿ ಜನಿಸುವನು,

ಭರತ ಕ್ಷೇತ್ರದಲ್ಲಿ ಶೌರ್ಯಪುರವೆಂಬ ಪಟ್ಟಣವಿದ್ದಿತು. ಅದನ್ನು ಶೂರಸೇನನು ಆಳುತ್ತಿದ್ದನು. ಆತನ ಪತ್ನಿ ಧಾರಿಣಿ. ಇವರಿಗೆ ಅಂಧಕವೃಷ್ಣಿ, ನರಪತಿವೃಷ್ಣಿ ಎಂಬಿಬ್ಬರು ಮಕ್ಕಳಾದರು. ಅಂಧಕವೃಷ್ಣಿಗೆ ಸುಭದ್ರೆಯೂ, ನರಪತಿವೃಷ್ಣಿಗೆ ಪದ್ಮಾವತಿಯೂ ಹೆಂಡತಿಯರಾದರು. ಅಂಧಕವೃಷ್ಣಿಗೆ ಸಮುದ್ರ ವಿಜಯನೇ ಆದಿಯಾಗಿ ಹತ್ತುಜನ ಗಂಡುಮಕ್ಕಳೂ, ಕೊಂತಿ ಮಾದ್ರಿಯರೆಂಬ ಹೆಣ್ಣುಮಕ್ಕಳೂ ಆದರು. ಗಂಡುಮಕ್ಕಳಲ್ಲಿ ವಸುದೇವನೇ ಅತ್ಯಂತ ಕಿರಿಯವನು. ನರಪತಿವೃಷ್ಣಿಗೆ ಉಗ್ರಸೇನ, ಮಹಾಸೇನರೆಂಬ ಗಂಡುಮಕ್ಕಳೂ, ಗಾಂಧಾರಿಯೆಂಬ ಹೆಣ್ಣುಮಗಳೂ ಹುಟ್ಟಿದರು.

ಇತ್ತ ಹಸ್ತಿನಾವತಿಯಲ್ಲಿ ಕುರುವಂಶದಲ್ಲಿ ಪ್ರಸಿದ್ಧನಾದ ಪರಾಶರನಿಗೆ ಸತ್ಯವತಿಯಲ್ಲಿ ಯಶೋವಲ್ಲಭನಾದ ವ್ಯಾಸನು ಹುಟ್ಟಿದನು. ವ್ಯಾಸ ಮತ್ತು ಸುಭದ್ರೆಯರಿಗೆ ಧೃತರಾಷ್ಟ್ರ, ಪಾಂಡು, ವಿದುರರೆಂಬ ಮಕ್ಕಳಾದರು. ಪಾಂಡುವಿಗೆ ಕುಂತಿಯಲ್ಲಿ ಮೋಹಹುಟ್ಟಿ ವಿದ್ಯಾಧರನೊಬ್ಬನ ಕಾಮಮುದ್ರಿಕೆಯಿಂದ 'ಗಂಡುನೊಣಂ ಅಡ್ಡಪಾರವಂತಿ'ಟ್ಟದ್ದ ಕುಂತಿಯ ಅಂತಃಪುರವನ್ನು ಪ್ರವೇಶಿಸಿ ಆಕೆಯೊಡನೆ ಕೂಡಿದನು. ಕುಂತಿಗೆ ಗರ್ಭೋದಯವಾಗಿ ಮಗು ಹುಟ್ಟಿತು. ಆ ಮಗುವನ್ನು ಹೊನ್ನಪೆಟ್ಟಿಗೆಯಲ್ಲಿರಿಸಿ ಯಮುನಾ ನದಿಯಲ್ಲಿ ಬಿಟ್ಟಳು. ಆದಿತ್ಯನೆಂಬ ಅರಸು ತನ್ನ ಉಪ್ಪರಿಗೆಯ ಮೇಲೆ ನಿಂತು ತೇಲಿಬರುತ್ತಿದ್ದ ಪೆಟ್ಟಿಗೆಯನ್ನು ತರಿಸಿ ತೆಗೆದುನೋಡಲು ಹೊಳೆಯುತ್ತಿದ್ದ ಮಗುವನ್ನು ನೋಡಿ ಸಂತೋಷಗೊಂಡು ರಾಣಿಯರನ್ನು ಕರೆಸಿ ಕಿವಿವಿಡಿದು ರಾಧೆಯ ಕೈಗೆ ಕೊಡಲು ಕರ್ಣ, ರಾಧೇಯ ಎಂಬ ಹೆಸರು ಬಂದುವು.

ಒಮ್ಮೆ ಸಾಹಸದಿಂದ ಪಾಂಡುವಿನ ಸಹವಾಸವನ್ನು ಪಡೆದ ಕುಂತಿಯ ವಿರಹತಾಪ ಅತಿಯಾದುದನ್ನು ತಿಳಿದ ಅಂಧಕವೃಷ್ಣಿಯು ಪಾಂಡುವಿಗೆ ಕುಂತಿಮಾದ್ರಿಯರನ್ನು ಕೊಟ್ಟು ಮದುವೆಮಾಡಿದನು. ಇವರಿಗೆ ಧರ್ಮ, ಭೀಮ, ಅರ್ಜುನ, ನಕುಲ, ಸಹದೇವರು ಹುಟ್ಟಿದರು. ಪರಾಕ್ರಮಶಾಲಿಯಾದ ಧೃತರಾಷ್ಟ್ರನಿಗೆ ನರಪತಿವೃಷ್ಣಿಯು ತನ್ನ ಮಗಳು ಗಾಂಧಾರಿಯನ್ನು ಕೊಟ್ಟು ಮದುವೆಮಾಡಿದನು. ಇವರಿಗೆ ದುರ್ಯೋಧನ, ದುಶ್ಶಾಸನ ಮೊದಲಾದ ನೂರ್ವರು ಮಕ್ಕಳಾದರು. ಹೀಗೆ ಹರಿವಂಶ, ಕುರುವಂಶಗಳು ಎರಡು ಸಮುದ್ರಗಳ ಸಂಗಮದಂತೆ ಕೂಡಿದುವು.

ಹೀಗಿರುವಲ್ಲಿ ಒಂದಾನೊಂದು ದಿನ ಗಂಧಮಾದನ ಪರ್ವತದಲ್ಲಿದ್ದ ಸುಪ್ರತಿಷ್ಠರೆಂಬ ಯತಿಪತಿಯನ್ನು ನೋಡಿ ಶೂರವೀರನು ವೈರಾಗ್ಯಪರನಾಗಿ ರಾಜ್ಯವನ್ನು ತ್ಯಜಿಸಿ ದೀಕ್ಷೆವಹಿಸಿದನು. ಸುಪ್ರತಿಷ್ಠನಿಗೆ ಸುದರ್ಶನನೆಂಬುವನು ಅತಿಯಾದ ಹಿಂಸೆಯನ್ನು ಕೊಟ್ಟುದನ್ನು ಕಂಡ ಶೂರವೀರನು, ಸುದರ್ಶನನು ಹಾಗೆ ಉಪದ್ರವವನ್ನು ಕೊಡಲು ಕಾರಣವೇನೆಂದು ಸುಪ್ರತಿಷ್ಠರನ್ನು ಕೇಳಲು, ಆತನು ಪೂರ್ವಭವದ ಕಥೆಯನ್ನು ಹೀಗೆ ಹೇಳಿದನು.

ಭರತಕ್ಷೇತ್ರದ ಚಂಪಾಪುರದಲ್ಲಿ ಸೂರದತ್ತ, ಸುದತ್ತ ಎಂಬಿಬ್ಬರು ವರ್ತಕರಿದ್ದರು. ಇವರಿಬ್ಬರು ವ್ಯಾಪಾರಕ್ಕೆ ಹೋಗಿ ಅಪಾರ ಹಣವನ್ನು ಸಂಪಾದಿಸಿ ಬಂದು ಸುಂಕವನ್ನು ಕೊಡಬೇಕಲ್ಲಾ ಎಂಬ ವ್ಯಥೆಯಿಂದ ಹಣವನ್ನು ಒಂದು ಪೊದರಿನಲ್ಲಿ ಬಚ್ಚಿಟ್ಟು ಹೋಗುವರು. ಅದು ಬೇರುಬಿಕ್ಕೆಗಳನ್ನು ಅರಸುತ್ತ ಬರುತ್ತಿದ್ದ ಶೌಂಡಿಕನೆಂಬ ಕಳ್ಳಸಿಗನಿಗೆ ದೊರೆಯಿತು. ಹರದರು ಮತ್ತೆ ಬಂದು ನೋಡುವಲ್ಲಿ ಹಣವಿಲ್ಲದುದನ್ನು ಕಂಡು ಒಬ್ಬರನ್ನೊಬ್ಬರು ಅನುಮಾನಿಸಿ ಇಬ್ಬರೂ ಹೊಡೆದಾಡಿ ಸತ್ತು ನರಕಕ್ಕೆ ಹೋಗುವರು. ಅನಂತರ ಇವರು ಟಗರುಗಳಾಗಿ, ಗೂಳಿಗಳಾಗಿ ಹುಟ್ಟಿ, ಜನ್ಮಾಂತರ ವೈರದಿಂದ ಹೋರಾಡಿ ಸತ್ತು ಕೋಡಗಗಳಾಗಿ ಜನ್ಮತಳೆದು ಅಲ್ಲಿಯೂ ಹೊಡೆದಾಡಿ ಒಂದು ಸಾಯುತ್ತದೆ, ಮತ್ತೊಂದು ಸಾಯುವ ಸ್ಥಿತಿಯಲ್ಲಿರುತ್ತದೆ. ಆಗ ಆಕಾಶದಿಂದ ಚಾರಣರು ಇಳಿದು ಬಂದು ಧರ್ಮೋಪದೇಶಮಾಡಲು, ಆ ಕಪಿಯು ಶುಭಸಂಸ್ಕಾರದಿಂದ ಸತ್ತು ಸೌಧರ್ಮಕಲ್ಪತರುವಿನಲ್ಲಿ ಚಿತ್ರಾಂಗದ ದೇವನಾಗಿ ಹುಟ್ಟಿ ಅಲ್ಲಿಂದ ಸುರಮ್ಯದೇಶದ ಪೌದನ ಪುರದರಸನಿಗೆ ಸುಪ್ರತಿಷ್ಠನೆಂಬ ಮಗನಾಗಿ ಜನಿಸುವನು.

ಇತ್ತ ಕಪಿಯಾಗಿ ಸತ್ತ ಸುದತ್ತನು ಸಿಂಧುತೀರದ ರುಸಿಪಳ್ಳಿಯಲ್ಲಿ ಮೃಗಾಯಣನೆಂಬ ಮುನಿಗೂ, ವಿಶಾಳೆಯೆಂಬ ಗೊರವತಿಗೂ ಗೌತಮನಾಗಿ ಹುಟ್ಟಿ, ಅಲ್ಲಿಂದ ಸುದರ್ಶದೇವನಾಗಿ ಉಪಸರ್ಗಮಾಡಿದನೆಂದು ಹೇಳಿದರು. ಇದನ್ನು ಕೇಳಿದ ಸುದರ್ಶನದೇವನು ಸದ್ದರ್ಶನವನ್ನು ಕೈಗೊಂಡನು. ಅಂಧಕವೃಷ್ಣಿಯೂ ವಿರಕ್ತನಾಗಿ ತಪಸ್ಸುಮಾಡಿ ಮೋಕ್ಷವನ್ನೈದಿದನು.

ಸಮುದ್ರ ವಿಜಯನೇ ಮೊದಲಾದ ಎಂಟುಜನ ಅಣ್ಣತಮ್ಮಂದಿರು ರಾಜ್ಯವಾಳುತ್ತಿರಲು, ಕಿರಿಯ ತಮ್ಮನಾದ ವಸುದೇವನು ತನ್ನ ರೂಪು ಮತ್ತು ಯೌವನದಿಂದ ಭೂಮಿಗೆ ಕಣ್ಣು ಮುಳ್ಳಾಗಿದ್ದನು. ಈತನ ವೀಣಾವಾದನಕ್ಕೆ ಮಾರುಹೋದ ಅಬಲೆಯರ ಸಂಖ್ಯೆ ಲಕ್ಷಕೋಟಿಯನ್ನು ಮೀರಿದ್ದಿತು. ಪುರಜನರು ಸಮುದ್ರವಿಜಯನಲ್ಲಿ ದೂರುತರಲು, ಆತನು ಉಪಾಯದಿಂದ ವಸುದೇವನನ್ನು ಅರಮನೆಯ ಒಳಗೇ ಇರುವಂತೆ ಮಾಡುವನು. ಆದರೆ, ಅಣ್ಣನ ಈ ಉಪಾಯವನ್ನು ಚೇಟಿಕೆಯಿಂದ ತಿಳಿದ ವಸುದೇವನು ಯಾರೂ ತಿಳಿಯದಂತೆ ಅರಮನೆಯಿಂದ ಹೊರಟು ಶ್ಮಶಾನಕ್ಕೆ ಬಂದು, ಅಲ್ಲಿ ತನ್ನ ಬಟ್ಟೆಯನ್ನು ತೆಗೆದಿಟ್ಟು ಚಿತೆಗೆ ಪ್ರವೇಶಿಸಿದವನಂತೆ ಹೆಜ್ಜೆಯ ಗುರುತುಗಳನ್ನು ಮಾಡಿ, ಅಲ್ಲಿಂದ ಹೊರಟು ಹೋಗುವನು.

ಹೀಗೆ ಶ್ಮಶಾನದಿಂದ ಹೊರಟ ವಸುದೇವನು ವಿಜಯಖೇಟ ನಗರಕ್ಕೆ ಬಂದು ಮಾವಿನ ಮರದಡಿಯಲ್ಲಿ ಮಲಗಿರಲು ಲಕ್ಷ್ಮಿಯಂತಿದ್ದ ಕನ್ಯೆಯು ತನ್ನ ಕಾಲೊತ್ತುತ್ತಿದ್ದಳು. ಇವಳೇ ಮಗದಾಧಿಪತಿಯ ಮಗಳು ಶ್ಯಾಮಲೆ. ಈಕೆಯನ್ನು ವಸುದೇವನು ಮದುವೆಯಾಗಿ ಸುಖಸಂತೋಷದಿಂದ ಕೆಲವು ದಿನಗಳನ್ನು ಕಳೆಯುವನು. ಒಂದು ದಿನ ಶ್ಯಾಮಲೆಯು ವಿಷಮ ನೃತ್ಯಮಾಡಿ ಆಯಾಸದಿಂದ ಮಲಗಿರಲು ವಸುದೇವನು

ಮೆಲ್ಲನೆದ್ದು ಹೊರಹೊರಟು ಒಂದು ಕಾಡನ್ನು ಸೇರಿ, ಅಲ್ಲಿ ಬರುತ್ತಿದ್ದ ಮದಗಜವನ್ನೇರಿ ಆ ಪುರದರಸು ಅಶನಿವೇಗನ ಮಗಳಾದ ಶಾಲ್ಮಲಿದತ್ತೆಯನ್ನು ಮದುವೆಯಾಗುವನು. ಒಂದು ದಿನ ಪತಿಪತ್ನಿಯರು ವನಜಲಕೇಳಿಯಾಡಿ ಬಳಲಿ ದೇವದಂಪತಿಗಳಂತೆ ಸೌಧಾಗ್ರದಲ್ಲಿ ಪವಡಿಸಿರಲು, ಪೂರ್ವಭವ ವೈರದಿಂದ ಒಬ್ಬ ಖಚರನು ಭುಜಂಗಿಯ ಆಲಿಂಗನವನ್ನು ಬಿಡಿಸಿ ಪ್ರೀಗಂಧವನ್ನು ಕದ್ದೊಯ್ಯುವಂತೆ ಶಾಲ್ಮಲಿದತ್ತೆಯ ತೋಳ್ತೆಕ್ಕೆಯನ್ನು ತಪ್ಪಿಸಿ ವಸುದೇವನನ್ನು ಕೊಂಡೊಯ್ಯುತ್ತಿದ್ದನು. ಎಚ್ಚರಗೊಂಡ ಶಾಲ್ಮಲಿದತ್ತೆಯು ಗಂಡುದೆಯುಟ್ಟು ಕತ್ತಿಯನ್ನು ಹಿಡಿದು ಆಕಾಶಕ್ಕೆ ಹಾರಿ ಖಚರನ ಬೆನ್ನಟ್ಟಿದಳು. ಆಕೆಯ ಗರ್ಜನೆಗೆ ಹೆದರಿದ ಖಚರನು ವಸುದೇವನನ್ನು ಬೀಸಾಡಿ ಹೊರಟುಹೋದನು. ಶಾಲ್ಮಲಿದತ್ತೆಯು ಗಂಡನನ್ನು ಅಂತು ಹಿಡಿದು ಬರುತ್ತಿರಲು, ಒಂದು ದಿವ್ಯಧ್ವನಿಯ ಆದೇಶದಂತ ಪತಿಯನ್ನು ಪರ್ಣಲಘು ವಿದ್ಯೆಯ ಸಹಾಯದಿಂದ ಚಂಪಾಪುರದ ಹೊರಭಾಗದ ಉದ್ಯಾನದಲ್ಲಿಳಿಸಿ ಹೊರಟುಹೋದಳು.

ವಸುದೇವನು ಆ ಚಂಪಾಪುರದರಸನ ಕೊಳ್‌ಮಗಳಾದ ಗಂಧರ್ವದತ್ತೆಯನ್ನು ವೀಣಾವಾದನದಿಂದ ಗೆಲ್ಲಲ್ಲು ಸ್ವಯಂವರ ಮಂಟಪವನ್ನು ಸೇರಿದನು. ಈತನು ತನಗೆ ತಂದುಕೊಟ್ಟ ವೀಣೆಗಳಲ್ಲೆಲ್ಲವೂ ದೋಷವನ್ನು ಕಂಡುಹಿಡಿದನು. ಕೊನೆಗೆ ಸರಿಯಾದ ವೀಣೆಯಾವುದೆಂದು ಕೇಳಲು, ವಸುದೇವನು ಬಲಿಚಕ್ರವರ್ತಿ ಮತ್ತು ವಾಮನರ ಕಥೆಯನ್ನು ಹೇಳಿ, ಆಗ ರಾಗಾಲಾಪಕ್ಕೆಂದು ತಂದ ವೀಣೆಯ ವಂಶದ ವೀಣೆಯನ್ನು ತನ್ನಿರೆನ್ನಲು, ವಸುದೇವನ ವೀಣಾ ವೈದಗ್ಧತೆಗೆ ಮೆಚ್ಚಿದ ಗಂಧರ್ವದತ್ತೆಯು ಆತನಿಗೆ ಮಾಲೆಯನ್ನು ಹಾಕಿದಳು.

ಇಲ್ಲಿ ವಸುದೇವನು ಕೆಲವು ದಿನ ಸುಖವಾಗಿದ್ದು ಭಟರಿಬ್ಬರಿಂದ ರೋಹಿಣಿಯೆಂಬುವಳ ಸ್ವಯಂವರ ವಾರ್ತೆಯನ್ನು ಕೇಳಿ, ಮಾಗಧಿಗೆ ಹೋಗಿ, ಮಧುರಾತಿಮಧುರವೂ, ಚಿತ್ರಾತಿಚಿತ್ರವೂ ಆದ ವಾದನದಿಂದ ಆಕೆಯನ್ನು ಗೆದ್ದು, ಅಸೂಯೆಯಿಂದ ಮೇಲೇರಿಬಂದ ರಾಜರನ್ನು ಹತ್ತಿಕ್ಕಿ ರೋಹಿಣಿ ಮತ್ತು ಹದಿನಾರು ಸಾವಿರ ಕನ್ಯಾರತ್ನಗಳನ್ನು ಸ್ವೀಕರಿಸಿ ಸುಖವಾಗಿದ್ದನು. ರೋಹಿಣಿ ಮತ್ತು ವಸುದೇವರಿಗೆ ಬಲರಾಮನು ಹುಟ್ಟಿದನು.

ರೋಹಿಣಿಯ ಸ್ವಯಂವರ ಸಮಯದಲ್ಲಿ ತೋರಿಸಿದ ವಸುದೇವನ ಬಿಲ್ಜಾಣ್ಮೆಗೆ ಮೆಚ್ಚಿದ ಹಲವರು ಬಂದು ಈತನ ಶಿಷ್ಯರಾಗಿ ಬಿಲ್ವಿದ್ಯೆಯನ್ನು ಕಲಿತರು. ಹೀಗೆ ಬಂದವರಲ್ಲಿ ಕಂಸನೂ ಒಬ್ಬನಾಗಿದ್ದನು.

ಪೌದನಪುರದರಸು ಸಿಂಹರಥನೆಂಬುವನು ಬಹಳ ಪರಾಕ್ರಮಿಯಾಗಿದ್ದನು. ಈತನನ್ನು ಗೆಲ್ಲಲು ಹೋದ ಜರಾಸಂಧನು ಸೋತು ಹಿಂದಿರುಗಿ ಆ ಸಿಂಹರಥರನನ್ನು ಹಿಡಿದುತಂದವರಿಗೆ ಮಗಳನ್ನೂ, ಬೇಡಿದ ನಾಡನ್ನೂ ಕೊಡುವೆನೆಂದು ಘೋಷಣೆ ಮಾಡಿಸಿದನು. ಇದನ್ನು ಕೇಳಿದ ಕಂಸನು ವಸುದೇವನಿಗೆ ತಿಳಿಸಲು, ವಸುದೇವನು ಸಿಂಹರಥನನ್ನು ಹಿಡಿದುತರಲು ಹೊರಟನು. ಆದರೆ, ಕಂಸನು ಆತನನ್ನು ತಡೆದು

ತಾನೇ ಹೋಗಿ ಸಿಂಹರಥನನ್ನು ಜರಾಸಂಧನಿಗೊಪ್ಪಿಸಲು, ಜರಾಸಂಧನು ವಸುದೇವನನ್ನು ಸನ್ಮಾನಿಸಿ, ಇಷ್ಟಬಂದುದನ್ನು ಬೇಡಿಕೊಳ್ಳೆಂದನು. ವಸುದೇವನು ಈಕಾರ್ಯ ತನ್ನದಲ್ಲವೆಂದು ಕಂಸನನ್ನು ತೋರಿಸಿದನು. ಜರಾಸಂಧನು ಈತನು ಕೌಶಾಂಬಿಯ ಕಳ್ಳವತಿ ಮಂಡೋದರಿಯ ಮಗನೆಂದು ಕೇಳಿ, ಮಾಂಗುಲಿಗರ ವೇಷದಲ್ಲಿರುವ ಕಂಸನು ಉತ್ತಮವಂಶದ ರಾಜಕುಮಾರನಿರಬೇಕೆಂದು ಬಗೆದು ಅವನ ತಾಯನ್ನು ಕರೆಸಿದನು. ಆಕೆಯು ಇವನು ತನ್ನ ಮಗನಲ್ಲವೆಂದೂ ಕಾಳಿಂದಿಯಲ್ಲಿ ಸಿಕ್ಕಿದ ಮಗುವೆಂದೂ ಹೇಳಿದಳು. ಇದರಿಂದ ಸಂತೋಷಗೊಂಡ ಜರಾಸಂಧನು ತನ್ನ ಮಗಳು ಜೀವಂಜಸೆಯನ್ನೂ, ಬೇಡಿದ ನಾಡನ್ನೂ ಕೊಟ್ಟು ಕಳುಹಿದನು. ಕಂಸನು ಮಧುರಾಪುರಕ್ಕೆ ಹೋಗಿ ತನ್ನ ತಂದೆ ಉಗ್ರಸೇನನನ್ನು ಸೆರೆಯಲ್ಲಿಟ್ಟು, ವಸುದೇವನಿಗೆ ರಾಜ್ಯವನ್ನು ವಹಿಸಿ, ದೇವಕಿಯನ್ನು ಮದುವೆಮಾಡಿದನು.

ವಸುದೇವನು ದೇವಕಿಯೊಡನೆ ಸುಖವಾಗಿ ಕಾಲಕಳೆಯುತ್ತಿರಲು, ಒಂದುದಿನ ಅತಿಮುಕ್ತಕರೆಂಬ ಮುನಿಗಳು ಚರಿಗೆಗೆ ಬಂದರು. ಕಂಸನ ಹೆಂಡತಿ ಜೀವಂಜಸೆಯು ಅವರನ್ನು ಅವಮಾನಪಡಿಸಲು, ಅವರು 'ದೇವಕಿಯ ಗರ್ಭವೇ ನಿಮಗೆ ಮೃತ್ಯುವಾಗಲಿ' ಎಂದು ಶಾಪವಿತ್ತರು.

ಇದನ್ನು ತಿಳಿದ ಕಂಸನು ಭಯಸ್ಥನಾಗಿ ವಸುದೇವ ದೇವಕಿಯರನ್ನು ಸೆರೆಯಲ್ಲಿಟ್ಟು, ಆಕೆಯಲ್ಲಿ ಹುಟ್ಟುವ ಮಕ್ಕಳನ್ನು ಕೊಲ್ಲುವ ಏರ್ಪಾಟುಮಾಡಿದನು. ದೇವಕಿಯು ಹೆತ್ತ ಮಕ್ಕಳನ್ನು ನೈಗಮದೇವನು ಕೊಂಡೊಯ್ದು ಮಾಯಾಶಿಶುಗಳನ್ನು ಇಟ್ಟನು. ಕಂಸನು ಆ ಮಾಯಾಶಿಶುಗಳನ್ನು ಕೊಂದು ಸಂತಸದಿಂದಿದ್ದನು. ಕೊನೆಗೆ ಭಾದ್ರಪದದ ಅಷ್ಟಮಿಯ ನಡುರಾತ್ರಿಯಲ್ಲಿ ದೇವಕಿಯು ಕೃಷ್ಣನಿಗೆ ಜನ್ಮವಿತ್ತಳು.

ಹುಟ್ಟಿದ ಮಗುವನ್ನು ವಸುದೇವನು ತೆಗೆದುಕೊಂಡು ಹೋಗಿ ಮಧುರಾಪುರದ ಗೊಲ್ಲರಹಳ್ಳಿಯ ನಂದನಿಗೆ ಕೊಟ್ಟು, ಆತನಿಗೆ ಬೇಡವಾದ ಹೆಣ್ಣು ಮಗುವನ್ನು ತಂದು ದೇವಕಿಯ ಬಳಿ ಮಲಗಿಸಿದನು. ಕಂಸನು ಬಂದು ನೋಡಿ ಹೆಣ್ಣು ಮಗುವನ್ನು ಕೊಲ್ಲದೆ ಮೂಗನೊತ್ತಿ ಹೋದನು. ಆಕೆಯು ವಿಂಧ್ಯವಾಸಿನಿಯೆಂಬ ದೇವತೆಯಾದಳು.

ನಂದನ ಮನೆಯಲ್ಲಿ ಕೃಷ್ಣನು ಬೆಳೆಯುತ್ತಿದ್ದುದನ್ನು ತಿಳಿದ ಕಂಸನು ಆತನ ನಾಶಕ್ಕೆ ಉಪಾಯವನ್ನು ಯೋಚಿಸುತ್ತಿರುವಲ್ಲಿ, ಪೂರ್ವಭವದ ಎಂಟುಜನ ದೇವತೆಗಳು ಬಂದು ಮಾಡಬೇಕಾಗಿರುವ ಕೆಲಸವನ್ನು ಕೇಳಿದರು. ಕಂಸನು ಅವರಿಗೆ ಕೃಷ್ಣನನ್ನು ಕೊಲ್ಲುವಂತೆ ಹೇಳಿದನು. ಆ ದೇವತೆಗಳು ಪೂತನಿಯಾಗಿ, ಕಾಕಾಸುರನಾಗಿ, ಶಕಟವಾಗಿ, ಕುದುರೆಯಾಗಿ, ಮತ್ತಿಯ ಮರವಾಗಿ, ತಾಳೆಯ ಮರವಾಗಿ, ಕತ್ತೆಯಾಗಿ ಕೃಷ್ಣನನ್ನು ಕೊಲ್ಲಹೋಗಿ ತಾವೇ ಮೃತ್ಯುವಿಗೀಡಾದರು.

ಕಂಸನು ಮುನಿಗಳಿಂದ ಯಾರು ನಾಗಶಯ್ಯೆಯೇರಿ, ಶಾರ್ಙ್ಗಚಾಪವನ್ನು ಹೆದೆಯೇರಿಸಿ, ಪಾಂಚಜನ್ಯವನ್ನು ಊದುವನೋ ಅವನು ಚಕ್ರವರ್ತಿಯಾಗುವನೆಂದು ತಿಳಿದು, ಆಗಲೇ ಅದನ್ನು ತಿಳಿಯಬೇಕೆಂದು ಈ ಮೂರು ಕೆಲಸಮಾಡಿದವನಿಗೆ ತನ್ನ ಮಗಳನ್ನು ಕೊಡುವೆನೆಂದು ಘೋಸಣೆಯಿಡಿಸಿದನು. ಕೃಷ್ಣನು ಎಲ್ಲ ಕಾರ್ಯಗಳನ್ನು ಮಾಡಿದನು. ಅದನ್ನು ಕಂಡ ಕಂಸನು ಮೆಚ್ಚಿದವನಂತೆ ನಟಿಸಿ ನಾಗಹ್ರದದೊಳಿರುವ ಸಾವಿರೆಸಳ ತಾವರೆಯನ್ನು ತರಹೇಳಿದನು. ಕೃಷ್ಣನು ಲೀಲಾಜಾಲವಾಗಿ ಹೋಗಿ ಅದನ್ನು ತಂದನು.

ಯಾವ ವಿಧದಲ್ಲಿಯೂ ಶತ್ರುವು ನಾಶವಾಗದಿದ್ದುದನ್ನು ಕಂಡ ಕಂಸನು ಚಾಣೂರಜಟ್ಟಿಯನ್ನು ಕಳುಹಿಸಿದನು. ಇದಕ್ಕೆ ಮೊದಲು ಕುವಲಯಾಪೀಡನೆಂಬ ಮದಗಜವನ್ನು ಕೃಷ್ಣನಮೇಲೆ ಬಿಟ್ಟರು. ಕೃಷ್ಣನು ಅದನ್ನು ಮುರಿದನು. ಇದರಿಂದ ಕಂಸನ ಮುಖ ಬಾಡಿತು. ಅನಂತರ ಚಾಣೂರ ಬಂದನು. ಬಹುಹೊತ್ತು ದ್ವಂದ್ವ ಯುದ್ಧವಾದಮೇಲೆ ಕೃಷ್ಣನ ಕೈಯಲ್ಲಿ ಚಾಣೂರನೂ ಹತನಾದನು. ಮುಷ್ಟಿಕನು ಕೃಷ್ಣನ ಮೇಲೇರಿಬಂದನು. ಆದರೆ, ಆತನೂ ಚಾಣೂರನ ದಾರಿಯನ್ನೇ ಹಿಡಿಯ ಬೇಕಾಯಿತು. ಉಳಿದ ಎಲ್ಲ ಜಟ್ಟಿಗಳೂ ಒಟ್ಟಾಗಿ ಕೃಷ್ಣನನ್ನು ಮುತ್ತಿದರು. ಕೃಷ್ಣನು ಅವರೆಲ್ಲರನ್ನೂ ಸದೆಬಡಿದನು. ಆಗ ಕಂಸನ ಚತುರಂಗ ಸೈನ್ಯವು ಬರಲು, ಕೃಷ್ಣನೂ ಬಲರಾಮನೂ ತಮ್ಮ ಸೈನ್ಯವನ್ನು ಕೈವೀಸಿ ಕರೆದು ಹೋರಾಡಿದರು. ಕೃಷ್ಣನು ಕಂಸನನ್ನು ಹಿಡಿದು ಸೀಳಿಬಿಸುಟನು. ದೇವತೆಗಳು ಹೂಮಳೆಗರೆದರು. (ಅರ್ಧನೇಮಿಗೆ ಇಲ್ಲಿಗೆ ನಿಲ್ಲುತ್ತದೆ.)

## ಕಥಾವ್ಯತ್ಯಾಸ

ನೇಮಿಚಂದ್ರನು ಜಿನಸೇನ, ಗುಣಭದ್ರಾಚಾರ್ಯರ ಕಥೆಯನ್ನೇ ಅನುಸರಿಸಿ ದ್ದರೂ, ಕೆಲವುಕಡೆ ಕಥೆಯನ್ನು ಬಿಟ್ಟು, ಕೆಲವುಕಡೆ ಕಥೆಯನ್ನು ಹಿಗ್ಗಿಸಿ ಅಥವಾ ಕುಗ್ಗಿಸಿ ಕಾವ್ಯವನ್ನು ರಸವತ್ತಾಗಿ ಮಾಡಿದ್ದಾನೆ. ಅಲ್ಲಲ್ಲಿ ಬರುವ ಸ್ವತಂತ್ರ ಕಲ್ಪನೆ ಗಳು ಸಹೃದಯರನ್ನು ಆಕರ್ಷಿಸಿ ಕವಿಯ ಬಗ್ಗೆ ಇರುವ ಗೌರವವನ್ನು ಅಧಿಕಗೊಳಿ ಸುತ್ತವೆ. ಇದಕ್ಕೆ ಕೆಲವು ಭಾಗಗಳನ್ನು ನೋಡಬಹುದು.

ಉತ್ತರಪುರಾಣದಲ್ಲಿ ಅರ್ಹದ್ದಾಸನೂ ಜಿನದತ್ತೆಯೂ ಸುಖವಾಗಿ ಕಾಲಕಳೆ ಯುತ್ತಿರುವಲ್ಲಿ ಜಿನದತ್ತೆಯು

ಅಷ್ಟಾಹ್ನಿಕಾ ಮಹಾಪೂಜಾಂ ವಿಧಾಯ ನರಪಪ್ರಿಯಾ ।
ಕುಲಸ್ಯ ತಿಲಕಂ ಪುತ್ರಂ ಲಪ್ಸ್ಯೇಯಾಹಮಿತಿ ಸ್ವಯಂ ॥ [1]

ಎಂದರೆ, 'ಅಷ್ಟಾಹ್ನಿಕ ಮಹಾಪೂಜೆಯನ್ನು ಮಾಡಿ, ವಂಶಕ್ಕೆ ತಿಲಕನಾದ ಪುತ್ರನನ್ನು ಪಡೆಯುವೆನೆಂದು ಬಗೆಯುವಳು.' ಅನಂತರ ಗರ್ಭವನ್ನು ಧರಿಸುವಳು.

---

1. ಉತ್ತರಪುರಾಣ—ಶ್ರೀ ಎ ಶಾಂತರಾಜಶಾಸ್ತ್ರಿ. ಪುಟ ೫೦೫—ಶ್ಲೋಕ ೬.

ಮೂಲದಲ್ಲಿರುವ ಇಷ್ಟು ವಿಷಯ ನೇಮಿಚಂದ್ರನಲ್ಲಿ ವಿಸ್ತಾರವಾಗಿ ವರ್ಣಿತವಾಗಿದೆ. ಮಕ್ಕಳಿಲ್ಲದ ಜಿನದತ್ತೆಯು ಮಕ್ಕಳನ್ನು ಹಂಬಲಿಸುವಿಕೆ, ಮಲಧಾರಿ ಸ್ವಾಮಿಗಳು ಬಂದು ಹರಸುವಿಕೆ ಮೊದಲಾದುವೆಲ್ಲವನ್ನೂ ಕವಿಯು ಸಹಜವಾಗಿ ಮತ್ತು ವಿವರವಾಗಿ ಚಿತ್ರಿಸಿದ್ದಾನೆ. ಇಲ್ಲಿ ಮಲಧಾರಿಸ್ವಾಮಿಯು ಬಂದು ಆಶೀರ್ವದಿಸುವುದು ನೇಮಿಚಂದ್ರನ ಸ್ವಂತ ಕಲ್ಪನೆ.

ಮುಂದೆ ತನ್ನ ತಂದೆಯು ಮುಕ್ತಿಗೆ ಸಂದನೆಂಬ ಮಾತನ್ನು ಕೇಳಿದ ಅಪರಾಜಿತನು ಮೂರ್ಛೆಹೋಗಿ, ಮೂರ್ಛೆಯಿಂದೆಚ್ಚತ್ತು ಸುವರ್ಣ ಬೆಟ್ಟವನ್ನು ಹತ್ತಿ ಸ್ವರ್ಗವನ್ನು ನೋಡುವೆನೆಂದು ಹೊರಟಾಗ, 'ಈ ನಿನ್ನ ಇಷ್ಟಾರ್ಥವು ನಿನ್ನ ಏಳನೆಯ ಜನ್ಮಕ್ಕೆ ಆಗುವುದು' ಎಂದು ಅಶರೀರವಾಣಿಯಾಗುವುದು ಕವಿಯ ಹೊಸ ಸೃಷ್ಟಿಯಾಗಿದೆ.

ಉತ್ತರಪುರಾಣದಲ್ಲಿ ಸಮುದ್ರರಾಜನು ಉಪಾಯದಿಂದ ತಮ್ಮ ವಸುದೇವನನು ಅರಮನೆಯಿಂದ ಹೊರಹೋಗದಂತೆ ಮಾಡಿದುದನ್ನು ನಿಪುಣಮತಿಯೆಂಬುವನು ವಸುದೇವನಿಗೆ ನಡೆದ ವಿಷಯವನ್ನು ನೇರವಾಗಿ ತಿಳಿಸಿಬಿಡುತ್ತಾನೆ. ಚಾವುಂಡರಾಯ ಪುರಾಣದಲ್ಲಿ ಇದೇ ನಿಪುಣಮತಿಯೆಂಬ ಲೆಂಕನು ವಸುದೇವನಿಗೆ ಆತನ ಅಣ್ಣನು ಸೆರೆಯಲ್ಲಿಟ್ಟಿರುವನೆಂದು ತಿಳಿಸುತ್ತಾನೆ ಆದರೆ ನೇಮಿನಾಥಪುರಾಣದಲ್ಲಿ ಕವಿಯು ಇದನ್ನು ಅತ್ಯಂತ ರಸವತ್ತಾಗಿ ಚಿತ್ರಿಸಿದ್ದಾನೆ. ಅರಮನೆಯಿಂದ ಹೊರ ಹೋಗದಂತಿದ್ದ ವಸುದೇವನು ಅಣ್ಣನು ತನ್ನನ್ನು ಏಕೆ ಹೀಗೆ ಮಾಡಿರುವನೆಂಬುದು ತಿಳಿದಿರಲಿಲ್ಲ. ಆತನು ಸಂತೋಷದಿಂದ ಕಾಲಕಳೆಯುತ್ತಿರುವಲ್ಲಿ, ಒಂದು ದಿನ ಆತನು ಅಂತಃಪುರದ ಒಬ್ಬ ವಾಚಾಳಿ ಚೇಟಿಕೆಯನ್ನು ಹಿಡಿದು ಹಿಂಸಿಸಿ ಬಲಾತ್ಕಾರದಿಂದ ಕಾರಣವನ್ನು ತಿಳಿಯುತ್ತಾನೆ.

ಚಾವುಂಡರಾಯಪುರಾಣ ಮತ್ತು ಉತ್ತರಪುರಾಣಗಳಲ್ಲಿ ಶಾಲ್ಮಲಿದತ್ತೆಯು ಪತಿ ವಸುದೇವನನ್ನು ಖಚರನಿಂದ ಬಿಡಿಸಿಕೊಂಡು ತನ್ನ ಪರ್ಣಲಘುವಿದ್ಯೆಯ ಸಹಾಯದಿಂದ ಚಂಪಾಪುರದ ಸಮೀಪದ ಸರೋವರದ ದ್ವೀಪದ ಮಧ್ಯದಲ್ಲಿ ಇಳಿಸುವಳು. ಹೀಗೆ ಪತಿಯನ್ನು ಕದ್ದೊಯ್ಯುತ್ತಿದ್ದ ಖೇಚರನನ್ನು ಬೆನ್ನಟ್ಟಿ ಬಿಡಿಸಿಕೊಂಡ ಶಾಲ್ಮಲಿದತ್ತೆಯು ಚಂಪಾಪುರದ ಬಳಿ ಪತಿಯನ್ನು ಇಳಿಸಲು ಕಾರಣವೇನೆಂಬುದು ಇಲ್ಲಿ ತಿಳಿಯುವುದಿಲ್ಲ. ಇದು ಮೂಲದಲ್ಲಿ ಗೂಢವಾಗಿ ಹಾಗೆಯೇ ಉಳಿಯುತ್ತದೆ. ಆದರೆ ನೇಮಿಚಂದ್ರನ ಕಲ್ಪನೆಯಿಂದ ಅದು ಸುಸ್ಪಷ್ಟವಾಗಿದೆ. ಖಚರನಿಂದ ಬೀಸಾಡಲ್ಪಟ್ಟ ವಸುದೇವನನ್ನು ಶಾಲ್ಮಲಿದತ್ತೆಯೇ ಅಂತುಕೊಂಡಂತೆಯೂ, ಮತ್ತೆ ಆಕಾಶವಚನದ ಆದೇಶದಂತೆ ಪತಿಯನ್ನು ಚಂಪಾಪುರದ ಬಳಿ ಇಳಿಸಿದಂತೆಯೂ ಮಾಡಿರುವ ಕವಿಯ ಕಲ್ಪನೆ ಸಮಂಜಸವಾಗಿದೆ.

ಹಿಂಗೆಯೇ, ನಂದಗೋಪ ಮತ್ತು ವಸುದೇವನು ಬರುವ ಒಂದು ಸಂದರ್ಭವನ್ನು ನೋಡಬಹುದು. ಉತ್ತರಪುರಾಣ ಮತ್ತು ಚಾವುಂಡರಾಯ ಪುರಾಣಗಳಲ್ಲಿ

ಕಂದಗೋಪನೂ ವಸುದೇವನೂ ಒಬ್ಬರನ್ನೊಬ್ಬರು ಸಂಧಿಸಿ ಮಕ್ಕಳನ್ನು ಅದಲು ಬದಲು ಮಾಡಿಕೊಳ್ಳುವರು. ಆದರೆ ಇದನ್ನು ನೇಮಿಚಂದ್ರನು ಹೆಚ್ಚು ರಸವತ್ತಾಗಿ, ಆಕರ್ಷಕವಾಗಿ ಚಿತ್ರಿಸಿದ್ದಾನೆ.

ವಸುದೇವ ಬಲರಾಮರು ಹುಟ್ಟಿದ ಶಿಶು ಕೃಷ್ಣನನ್ನು ಎತ್ತಿಕೊಂಡು ಬರುತ್ತಿರಲು, ಅಷ್ಟರಲ್ಲಿ ದೀವಿಗೆಯನ್ನು ಹಿಡಿದು ಯಾರೋ ಬರುತ್ತಿರುವುದನ್ನು ಕಂಡು, ಸಹಜವಾಗಿ ಕಂಸನ ಭಯದಿಂದ ಕೂಡಿದ ಇವರು 'ತಮ್ಮ ಪಜ್ಜೆವಿಡಿದು ಬೆನ್ನಟ್ಟಿ ಬಂದ ಕಂಸನೆಂದೇ ಬಗೆದು' ಭಯಗೊಂಡು ಮುಂದೊಂದು ದೇವಾಲಯ ವಿದ್ದುದನ್ನು ಕಂಡು ಅಲ್ಲಿ ಹೊಕ್ಕರು. ನಂದಗೋಪನು ಹುಟ್ಟಿದ ಒಂದು ಹೆಣ್ಣುಕೂಸನ್ನು ತಂದು ದೇವತೆಯನ್ನು ಕುರಿತು 'ನನ್ನ ಹೆಂಡತಿ ಗಂಡನ್ನು ಬೇಡಿ ಕೊಂಡರೆ, ನೀನು ಹೆಣ್ಣನ್ನು ಕೊಟ್ಟೆ.' ನೀನು ಕೊಟ್ಟ ಹೆಣ್ಣನ್ನು ನೀನೇ ತೆಗೆದುಕೊ. 'ನನ್ನ ಪೆಂಡತಿ ನೋಂತುಂ ಪಸಿದುಂ ಪಾಟಿಂಬಟ್ಟುಂ ಕೊಟ್ಟ ಪರಕೆಯಂ ಮಗುಳೆ ಕುಡು. ಕುಡದಂದು ನಿನ್ನನೀ ಮನೆಯೊಳಗೆ ದಿಟದ ದೇವತೆಯಂತೆ ಮಲಗಿ ಮಲ್ಲಂತಿಗಿಱಿದು ಕುಳ್ಳಿರಲೀಯೆಂ. ವಿಷ್ಣುಗುಪ್ತಂ ಲಿಂಗದ ನೆತ್ತಿಯೊಳಿಕ್ಕಿದಂತೆ ಪಿರಿಯ ಕರಿಯ ಕಲ್ಲನೆತ್ತಿ ತಂದು ನಿನ್ನ ನೆತ್ತಿಯೊಳಿಕ್ಕಿ ತುಱುಕಾರ್ತಿಯನಾಳಿ ಗೊಂಡು ನುಣ್ಣನೆ ನುಂಗಿದುದೆಲ್ಲಮಂ ಮೂಗಿಂ ಬಾಯಿಂ ಕಾಱಿಸುವೆನೆಂದು ಮೀಸೆಯಂ ಕಡಿದು ಕೂಸನೀಡಾ ಡಿ' ಹೋಗುವ ನಂದನನ್ನು ವಸುದೇವನು ಕರೆದು ಗಂಡುಗೂಸನ್ನು ಕೊಡುವನು. ನಂದನು ತನಗಂಜಿದ ದೇವತೆಯೇ ಕರೆದು ಕೊಟ್ಟ ಳೆಂದು ಬಗೆದು ಸಂತೋಷದಿಂದ ಹಿಗ್ಗಿ, ಮನೆಗೆ ಹಿಂದಿರುಗಿ ಹೆಂಡತಿಗೆ ಗಂಡು ಮಗುವನ್ನು ಒಪ್ಪಿಸುವನು. ಈ ಭಾಗ ಎಷ್ಟು ರಸವತ್ತಾಗಿದೆಯೆಂಬುದು ಕಾವ್ಯವನ್ನು ಓದಿದಾಗ ಹೆಚ್ಚು ಅರಿವಾಗುತ್ತದೆ.

ಹೀಗೆ ಮೂಲದ ವಿಷಯ ನೇಮಿಚಂದ್ರನಲ್ಲಿ ಮಾರ್ಪಾಟಾಗಿ ಅತ್ಯಂತ ರಸವತ್ತಾದ ಸನ್ನಿವೇಶಗಳು ನಿರ್ಮಿತವಾಗಿವೆ.

## ಕಾವ್ಯ ವಿಮರ್ಶೆ

ನೇಮಿನಾಥಪುರಾಣವು ಲೀಲಾವತಿ ಕಾವ್ಯಕ್ಕಿಂತ ಉತ್ತಮವಾದ ಕಾವ್ಯ. ಈ ಪುರಾಣವು ಪೂರ್ಣವಾಗಿ ದೊರೆತಿದ್ದರೆ ಉಳಿದ ಎಲ್ಲ ಕನ್ನಡ ನೇಮಿನಾಥಪುರಾಣಗಳಿ ಗಿಂತ ಉತ್ತಮ ಕಾವ್ಯವಾಗಿರುತ್ತಿತ್ತೆಂದು ದೊರೆತ ಈ ಅರ್ಧ ಭಾಗವನ್ನು ನೋಡಿ ಹೇಳಬಹುದಾಗಿದೆ.

ಈ ಭವಾವಳಿಗಳ ಗೊಂದಲದಲ್ಲಿಯೂ ನೇಮಿಚಂದ್ರನ ಕಾವ್ಯಪ್ರತಿಭೆಯಿಂದ ಕಾವ್ಯವು ರಸಮಯವಾಗಿದೆ. ಈ ರಸವತ್ತಾದ ಸನ್ನಿವೇಶಗಳಿರುವುದರಿಂದಲೇ ಕಾವ್ಯ ವನ್ನು ಓದುವ ಸಹೃದಯರಿಗೆ ಭವಾವಳಿಯ ಯಾವ ಗೊಂದಲವೂ ಅರಿವಾಗುವುದಿಲ್ಲ

ಕವಿಯ ವಾಕ್ಚತುರತೆ, ಪದಜೋಡಣೆ ಎಲ್ಲರೂ ಮೆಚ್ಚುವಂತಹವು. ಇದಕ್ಕೆ ಉದಾಹರಣೆಯಾಗಿ ಕೆಲವು ಸಂದರ್ಭಗಳನ್ನು ನೋಡಬಹುದು.

ಇದ್ದೊಬ್ಬ ಮಗನು ಕೆಟ್ಟ ಸಹವಾಸಕ್ಕೆ ಬಿದ್ದು ಶ್ಮಶಾಸನದಲ್ಲಿ ಶೂಲಕ್ಕೇರಿಸಲ್ಪಟ್ಟುದನ್ನು ಕಂಡ ತಾಯಿಯ ಕರುಳು ಕತ್ತರಿಸುವಂತಹ ಆ ವೇದನೆಯನ್ನು ಕವಿಯು ಹೃಂದಯಂಗಮವಾಗಿ ವರ್ಣಿಸಿದ್ದಾನೆ. ಆ ತಾಯಿಯು ಮಗನನ್ನು ಕುರಿತು

ಅಂಗಡಿಯಾನೆಯೆ ಬೀದಿಯ
ಸಿಂಗನೆ ಲಲನೆಯರ ಕಣ್ಣ ಪುಣ್ಯಮೆ ನಿನ್ನಂ
ಜಂಗಮವಿಷಮಂ ಪಿಡಿದಾ
ವಂಗಡ ಪಿತೃವನಕೆ ತುಡಿಸಿದ ಬಂಟಂ ॥ ೫–೩೪ ॥

ಊಡಿದೆನೋದಲಿಟ್ಟೆನುಡಕಲ್ವುದುಮಣ್ಣನ ಕೂಸುದಂದೆನಾಂ
ಬೇಡೆನೆ ಮಾಜಿ ಕಳ್ಳರೊಡನಾಡಿಯೆ ಪೆತ್ತ ಬಸಿರ್ಗೆ ಸಂಕಸ ।
ಮಾಡಿದೆಯಿಂದಿದೇ ಮಗನೆ ಪಣ್ಣನೆ ನುಣ್ಕೊಗದಲ್ಲಿ ಮಾಸೆಗಳ್
ಮೂಡದ ಮುನ್ನ ನಿನ್ನ ಪೆಗಲೊಳ್ ಪೊಸಸೂಲಮಿದೆಂತು ಮೂಡಿತೋ
॥ ೫–೩೫ ॥

ಎಂದು ಮೊದಲಾಗಿ ಹಲುಬುವುದು ಎಲ್ಲರ ಮನವನ್ನೂ ಸೂರೆಗೊಳ್ಳುತ್ತದೆ.

ಮತ್ತೊಂದು ಸಂದರ್ಭವೆಂದರೆ, ವಸುದೇವನೂ ಶಾಲ್ಮಲಿದತ್ತೆಯೂ ದೇವದಂಪತಿಗಳಂತೆ ಪವಡಿಸಿರಲು, ಖೇಚರನೊಬ್ಬನು ವಸುದೇವನನ್ನು ಕದ್ದೊಯ್ಯುತ್ತಿದ್ದನು. ಇದನ್ನು ಎಚ್ಚರಗೊಂಡ ಸತಿ ಶಾಲ್ಮಲಿದತ್ತೆಯು ಪತಿಯನ್ನು ಕದ್ದೊಯ್ಯುವುದನ್ನು ಕಂಡು ದುಃಖಿಸಲಿಲ್ಲ, ಹುಯ್ಯಲಿಡಲಿಲ್ಲ.

ಒಕ್ಕೆ ನೆಱಂಗಿನಿಂ ಮೊಲೆಯ ಗಾಳಿಸಿ ಗಂಡುಡೆಯುಟ್ಟು ಪೆಚ್ಚುಗಂ
ಟಕ್ಕೆ ಬಟಿಲ್ದ ಬಲ್ಪಿಣಿಲನೊತ್ತಿ ದೆಱಂಕೆವೊಲೆತ್ತಿ ಕೊಂಡೆರಟ್ಟ್
ಪಕ್ಕದ ಬಾಳು ಮತ್ತಪರಮುಂ ಪೊಳೆಯುತ್ತಿರೆ ಪಾಱಿದಳ್ ನಭೋ
ಗ್ರಕ್ಕತಿವೇಗದಿಂ ಖಚರಕಾಮಿನಿ ಕಾಮನ ವೀರಲಕ್ಷ್ಮಿವೊಲ್ ॥೬–೧೦॥
ವ॥ ಅಂತು ಪಾಱಿ ಪೋಗಿ

ಬಿಡು ಬಿಡು ಮನ್ಮನಃಪ್ರಿಯನನಲ್ಲದೊಡಣ್ಮಿನುತಾಕೆ ಖಡ್ಗಮಂ
ಜಡಿದೊಡನಾಲಿಯುಂ ಜಲಮುಮೊಕ್ಕುವಿನಂ ಶತಖಂಡಮಪ್ಪಿನಂ
ಸಿಡಿಲೆಳಮಿಂಚು ನುಚ್ಚುನುಱಿಯಪ್ಪಿನೆಗಂ ಕಡಿಖಂಡಮಪ್ಪಿನಂ
ಪೊಡೆದಳದೊಂದು ನೀಲಘನ ಪಿಂ ಪೊಡೆವಂತಿರೆ ಮತ್ತದಂತಿಯಂ ॥ ೬–೧೩ ॥

ಸೋಗೆಯ ಕಲಿಮತಿಗಳ್ಕಿದ
ನಾಗರವೊಲ್ ಗಜಱುವವಳ ದನಿಗಳ್ಕಿ ಖಗಂ
ಪೋಗಲ್ ಪಡೆಯದೆ ಖಚರಿಯ
ಮೇಗವನೀಡಾಡಿ ಪೋದನರಸರ ಮಗನಂ ॥ ೬–೧೪ ॥

ಇದಾದನಂತರ ಬರುವ ಒಂದು ರಸವತ್ತಾದ ಸನ್ನಿವೇಶವೆಂದರೆ ವಾಮನಾವತಾರ. ವಾಮನನು ವಟುವಾಗಿ ಬಲಿಯಲ್ಲಿಗೆ ಬಂದು ಮೂರಡಿ ನೆಲವನ್ನು ಕೇಳಲು, ಬಲಿ ಚಕ್ರವರ್ತಿಯು 'ಕಿಱಿದಂ ಬೇಡಿದಿರ್ ಕೊಟ್ಟೆನಳೆದುಕೊಳ್ಳಿಮನೆ'

ವಟು ಮರದುದ್ದವಾದನಿತ್ತಲ್ಲದೊಡಿತ್ತಲೆ ಯುದ್ಧವಾದನ
ಕ್ಕಟ ಮದಿಲುದ್ದವಾದನಿವನಾವನೊ ಪೆರ್ಮರದುದ್ದವಾದನಿಂ
ತುಟು ಗಿರಿಯುದ್ದವಾದನಿದು ವಿಸ್ಮಯಮಾ ಮುಗಿಲುದ್ದವಾದನೋ
ವಟವುಟಿಗಂ ದಿಟಕ್ಕೆನೆ ಕರಂ ಬಳೆದಂ ಮನದಂತೆ ವಾಮನಂ

ವ || ಅಂತುಮಲ್ಲದೆ || ೬-೨೪ ||

ಮರನಂ ಮುಟ್ಟಿದನಿಲ್ಲ ಮೇಘಘಟೆಯೊಳ್ ಕಾಲ್ಕೋದನಿಲ್ಲಿಲ್ಲ ಭೂ
ಧರಮಂ ದಾಂಟಿದನಿಲ್ಲ ಬಾಂದೊಱೆಯೊಳಿಟ್ಟ ಕಾಲನಿಲ್ಲಿಲ್ಲ ಭಾ
ಸ್ಕರನಂ ಮಾಯದ ಮಾಣಿ ಸೆಂಡೊಡೆದನಾ ಇಲ್ಲೆಂಬಿನಂ ನೀಡಿದಂ
ತರದಿಂ ಪಾದಮನುರ್ವಿ ಕೊರ್ವಿ ಬಲಿಯಂ ಗೆಲ್ವಾ ಮನಂ ವಾಮನಂ || ೬-೨೫ ||

ಮೊದಲಾದ ಪದ್ಯಗಳನ್ನು ಓದಿದಾಗ ಆ ವಾಮನನ ಚಿತ್ರ ಕಣ್ಣಿಗೆ ಕಟ್ಟಿದಂತಾಗಿ, ಕವಿಯ ಬಗ್ಗೆ ಇರುವ ಗೌರವಾದರಗಳು ಇಮ್ಮಡಿಸುತ್ತವೆ.

ಹಾಗೆಯೇ ಅತಿಸುಲಭವಾಗಿ ಮನಮುಟ್ಟುವಂತೆ ಹೇಳುವ ಕವಿಯ ವಾಕ್ಚತುರತೆಯನ್ನು ಬೇಟೆಯಾಡುತ್ತಿದ್ದ ಬೇಡನು ಬಿಲ್ಲುಬಾಣಗಳನ್ನೆಸೆದು ಬಂದು ಮುನಿಗಳ ಪಾದಕ್ಕೆ ಬೀಳಲು, ಮುನಿಗಳು

ಕೊಲಲಾಗದು ಕಳಲಾಗದು
ಕುಲಟೆಯರೊಳ್ ನೆರೆಯಲಾಗದಾರ್ತದಿನರ್ಥ
ಕ್ಕಲವರಲಣಮಾಗದು ಪುಸಿ
ಯಲಾಗದೀ ಬ್ರತಮನೈದುಮಂ ಪಿಡಿ ಮಗನೇ || ೩-೭೨ ||

ಎಂದು ಹೇಳುವಲ್ಲಿ ಕಾಣಬಹುದು.

ನೇಮಿಚಂದ್ರನು ಬರಿಯ ವರ್ಣನೆಗಳೇ ಅಲ್ಲದೆ, ಜೀವನದಿಂದ ಆರಿಸಿಕೊಂಡ ಅನೇಕ ಉಪಮಾನಗಳನ್ನು ಉಪಯೋಗಿಸಿದ್ದಾನೆ. ಮರುಳನಳಿಗೆ ಮಾಣಿಕಮಂ ಮಾಱುವ ತೆಱ, ನಿಧಿ ದೊರೆಕೊಂಡೊಡಂ ಜರಗುಗಚ್ಚುವರೇ, ಪಶುದಿಂಬಂಗಾಡಂ ತಿಂಬುದೇಂ ಪಾತಕಮೇ, ಇಲಿಯುಲಿವು ಗೇಳ್ವ ಬೆಕ್ಕಿನಂತೆ, ಕಾರ್ಯವಶಕ್ಕೆ ಕಾಲ್ವಿಡಿದನೆಂಬಂತೆ, ಕಣ್ಬಡೆದ ಕುರುಡನಂತೆ, ಲೋಯಿಸರದ ಮೇಲೆ ಬಂಡಿ ಪರಿದಂತು, ಆನೆಯ ನೆತ್ತುವಂಗಾಡು ಚಿಕ್ಕಾಡೆಂಬಂತೆ ಇವೇ ಮೊದಲಾದ ಹಲವಾರು ಉಪಮಾನಗಳು ಅರ್ಥವನ್ನು ಹೆಚ್ಚು ರಸವತ್ತಾಗಿ ಮಾಡುತ್ತವೆ.

ಇವೇ ಅಲ್ಲದೆ ಕವಿಯು ಪದಪ್ರಯೋಗದಲ್ಲಿಯೂ ನಿಪುಣನೆನಿಸಿಕೊಂಡಿದ್ದಾನೆ. ಇಲ್ಲಿ ಉಪಯೋಗಿಸಿರುವ ಕೆಲವು ಪದಗಳು ಅಪೂರ್ವವಾದುವು. ಪೇರಣೆಮಣಿ, ಪೊಂತಿವಣೆ, ಮಾಚಾಳಿಕೆ, ಮಾರ್ಗಡೆ, ಸಣಗ, ಸಂಡಿ ಮೊದಲಾದ ಪದಗಳಿಗೆ ಅರ್ಥವಾಗುತ್ತಿಲ್ಲ. ಇವುಗಳಿಗೆ ಅರ್ಥ ಹೇಳಲಾಗದುದು ಪಾಠಾಂತರದ ಅಪೂರ್ಣತೆಯಿಂದಲೋ ಪಾಂಡಿತ್ಯದ ಶುಷ್ಕತೆಯಿಂದಲೋ ತಿಳಿಯದು.

ಅಂತೂ ನೇಮಿಚಂದ್ರನು ಪ್ರತಿಭಾವಂತನಾದ ಕವಿಯೆಂಬುದನ್ನು ಎಲ್ಲ ಸಹೃದಯರೂ ಒಪ್ಪಲೇಬೇಕು. ಆದರೆ ಕಾಲದ ಮಹಿಮೆಯಿಂದಲೋ, ಕವಿಯ ಅಭಿರುಚಿಯಿಂದಲೋ, ಸಂಯಮ ಸಾಲದುದರಿಂದಲೋ 'ಕವಿಯು ಲೀಲಾವತಿ ಕಾವ್ಯದಲ್ಲಿ ಔಚಿತ್ಯದ ಎಲ್ಲೆಯನ್ನು ದಾಟಿದ್ದಾನೆ' ಎಂಬ ಮಾತಿಗೆ ಪಕ್ಕಾಗಿದ್ದಾನೆ. ನೇಮಿನಾಥ ಪುರಾಣದಲ್ಲಿ ಮಾತ್ರ ಆತನ ವರ್ಣನೆಗಳು ಸಹೃದಯರ ಮನಸ್ಸನ್ನು ಉಲ್ಲಾಸಗೊಳಿಸಿ ಕವಿಯ ಹಿರಿಮೆಯನ್ನು ಹೆಚ್ಚಿಸುತ್ತವೆ.

---

ಸಕಲಾಘೌಘ ಪತಂಗ ವಧ್ವಶಿಲೆಯೊಳ್ ತತ್ಕೇವಲ ಜ್ಞಾನದೀ
* ಪಿಕೆಯೊಳ್ ಮಂಗಳಕಾರಣ ಪ್ರಭೆಯೊಳಂತದ್ಧ್ವಾಂತ ವಿಚ್ಛಿತ್ತಿಗು
ತ್ಸುಕನೆಂ ಶುದ್ಧಮನಾತ್ಮಪಾತ್ರಗತಮಂ ಸುಸ್ನಿಗ್ಧಮಂ ಚಿತ್ತವ
ರ್ತಿಕೆಯಂ ಪತ್ತಿಸಿ 'ರಾಗದಿಂ' ಬೆಳಗುವೆಂ ಬೋಧಾಮಲ ಜ್ಯೋತಿಯಂ ॥೧೧॥

ಜೀವನಮಂ ಜಲನಿಧಿಯೊಳ್
ತೀವಿದ ಮುಗಿಲಂತೆ ಜಿನವಚೋಮೃತಮಂ ಭ
ವ್ಯಾವಳಿಗೆ ಕಱೆದ ಗಣಧರ
ದೇವರ್ ದಯೆಗೆಯ್ಗೆ ನಮಗೆ ಸಕಲಶ್ರುತಮಂ ॥೧೨॥

ಇದು ಚೋದ್ಯಂ ಜಿನಸಮಯದ
ಮೊದಲಿಗರೆನಿಸಿರ್ದ ಗೃಧ್ರಪಿಂಛಾಚಾರ್ಯರ್
ಮುದಮೊದವೆ ಬರೆದ ತತ್ವಾ
ರ್ಥದ ಸೂತ್ರದ ವೃತ್ತಿಯಾದುದೆಱೆವರ್ಗೆಲ್ಲಂ ॥೧೩॥

ಧೈರ್ಯನಿಧಿ [1]ಕೊಂಡ[2]ಕುಂದಾ
ಚಾರ್ಯರ ಚರಣಂಗಳೊಲೆದು ನೆಲಮುಟ್ಟದ ತಾ
ತ್ಪರ್ಯಮನವರ್ಗೆ ನಿಜಸೌ
ಕರ್ಯಮನೀವಿರ್ಪ್ಪ ಪೆಸ್ಸ ಮನದೊಳ್ ಸತತಂ ॥೧೪॥

ಜಿನರ ಪ್ರತಾಣಂಗಳೆರಿಗಿಂ
ವನೆ ಬರೆಪೊಡೆ ಬರೆ 'ದೆಂಬರೀ' ಘುವನಂ ಚೀ
ಯೆನೆ ಬರೆವರಿ ವರಿರ್ಪ
ತ್ತುನಾಲ್ಕುಮಂ ಪೊಗೞ್ ಸುಕವಿ ಪರಮೇಶ್ವರರಂ ॥೧೫॥

ಸುಕವಿ ಪರಮೇಷ್ಠಿಗಳ ನಾ
ಟಕವೆನಿಸಿದ ಭುವನವಂದ್ಯವರವಿದ್ಯಾತೀ
ರ್ಥಕರತ್ವ ಪುಣ್ಯಲಕ್ಷ್ಮಿಗೆ
ಸಕಳಶ್ರುತದೇವಿ ಯಕ್ಷಿ ಯಕ್ಷಂ [5]ಬ್ರಹ್ಮಂ ॥೧೬॥

---

1 ರಾಗವಂ (ಕ) 2 ಕುಂಡ (ಚಟ) 3 ವೆ (ಜಡಣ) 4 ದರೆಂಬೀ (ಡ)
5 ಬೊಮ್ಮಂ (ಣ)

* ಇಲ್ಲಿಂದ ೩೭ ನೆಯ ಪದ್ಯದವರೆಗೂ 'ಜ' ಪ್ರತಿಯಲ್ಲಿ ಪತ್ರಲೋಪವಾಗಿದೆ,

ಕುಂದದಿವರ್ ಪೇೞ್ದೋದಿಂ
ಗೊಂದು ಪೊಗಂ ನೆಱೆಯದೆಂದು ಬಹುಮುಖನಾದಂ
ಸಂದ ಪಿತಾಮಹನೆನೆ ಸಲೆ
ಸಂದರ್ ಜಿನಸೇನ ವೀರಸೇನಾಚಾರ್ಯರ್ ॥೧೭॥

ನೆಱೆಯಲ್ ಮಹಾಪುರಾಣಮ
ನಱುವಳವಡೆ ನೇೞ್ದು ಪದನಮಿರೆ ತಮಗೊಲ್ದಾ
ನೆಱಗೆ ಗುಣಭದ್ರದೇವರ
ಮಿಱುಪಂಘ್ರಿಗಳಿತ್ತುವೆನಗೆ ಕವಿತೆಯಸಣಕಂ ॥೧೮॥

ಕಲಿಕಾಲದ ಜಿನರಂ ನ
[1]ಮ್ರಲೋ[1]ಕರಂ ಪುಷ್ಪದಂತಮಲಧಾರಿಗಳಂ
ಬಲಗೊಂಡು ಪಾಡಿ ಪಾಡುವೆ
ನಲಘುಗುಣಸ್ತವನ ಪುಣ್ಯಪುಷ್ಪಾಂಜಲಿಯಂ ॥೧೯॥

ಲಪನಂ ಕಾರುಣ್ಯಮಂ ಕನ್ನಡಿಸೆ ಸಹಜಸಂಶುದ್ಧಿಯಂ ಮಾನಸಂ [2]ಶಾ
ನು[2]ಪದೇಶಂಗೆಯ್ಯೆ ಸತ್ವಾವಳಿಗಭಯಸುಧಾಸಾರಮಂ ಸೂಸೆ ನೋಟಂ
ತಪ[3]ಮಾ[3]ಪ್ಪೈಧನ್ಯ ದೀಕ್ಷಾವಿಧಿಯನೆ ರತಿಗಾತ್ರೀಯ ಸಂದಿರ್ದ ಯೋಗೀಂ
ದ್ರಪದಾಂಭೋಜಂಗಳೊಳ್ ರಂಜಿಸುಗೆ ಮಧುರಮುನ್ವಾಕ್ಯ ಪುಶ್ಪೋಪಹಾರಂ ॥೨೦॥

ಒಳಗಾದಕ್ ಶ್ರುತದೇವಿ ನೇಮಿಗೆ ಗುಣಾರ್ಪೀ ಸುಪ್ರಣಸ್ತೋತ್ರಮಂ
ಗಳ ಮಂತ್ರಂಗಳಿನಾಕೆ[4]ಗೀ[4]ಜಿನಕಥಾನಾಂದೀಮುಖಂ ಮುಖ್ಯಮಂ
ಗಳಮರ್ಹತ್ಸ್ತುತಿ ಮಂಗಳಂ ಸಕಳ[5]ಸಿದ್ಧರ್ ಮಂಗಳಂ[5]ಸಾಧುಮಂ
ಗಳಮರ್ಹನ್ಮುಖಚಂದ್ರಚಂಚದಮೃತಂ ಧರ್ಮಂ ಮಹಾಮಂಗಳಂ ॥೨೧॥

ಪರಮತಮತ್ತ ಹೈಹಯ ಮುಖಚ್ಯುತೆ ವಿಶ್ರುತಜೈನ ಶಾಸನಾ
ಮರ ಭುವನ ಪ್ರತಿ[6]ಷ್ಠಿತ ವೃಷಾ[6]ನುಭವೋಚಿತೆ ವತ್ಸಲತ್ವದಿಂ
ತೊರೆದ ಕುಚಂಬೊಲೊಪ್ಪುವ ಚತುರ್ವಿಧ ಭಾಷೆಯೊಳಂ ಸರಸ್ವತೀ
ಸುರಭಿ ನಿರಂತರಂ ಕಱಗೆ ಕಾಮಿತಮಂ ಕವಿರಾಜಮಲ್ಲನಾ ॥೨೨॥

---

1 ಮ್ರಲೆಂ (ಙ) 2 ಕಣ್ಣು (ಗಚಟಡ) 3 ಮಂ (ಗಚಟಡ) 4 ನೀಂ (ಙ) 5 ಸಿದ್ಧಮಂ ಗಳಂ (ಟಡ) 6 ಷ್ಠಿತ ತೀವ್ರರಸಾ (ಕ) ಷ್ಠತೆ ರಸಾ (ಙ)

ಸಮನಿಸೆ ಪಡೆದುವು ಜಿನಮುಖ
ಕಮಲಂಗಳ್ [1]ವ[1]ರ ಸರಸ್ವತೀ ಸೌರಭಮಂ
ತಮಗೆಱಪ ನೇಮಿಚಂದ್ರ
ಭ್ರಮರಂಗುಱಿಂದಂತಿರದನವೇಗ್ಗೈದಪುದೋ ||೨೩||

ನೇಮಿಗೆ ಸಮಂತಭದ್ರ
ಸ್ವಾಮಿಯ ಸಮವಿಷಮ ಕವಿತೆಯಕಲಂಕನ ವಿ
ದ್ಯಾಮಹಿಮೆ ಪೂಜ್ಯಪಾದ
ಸ್ವಾಮಿಯ ವಾಣೀವಿಲಾಸಮಿಾಗಭಿಮತಮಂ ||೨೪||

ಕವಿಕುಲಪತಿ ನೇಮಿಗೆ ತ
ನ್ನ ವಾಣಿಯಂ ಕುಡುಗೆ ನೇಮಿನಾಥಂ ತನಗೊ
ಪ್ಪುವ ತೊಡವಂ ಮಾಡಿಸಿದಂ
ಸುವರ್ಣಕಾಱಂಗೆ ಪೊನ್ನನಿಕ್ಕುವ ತೆಱದಿಂ ||೨೫||

ರುಚಿರಕಲಾಧರನಿಂ ನೇ
ಮಿಚಂದ್ರನಿಂ ಸತ್ಕವೀಂದ್ರಚೂಡಾಮಣಿಯುಂ
ಶುಚಿಪದ ಶಶಿಕಾಂತೋಪಲಂ
ನಿಚಯಂ ರಸಮೊಸರುತಿರ್ಪ್ಪವೋನಚ್ಚರಿಯೋ ||೨೬||

ಈ ಕೇವಣಿಪನೆ [2]ಜೈ[2]ನ ಕ
ಥಾಕಾರ ಪರಾರ್ಧ್ಯರತ್ನಮಂ ನೇಮಿವಚ.
ಶ್ರೀಕಟಕಂ ರತ್ನತ್ರಯ
ದೈಕಟಕಂ ಕಾಂತಶಬ್ದರುಚಿ ಕಾಂಚನದೊಳ್ ||೨೭||

ರಸಮೊ ರಸಾಯನಮೋ [3]ಶ್ರು[3]ತಿ
ವಸಂತಮೋ ಕಿವಿಗಳಮೃತಮೋ ನೇಮಿಯ ವಾಕ್
ಪ್ರಸರಮದ[4]ಱಿ[4]ಸಕದಿಂ ನಿ
ಪ್ಪೊಸತಾದುದು ಜಗಕೆ ನೇಮಿನಾಥಪುರಾಣಂ ||೨೮||

---

1 ಪ (ಚ) ವೆ (ಡ) 2 ಸುಜ್ಞೆ (ಚಟ) 3 ಕ್ಕ (ಟ) ಪ್ರಕ್ಕ (ಡ) 4 ದೆ (ಣ) ವುರಿ (ಡ)

ಪರಿಭಾವಿಸೆ ಪೂರ್ವಾಪರ
ವಿರೋಧಮಿಲ್ಲದುದೆ ತಾಂ ಪುರಾಣಮದಂ 'ಮಾಂ'¹
ಕರಿಸುವೊಡೇ²ಸಿ³ಟಿ³ಗಾಱರ
ಪರಪಿದ ಮಾತುಂ ಪುರಾಣಮಕ್ಕೆಮಗೇನೋ ||೨೯||

ಪ್ರಣುತ ಜಿನಚರಿತಮಂ ಲ
ಕ್ಷಣಮಿಲ್ಲದೆ ಕುಕವಿ ಕಬ್ಬದೊಳ್ ಕಟ್ಟಿ ಮಹಾ
ಮಣಿಯಂ ಕರ್ಬೊನ್ನೊಳ್ ಕೇ
ವಣಿಸಿದ ತೆಱನಕ್ಕುಮಲ್ಲದ³ಪ್ಪು³ದೆ ಶುಭದಂ ||೩೦||

ಕಡುಕಂಪಂ ಪಿಡಿಕೆಯ್ನ⁴ಬರ್ಕು⁴ಮೆ ಬಟಿಲ್ದೈತಂದ ತಂಗಾಳಿಯಂ
ಪಿಡಿಯಲ್ ಬ⁴ರ್ಕು⁴ಮೆ ತೃಷ್ಣೆಗೊರ್ಕುಡಿತೆಯಿಂ ಕೊಂಡಚ್ಚವೆಳ್ದಿಂಗಳಂ
ಕುಡಿಯಲ್ ಬ⁴ರ್ಕು⁴ಮೆ ಕೊರ್ವಿತೆಂದು ತರುಣೀಸಂಭೋಗ ಸೌಖ್ಯಂಗಳಂ
ನುಡಿಯಲ್ ಬ⁴ರ್ಕು⁴ಮೆ ಬಾರದಿಂತುಟೆ ವಲಂ ಕಾವ್ಯಾಮೃತಾಸ್ವಾದನಂ ||೩೧||

ಕಮಳಕ್ಕಾವಗಮಲ್ತು ಲಕ್ಷ್ಮಿಯಿರ⁵ವಾ⁶ಸ್ಯಾಬ್ಜಕ್ಕಮುಂಟಗ್ಗದಿಂ
ಪಮದರ್ಗಂಗೊಚ್ಚತವಲ್ತು ಮತ್ತಿವರ ಪಾಪ್ತೀಯೂಸಪೂರಕ್ಕಮುಂ
ಟಮರರ್ಗರ್ಪಿತಮಲ್ತು ಸೌಖ್ಯಮಿವರೀ ಸಂಸೇವ್ಯ ಕಾವ್ಯಂಗಳಂ
ಸಮಸಂದಾಲಿಸುವರ್ಗ⁷ಮುಂ⁸ಜನಿಸಲ್ಕೀಗೊಪ್ಪಂ ಕವೀಂದ್ರೋತ್ತಮರ್ ||೩೨||

ಕುವಳಯ⁹ದ⁹ಲರಂ ಕೌಮುದಿ
ಯ ವಿಭವಮಂ ಕಂಡು ಕೊಂಡು ಕೊನೆವಂ ಕವಿಯೋ
ರವಿಯೋ ರವಿ ಕಾಣದುದಂ
ಕವಿ ಕಾಣ್ಬನೆನಿಪ್ಪ ವಚನಮೇಂ ತಪ್ಪುಗುಮೇ ||೩೩||

ಶ್ರೀಯನೊಲಿಸುವೊಡೆ ತಾಂ ಕವಿ
ನಾಯಕನೆನಿಸುವೊಡೆ ತನ್ನ ಕೃತಿ ಕಲ್ಪಾಂತ
ಸ್ಥಾಯಿಯೆನಿಸುವೊಡೆ ಬಲ್ಲರ
ಬಾಯಂ ಪೊ⁹ಕ್ಕೋದಿ⁹ ಕಲ್ಗೆ ಕವಿ ಸಕಲಮುಮಂ ||೩೪||

---

1 ಮಾ (ಚಟಡ) 2 ಗಿ (ಚಟ) 3 ಕ್ಕು (ಚಟಡ) 4 ಬಕ್ಕು (ಗಡ) ಲಕ್ಕು (ಙ)
5 ಕ್ಕು (ಚಟಡ) 6 ಲಾ (ಚಟಡ) 7 ವಂ (ಙ) 8 ವ (ಚಟಡ) 9 ಕ್ಕುದೀ (ಟ)

ಬಗೆಗೊಂಡೋವದೆ ಕೇಳದೆಲ್ಲ ಕಳಿಯಂ ಕಾವ್ಯಜ್ಞರಿಂ ಕಲ್ಲದ
ಜ್ಜಿಗದಿಂ ಕಟ್ಟಿದ ಕೆಟ್ಟ ಕನ್ನಡದ ಕಾಬ್ಬಿಬ್ಬಂಗಳಂ ಬಟ್ಟಿಸಾ
ಮಿಗಲು ಕೇಳಿಸಿ ತಾಮೆ ತಮ್ಮ ಮನದೊಳ್ ಸರ್ವಜ್ಞರೆಂದಿರ್ಪ ಕ
ಬ್ಬಿಗರು ಬ್ಬಿಗರೆಂಬ ಲೆಕ್ಕದೊಳಗೇಂ ಭೂಭೃತ್ಸಭಾಭೂಷಣಂ ||೩೫||

ನವರಸ ಪ್ರಸರದೊಳ್ ಲಲಿತಬಿಂಬಿತ ಸರ್ವಪದಾರ್ಥದೊಳ್ ಮಹಾ
ಕವಿಕುಲಸೇವ್ಯದೊಳ್ ಲಸದಳಂಕೃತಿ ಕಂಜನಿವಾಸದೊಳ್ ಜನೋ
ತ್ಸವಕರದೊಳ್ ಸರಸ್ವತಿ ಮನೋಮುದದಿಂ ಜಲಕೇಳಿಯಾಡುವಳ್
ಪ್ರವಿಮಳ ನವ್ಯಕಾವ್ಯ ಕಮಳಾಕರದೊಳ್ ಕವಿರಾಜಮಲ್ಲನಾ ||೩೬||

ಧರೆ ಲೇಸೆಂಬಾಸೆಗಾಱಂ ಪರಪುರುಷಗುಣಾನ್ವೇಷದೊಳ್ ಸೈಪುಗಾಱಂ
ಸಿರಿಯೊಳ್ ಕಟ್ಟಣ್ಮುಗಾಱಂ ವಿತತ ವಿತರಣೋತ್ಸಾಹದೊಳ್ ಗೆಲ್ಲಗಾಱಂ
ಪರನಾರೀವ್ರತದೊಳ್ ಬಿತ್ತರಿಪ ತುರಿಪಗಾಱಂ ಮಹಾಧರ್ಮದೊಳ್ ಮ
ತ್ಸರಗಾಱಂ ಭಾವಕೋತ್ಪಾದಕ ರಸಿಕಕವಿಸ್ತೋಮದೊಳ್ ನೇಮಿಚಂದ್ರಂ ||೩೭||

ಜಗಕೆ ಜನೇಂದ್ರಸೂಕ್ತಿಯೆ ಸರಸ್ವತಿಯಾಕೆಗೆ ರಮ್ಯರೂಪು ಚಿ
ತ್ರಗುಣ ವಿಶಾಲಮಿಲ್ಲಿನಲೆವೇಡಿಪನುತ್ತಮ ಕಾವ್ಯದೊಳ್ ಮೊಗಂ
ನಗೆಮೊಗವಿಲಂಕೃತಿಯಳಂಕೃತಿ ಭಾವಗತಂ ರಸಂ ರಸಂ
ಸೊಬಗೆ ನಾತು ಮಾತು ಸತಿ ಭಾರತಿ ಕೊಳ್ಗಿ ವಿದೇಶಿಕಾಱನೊಳ್ ||೩೮||

ಚದುರ್ ಪುರಾಣಮೂಕ್ತಿಗಳಂ ಸರವೇಱಿಪ ಪೋಲ್ ಭವಾವಳೀ
ಸ್ಮರಣ ರಸಂಗಳನದಾರ್ ಬರೆವರ್ ಸರವೇಱಿಪಂದದಿಂ
ಸಿಂಗ ಸಿ ಮಹಾಕಥಗಳಂ ಪ್ರಥಿತಂಗಳನೊಂದೆ ಕಾವ್ಯದೊಳ್
ಬರೆದ ನಿನ ಸಮಗ್ರನೊ ಕವೀಶ್ವರರೊಳ್ ಕವಿರಾಜಕುಂಜರಂ ||೩೯||

ಎಂದೆಂದು ಪರಸೆ ಗುರುಜನ
ಮೊಂದೊಂದನೆ ಪೊಗೞೆ ಬುಧಜನಂ ಜಿನಕಥೆಯೊಳ್
ಸಂದಿಸಿ ವಸುದೇವಾಚ್ಯುತ
ಕಂದರ್ಪರ ಕಥೆಗಳನಿತುಮಂ ವಿರಚಿಸುವೆಂ ||೪೦||

---

1 ಪ್ರಾಕ್ಕ (ಜ) 2 ಬಂಟಿ (ಜಡಣ) 3 ಗೇ (ಜ) 4 ಣಾ (ಜ) 5 ಣ್ (ಚಟಡಣ) 6 ಗೆಲ್ಲ (ಣ) 7 ಪ (ಚಣ) 8 ವಿ (ಟಡಣ) 9 ರಸ (ಡ) 10 ತೋಳ್ (ಣ) 11 ವಲಂ (ಜ) 12 ಇಂದೆಂದೆ (ಜ) 13 ವಂ (ಚಟಡಣ) 14 ದೆ (ಜ) 15 ಘಂ (ಡ) 16 ಡಿದೆಂ (ಜ)

ಈ ರಸವತ್ಕೃತಿಯೊಳಹಂ
ಕಾರ ಜರಾಸಂಧ ಕಾ[1]ಲ[1]ನೇಮಿಕುಮಾ[3]ರರ್[2]
ಶ್ರೀರಮಣರ್ ಧೀ[3]ರರ್ ಧೃ[3]ತ
ಧೀರಲಲಿತ ವೀರಶಾಂತ ಧೀರೋದಾತ್ತರ್ ॥೪೧॥

ಒಡವುಟ್ಟಿದ ಕೌಸ್ತುಭಮಣಿ
ಯೊಡನಿರಲಾಗೆಂದು ಬಿಟ್ಟು ವಿಷ್ಣುವಿನುರಮಂ
ಬಿಡು[4]ವ[4]ಸರ್ಗೆ ಪದ್ಮನಾಭನ
ಪೊಡಂಗಿನುರದಲ್ಲಿ ಲಕ್ಷ್ಮಿ ಸಲೆ ನೆಲಸಿರ್ದಳ್ ॥೪೨॥

ವದನಂ ಚಂದ್ರಪ್ರಭಂ ವಿಕ್ರಮುಭುಜಮಜಿತಂ ಪಾಣಿ ಪದ್ಮಪ್ರಭಂ ಸಂ
ಪದನೊಂದುಂ ವರ್ಧಮಾನಂ ಗುಣತತಿ ವಿಮಳಂ ತನ್ನ ಸಂಪೊಂದನಂತಂ
ಹೃದಯಂ ಸ್ವಾಧೀನಧರ್ಮಂ ಮತಿ ಪುರುಚರಿತಂ ಶೀತಲಂ ಸುವ್ರತಂ ತಾ
ನವಜಂ ಪ್ರತ್ಯಕ್ಷತೀರ್ಥೇಶ್ವರನೆನೆ ನೆಗಳ್ದಂ ಪದ್ಮನಾಭಪ್ರಧಾನಂ ॥೪೩॥

ಆ ಪದ್ಮನಾಭದೇವಂ
ಶ್ರೀಪತಿ ಪುಣ್ಯಪ್ರಭಾವದಿಂ ನೇಮಿ[5]ಯ[5] ವಿ
ದ್ಯಾಪ್ರಪುಳಜಲಧಿ ಭವಕ್ಕ[6]ತಿ[6]
ರೂಪದ ಕೌಸ್ತುಭಕೆ ಸುಭಗವಲ್ಲಭನಾದಂ ॥೪೪॥

ಬೆಲೆಯಿಂದಕ್ಕುಮೆ ಕೃತಿ ಗಾ
ವಿಲ ಭುವನದ ಭಾಗ್ಯದಿಂದಮಕ್ಕುಂ ನೋಲ್ಪಂ
ಬೆಲೆಗೊ[7]ಟ್ಟು ತಾರ ಮಧುವಂ[8]
ಪುಲಯಾಸಿಲನಂ ಮನೋಜನಂ ಕೌಮುದಿಯುಂ ॥೪೫॥

ಕವಿ ಕಾಂಚನಕಣಿಕೆಗೆ ಮಾ
ಜುವನೇಕೆಂದು ನುಡಿಗಳನಳಿಗೆ ಮಾಣಿಕಮಂ ಮಾ
ಜುವ ಕೆಂಪಿನ ಚತುರ್ವರ್ಗ
ಭುವನಮೆ ಬೆಲೆಯೆನಿಸೆ ಕೃತಿಯನಮಳಾಕೃತಿಯಂ ॥೪೬॥

---

1 ಮ (ಜದ) 2 ರ (ಜ) (?ಟ) 3 ರದ್ಧರ್ (ಜ, ರೋದ್ಧ (?ಟ) 4 ವಿ (ಜ) 5 ದಗಿನಪು (ದ, 6 ಯು (ಜ) 7 ತ (ಜ) 8 ಬ್ಬಿಗಳ ಮಧುರಂ (ಜ) ಲ್ವಾಕಾರವಧುವಂ (ಡ)

ಎಣಿ[1]ಸ[1]ದೆ ಗುಣಮಂ [2]ಕಾಜಿ[2]ನ
ಮಣಿಯಂ ಮಾಱುವವೊಲಹಹ ನಿನಗಂ ತನಗಂ
ಪಣಕೆ ಕೃತಿಯೆಂಬ ಚಿಂತಾ
ಮಣಿಯಂ ಮಾಱುವನ ಬುದ್ಧಿ ಗಾಂ ಬೆಱಗಾದೆಂ ||೪೭||

ಒಡವೆ ತನಗಪ್ಪೊಡೆಂತಾ
ದೊಡಮಾದಪುದಿನ್ನ[3]ದರ್ಕೆ[3] ಕಬ್ಬಂಬೇೞ್ದುಂ
ಜಡಮತಿಗಳ ಕ[4]ರ್ಚ[4]ದ ಕಾ
ಲ್ವಿಡಿಯಲ್ವೇೞ್ಕುಮೆ ಬುಧಂಗೆ ವಿದ್ವತ್ಸಭೆಯೊಳ್ ||೪೮||

ನಿಧಿ ದೊರೆಕೊಂಡೊಡಂ [5]ಜರಗುಗಚ್ಚು[5]ವರೇ ಮಿಗೆ ಮುಗ್ಧರುಂ ಸುಧಾಂ
ಬುಧಿ ದೊರೆಕೊಂಡೊಡೇನೊಱವುದೋಡುವರೇ ಸಕಲಾರ್ಥಸಂಭವಾ
ವಧಿ ಜಿನರಾಜರಾಜಿತ ಕಥಾಕಥನಂ ದೊರೆಕೊಂಡೊಡಂ ಪಣ
ಕ್ಕಧಮರನನ್ನ ಬಣ್ಣಿಪರೆ ಚಾರುವಿಚಾರಪರರ್ [6]ಕವೀಶ್ವರರ್ ||೪೯||

ಇದನಱಿದು ನೇಮಿಚಂದ್ರಂ
ವಿದಗ್ಧ ವಿದ್ಯಾಧರೇಂದ್ರನಖಿಳ ಕಳಾಕೋ
ವಿದನುಚಿತ [7]ಶಬ್ದ[7]ವಿದ್ಯಾ
ಸದನಂ ಕವಿಚಕ್ರವರ್ತಿ ಭುವನಾಭರಣಂ ||೫೦||

* ಸುಕರ ಕವಿಶೇಖರಂ ತಾ
ರ್ಕಿಕತಿಲಕಂ ಮಾನಮೇರು ಜಿನಶಾಸನ ದೀ
ಪಕನಕಳಂಕಂ ಭಾ[7]ವ[7]ಕ
ಮುಕುರಂ ಕವಿರಾಜಮಲ್ಲನಪ್ರತಿಮಲ್ಲಂ ||೫೧||

ಪರಮಾರ್ಥಂ ನೇಮಿನಾಮಗ್ರಹಣಮೆ ಪರಮೈಶ್ವರ್ಯದಂ ತತ್ತ್ರಿಲೋಕೀ
ಗುರುಪುಣ್ಯಶ್ಲೋಕ ಸಂಕೀರ್ತನಮೆ ತನಗೆನಿಪ್ಪಾತನೈಶ್ವರ್ಯವಿನ್ನೇ
ವಿರಿಮೊ ಪೇೞೆಂದು ಪಾಪಕ್ಷಯಮನ[8]ಯಲ[8]ತಾ ಕಂದಮುಂ ಭಕ್ತಿಯಿಂದಂ
ಹರಿವಂಶಕ್ಷತ್ರಚೂಡಾಮಣಿಯ ಚರಿತಮಂ ಪೇೞಲುದ್ಯುಕ್ತನಾದಂ ||೫೨||

---

1 ಸಿ (ಚಟಡ) 2 ಕಾಚಿ (ಗ) ಗಾಜಿ (ಡಣ) 3 ದಿರ್ಕೆ (ಣ) ದಕ್ಕೆ (ಗಚಟಡ) 4 ಪ್ಪಿ (ಜಡ) 5 ಬರಗುಗಚ್ಚು (ಚಟ) (ಜ) ಬರೆ- ವಿಗಂಜು (ಣ) 6 ಸಬುದ (ಚಟಣ) ಪಬುಧ (ಡ) 7 ವು (ಣ) 8 ಲಯ (ಜ) * 'ಜ' ಪ್ರತಿಯಲ್ಲಿಲ್ಲ.

ವ|| ಅದೆಂತೆಂದೊಡೆ

ನಿಯತಪ್ರಾಲೇಯ ದೀಪ್ತಿದ್ಯುಮ[1]ಣಿ ಭ[1]ಗಣ ದೀಪ್ರೋಜ್ವಳಾಕೃತ್ರಿಪಾತ್ಕೋ
ದಯಮಪ್ಪಾಕಾಶಮೆಂಬಾಗಸವ[2]ಳಿಕ[2]ನನಂತೈಕ ಸಂಶುದ್ಧ ಸಿದ್ಧಾ
ಲಯದೊಳ್ ಸಾಮರ್ಥ್ಯದಿಂ ಮುಟ್ಟದೆ ನತಭುವನರ್ ಸಿದ್ಧ[3]ರೇಜಿ[3]ರ್ದ ಪೀಠ
ತ್ರಯಮೆಂಬಂತಿರ್ಪುದವ್ಯಾಹತ ಜಿನಪತಿ ಬೋಧಾವಲೋಕಂ ತ್ರಿಲೋಕಂ ||೫೩||

ಅಂತೆ[4]ಸೆದಿ[4]ರ್ಪುದಧೋಲೋ
ಕಂ ತಿರ್ಯಗ್ಲೋಕಮೂರ್ಧ್ವಲೋಕ[5]ಮದವ[5]ಱಿಯೊಳ್
ಕಾಂತಮೆ[6]ನಿಸುವು[6]ದು ನರಲೋ
ಕಂ ತನುಭೃತ್ಪುಣ್ಯ ಪಾಪ ಸಸ್ಯಕ್ಷೇತ್ರಂ ||೫೪||

ವ|| ಆ ಮಧ್ಯಮಲೋಕದ ಮಧ್ಯಪ್ರದೇಶದೊಳ್

ಅಂಬುಧಿಯೊ[7]ಳುದಿ[7]ರ್ದು ತೇಂಕುವು
ದುಂಬರ ಜಂಬುವಿನ ದೋರೆವಣ್ಣವೊಲೆಸೆಗುಂ
ಜಂಬೂದ್ವೀಪಂ ಮಂದರ
ಮಂ ಬಲವರ್ಪರುಣ ಕಿರಣದಿಂ ಕಟ್ಟಲೆಯಿಂ ||೫೫||

ವ|| ಆ ಶರಧಿ ಸರೋವರಕ್ಕಳಂಕಾರವಾದ ಜಂಬೂದ್ವೀಪಮೆಂಬ ಕಮಲದ ಕರ್ಣಿಕೆಯಂತೆ

ಎನಗುರ್ವೀಧರವೈರಿ ಬಂಧು ಜಯದರ್ ದೇವರ್ಕಳಿನ್ನಲ್ಲಿ ಕಲ್
ಕನಕಂ ಪಾಱುವ ಪಕ್ಕಿ ಭಾನು ಮರನೆಲ್ಲಂ ಬಂದ ಮಂದಾರಮಾ
[8]ವ[8]ನಗಂ ಮತ್ಸಮಮೆಂದು ಬೀಗಿ ಬಳೆದಂತಿರ್ಕುಂ ಜಿನಸ್ನಾನಪಾ
ವನವಾ[9]ರ್ನಿ[9]ರ್ಜರ ನಿರ್ಜರೋಜ್ವಲಮಣಿ ಶ್ರೀಕಂದರಂ ಮಂದರಂ ||೫೬||

[10]ಅದಱಿಯೆ[10]ಪೂರ್ವಾಪರದೊಳ್
ವಿದೇಹವೆರಡಿರ್ಪುವವಱೊಳೊಂದೊಂದಱೊಳಂ
ಪದಿನಾಱು ನಾಡು ಚಂದ್ರನ
ಪದಿನಾಱುಂ ಕಳೆವೊಲಖಿಳ [11]ನಿರ್ಜರ[11]ಸೇವ್ಯಂ ||೫೭||

---

1 ಣಿ (ಣ) 2 ಳಂಕಿ (ಜ) ಳಿಕಿ (ಟಡ) 3 ರೆಲ್ದಿ (ಡ) 4 ಸಿಸಿ (ಚಟಡಣ) 5 ಮುವದ (ಚ) ಮಂವದ (ಟ) ಮದದ (ಣ) 6 ಸೆದಪು (ಣ) 7 ಳಿ (ಗಜಟ) 8 ವು (ಣ) 9 ನಿ (ಜಟ) 10 ಆಧರೆಯು (ಡ) 11 ಜನಪುರ (ಟಡ)

ಪರಭೃತಭೃಂಗ ಕೀರಕಳಹಂಸೆಗಳಲ್ಲದೆ ಕಾಕ ಘೂಕ ಭೀ
ಕರ ಖಗಮಿಲ್ಲ ಮೇಲ್ಮರಗಳಲ್ಲದೆ ಕೀಟ್ಮರನಿಲ್ಲ ಹಸ್ತಿ ಕ
ತ್ತೂರಿ ಮಿಗಮಲ್ಲದುಗ್ರ ಮೃಗಮಿಲ್ಲ[1]ಜಿನ[1]ಲ್ಲದೆ ಪಾಪಮಿಲ್ಲ ಭಾ
ಸುರ ಜಿನಧರ್ಮಮಲ್ಲದೆ ಕುಧರ್ಮದ ವಾರ್ತೆಯುಮಿಲ್ಲ ದೇಶದೊಳ್ ||೫೮||

ಋತಮೆಸೆದಿರ್ಪ ನಿಸ್ಪೃಹತೆಯಿರ್ಪ ದಯಾಗುಣಮಿರ್ಪ ಶೋಭಮಿ
ರ್ಪತಿಶಯ ತೋಷಮಿರ್ಪ ಮತವಿರ್ಪೆಡೆಯೊಳ್ ಪುಸಿಯಿರ್ಪ ಚೌರ್ಯಮಿ
ರ್ಪತಿವಧೆಯಿರ್ಪ ಪಾರದರಮಿರ್ಪ ಪರಿಗ್ರಹಕಾಂಕ್ಷೆಯಿರ್ಪ ಕು
ತ್ಸಿತಮತಮಿರ್ಪುದಲ್ತು ಬೆಳಗಿರ್ಪೆಡೆಯೊಳ್ ತಮಮೆಂದುಮಿರ್ಪುದೇ ||೫೯||

ಅಸದಳಮಾಗಿ ಸಂದ ಜಿನಶಾಸನ ವರ್ತನೆಯಿಂ ಜಿನಾಗಮಂ
ಬೆಸಸಿದ ಭಂಗಿಯಿಂ ನೆಗ[2]ೞ್ದ[2] ಶಾಂತಿಕದಿಂ ಸಿರಿ ತುಳ್ಕೆ ಸಂತಸಂ
ಪಸರಿಸೆ ಕೆಯ್ಗಳೊಳಂ ಕಳವೊಳಂ[3]ಬೆಳೆ[3]ದೊಟ್ಟುವ ಧಾನ್ಯವರ್ಗದಿಂ
ಪುಸಿ ಪುಸಿ[4][ಗಿ]ಟ್ಟಿಯಿ[4]ಟ್ಟಿಗೆ ಬಱಂ ಬಱಕಾದುದು ತನ್ಮಹೀತಳಂ ||೬೦||

ವ|| ಆ ವಿದೇಹಂಗಳೊಳಪರ ವಿದೇಹಮೆ ದೇಹಮಾಗೆ,

ಮೇದಿನಿ ಬೆಂ[5]ಗೆ ಬಿಟ್ಟ[5] ಮುಡಿಯಂತೆಸೆದಿರ್ಪುದು ಪುಷ್ಪಿತಂ ತಟೀ
ಪಾದಪವೀ[6]ಥಿ[6] ಪಂತಿಗುರುಳಂತಿರೆ ಸಂಚಳ ಮೀನ ಸಂಚಯಂ
ಪೂಮಱುಗಲ್ ತಡಂ ತೊಡರ್ಮ ತೋರ್ಪವೊಲೊಪ್ಪಿರೆ ಕೊಂಕುವೆತ್ತ ಸೀ
ತೋದೆ ಸಡಿಲ್ದು ನೀ[7]ಳ್ದ[7] ಶರದಿಂ ನಿಱಿಗೊಂಡು ಬಟಿಲ್ದ ಭಂಗಿಯಿಂ ||೬೧||

ತೆರೆ ಪಲ್ಲೆನೆ ಪಲ್ಲವತರು
ಪರಿವೃತ ದರಿಯಧರವೆನೆ ಪರಾಗದ ಕಂಪಂ
ಪರಪುವೆಲರ್ ನಱುಸುಯ್ಯೆನೆ
ಧರಣಿಯ ಬಾಯ್ದೆಱೆಯ ತೆಱದಿನಾ ತೊಱೆ ಚೆಲ್ವಿಂ ||೬೨||

ವ|| ಆ ತೊಱೆಯ ಬೆಡಂಗುವಡೆದ ಬಡಗಣ ತೆಂಕಣ್ಣ ತಡಿಯೊಳ್ ಬಾಂದೊ
ಱೆಯ ತಡಿಯ ಪದಿನಾಱುಂ ಸ[8]ಗ್ಗಂ[8]ಗಳಂತಿರ್ಪ ಪದಿ[9]ನಾಱುಂ ನಾಟ್ಕ[9]ಳೊಳಗೆ

---

1 ಯಮಿ (ಕ) ಯಮ (ಜ) ದಯಮ (ಡ) 2 ಳ್ದ (ಣ) 3 ಬಗೆ (ಚಟಡಣ) 4 ಯಿಟ್ಟಿಯಿ (ಚಟಡಣ) ವಿಳ್ದಿವಿ (ಜ) 5 ಗಿಟ್ಟು (ಟ) ಗೆ ಬಿಟ್ಟು (ಡ) 6 ದಿ (ಣ) 7 ಳ್ಧ (ಜಟಣ) 8 ಗ್ಗ (ಟಣ) 9 ನಾಟ್ಗಿ (ಚಟಡ)

ಬಡಗಣ ತಡಿಯ ವಪ್ರೆ ಸುವಪ್ರೆ ಮಹಾವಪ್ರೆ ವತ್ಸಕಾವತಿ ಗಂ[1]ಧೆ[1] ಸುಗಂ[1]ಧೆ[1] ಗಂಧಿಳೆ
ಗಂಧಮಾಳಿನಿಯೆಂಬ ನಾ[2]ಟ್ಕಿ[2]ಳೊಳಗೆ

ತಿಳಿಗೊಳನಬ್ಜಗಂಧಿಯದಱಾರಮೆ ಚಂಪಕಗಂಧಿ ಕಾನನಂ
ಮಳಯಜಗಂಧಿ ಕೇಳಿನಗ[3]ಸಾ[3]ನು ಮೃಗೋದ್ಭವಗಂಧಿ ಕೆಯ್ವೊಲಂ
ಕಳಮ ಕದಂಬಗಂಧಿಯೆನೆ ಸಾರಸುಖಾಮ[4]ರ[4] ಗೇಹಗಂಧಿ ಗಂ
ಧಿಳವಿಷಯಂ ಸಮಸ್ತವಿಷಯಂಗಳ ವಲ್ಲಭನಪ್ಪುದೊಪ್ಪದೇ ||೬೩||

ಮದನಂಗುಪ್ಪರವಟ್ಟವಾಗದ ತಳಿರ್ ಕಾಮಂಗೆ ಕೋದಂಡಮಾ
ಗದ ಕರ್ವಂಗಭವಂಗೆ ಭಂಗುರ ಧನುರ್ಜ್ಯಾಲೀಲೆ ತಾನಾಗದು
ನ್ಮದ ಭೃಂಗಾವಳಿ ಚಿತ್ತಜಂಗೆ ಜಗಮಂ ಗೆಲ್ದೀವ ಬಾಣಂಗಳಾ
ಗದ ಪೂಗಳ್ ಮಱಿದಾಗವೆಂಬ ವಿವಿಧೋದ್ಯಾನಂಗಳಾ ದೇಶದೊಳ್ ||೬೪||

ಎಳಸುತ್ತಿರ್ಕುಂ ಪಿಕಾ[5]ಳಾಪೆಯರ[5] ಕಳಿಕೆಗೌತ್ಸುಕ್ಯದಿಂದಂ ಶು[6]ಕಶ್ಯಾ[6]
ಮಳೆಯರ್ ಮಾಂಗಾಯ್ಗೆ ಭೃಂಗಾಳಿಕೆಯರರಲ್ಗೆ ಚಂಚಚ್ಚಕೋರಾಕ್ಷಿಯರ್ ತಾ
ವೆಳ[7]ನೀರ್ವೆ[7]ಳ್ದಿಂಗಳೊಳ್ ಬೆಂಜಿಗೆ ಸಮದ ಮರಾಳಾಂಗನಾಯಾನೆಯರ್ ಪೂ
ಗೊಳಕುದ್ಯಾನಂಗಳೊಳ್ ಬರ್ಹಿಣಕಚಭರೆಯರ್ ಕೇಳಿಮೋಕ್ಕೆ ನಿಚ್ಚಂ ||೬೫||

ಎಳನೀರಂ ಜಿನಮಜ್ಜನಕ್ಕೆ ಜಿನಪಾದಾಬ್ಜಕ್ಕೆ ಪೂವಂ ಫಳಾ
ವಳಿಯಂ ಪೂಜೆಗೆ ತೋರಣಕ್ಕೆ ತಳಿರಂ ತಾಮಿತ್ತು ಪುಣ್ಯಪ್ರಭಾ
ಫಳಮಂ ಪೇಱದ ನಾ[8]ಡ[8] ನಂದನವನಂ ಸಗ್ಗಕ್ಕೆ ಪೋದಂತೆ ಕ
ಣ್ಗೊಳಿಕುಂ ನಂದನಮಲ್ಲದಂದು ಬನಕಂ ಸಗ್ಗಕ್ಕಮೇಂ ಸಂವಾದಂ ||೬೬||

ವ || ಎನೆ ಸೊಗಯಿಸುವ ಸುಗಂಧಿಳ ವಿಷಯಕ್ಕೆ ಭೂಷಣವಾಗಿ

ಮುತ್ತಿನ ತೋರಣಂ ಗಜದ ನೆತ್ತಿಯ ಮುತ್ತುಗಳೆಲ್ಲ ಪಲ್ಗಳೊಳ್
ಪತ್ತಿದ ಪೋಲ್ವೆಯಂ ಪಡೆವ ಗೋಪುರ ಪಂಚಕ[9]ಮಾಸ್ಯ[9]ಮಾ[10]ಗೆ[10] ಮೈ
ವೆತ್ತಿರೆ ಪಾಯ್ದು ಕುಂಭಿನಿಯ ಮೇಲೆ ಸುಧಾಧವಳಂ ಪ್ರತಾಪಮಂ
ಪೊತ್ತುದದೊಂದು ಸಿಂಹಪುರಮೆಂಬ ಪುರಂ [11]ಘ[11]ನಘೋಷಗರ್ಜಿತಂ ||೬೭||

---

1 ದಿ (ಜ) 2 ಳ್ಗ (ಚಟ) ಪಂಗ (ಡ) 3 ಸೂ (ಜ) 4 ಳ (ಣ) 5 ಳಿಪ್ರತತಿ (ಗಟ) ಳಿಪ್ರಿಯರೆ (ಚ) ಳಾಪೆಯಿರೆ (ಜ) 6 ಕಾವ್ಯಾ (ಚಟಡ) 7 ನೀರ್ಬೆ (ಚಣ) 8 ದ (ಣ) 9 ಶೂನ್ಯ (ಜ) 10 ಗಿ (ಣ) 11 ಜ (ಚಟಡಣ)

ಸುರತದ ಸುಗ್ಗಿ ಕಾಮನ ಸರಲ್ಗಳ ಪೂವಿನ ಪೊಟ್ಟು ಮುತ್ತಿನಾ
ಭರಣದ ಜೊನ್ನಮುವ್ವಳಿಪ ನೀಲದ ಕಾಳದ ಮರ್ವು ಬೆಟ್ಟದೊಂ
ದುರಿಗಳ ಬೆಟ್ಟ ಬೇಸಗೆ ಸುರಾಗರಸಂಗಳ ಕಾರ ಮುಂಬು ತ
ತ್ಪುರವರದಲ್ಲಿ ಸಾತ್ವಿಕದ ಪೈಸಡುಕಂಗಳ ಮಾಗಿಯಾಗಳುಂ ||೧೮||

ವ|| ಆ ಪುರದ ಪರಮೇಶ್ವರನ ಪರಮ ಪುರುಷೋತ್ತಮಾವತಾರನವಾರಪಾರ ಗಂಭೀರನವಾರಪುರುಷಾರ್ಥಪ್ರಸೂ[1]ತ[1]ಶೀತಳನಭಸ್ಥಳ ತಿಳಕ ತುಷಾ[2]ರಕರ[2] ಶಿಶಿರ ಶರದಭ್ರವಿಭ್ರಮ ದಶದಿಶಾ ಮುಖಮಂಡಲಮಂಡನೀಭೂತ ವಿಶದ ಯಶಃಪ್ರಹಾಸನ ನರ್ಹದ್ದಾಸನೆಂಬೊಂ

ಮದನಂ ರೂಪಿಂಗೆ ದಾಸಂ ಮನೆಗೆ ನೃಪನ ಪುಣ್ಯೋದಯಂ ದಾಸನರ್ಕಂ
ಮದನಸ್ತ್ರೀ[3]ಜಕ್ಕೆ[3] ದಾಸಂ ವಿಧು ವದನ ಯಶಃಶ್ರೀಗೆ ದಾಸಂ ಕೃತಾಂತಂ
ಕದನ ಕ್ರೋಧಕ್ಕೆ ದಾಸಂ ಗುರುಭುಜಕೆ ಜಯಂ ದಾಸನೆಂದಂದದಿನ್ನಾ
ಪುರ್[4]ಪೆಸ[4]ರ್ಹದ್ದಾಸ ಭೂಸಂಗರಸರಿಸಕದಿಂದಾಸೆಯಿಂ ದಾಸರಾದರ್ ||೧೯||

ಪೂಸಲ್ ಮೆಯ್ಗರ್ಹದಂಘ್ರಿದ್ವಯ ಪರಿಚಯ ಪೂ[5]ತೋ[5]ತ್ತಮಂ ದಿವ್ಯಗಂಧಂ
ಸೇಸಿಕ್ಕಲ್ ಗಂಧಶಾಲ್ಯಕ್ಷತ ಶ[6]ತ[6]ಮನಿಶಂ ಪುಷ್ಪದಾಮಂ ತುಱುಂಬಲ್
ಸೀನಕ್ಕಂಬಾದುದೆಂಬಂದೆಲೆ ಕುಲವಟಿಯಿಂ ಬಂದ ದಾಸತ್ವಮರ್ಹ
ದ್ದಾಸಂಗೇನಣ್ಣ ಸಾಬ್ಬಿರ್ತನಮೆ ಸಕಲ ಪೃಥ್ವೀಪತಿಪ್ರಾರ್ಥನೀಯಂ ||೨೦||

ಜಿನಪತಿಯ ಪೆರ್ಮೆಗವನೊ
ರ್ವನೆ ದಾಸನೆ ದಾಸನಲ್ಲದವರಾರ್ ಜಗದೊಳ್
ಜಿನನುಂಡೊಲ್ಲದೆ ಬಿಸುಟಿಂ
ದ್ರ ನರೇಂದ್ರಾದ್ಯಖಿಳ ರಾಜ್ಯ[7]ಸು[7]ಖ[8]ಮುಣ್ಬ[8]ವರೊಳ್ ||೨೧||

ನಿರಹಾಸಂ ಕುಚಕಂಜಕುಟ್ಮಲಯುಗಂ ಮುಗ್ಧಾನನಂ ವರ್ಜಿತಾಂ
ತರಹಾಸಂ ಕುಸುಮಚ್ಯುತಂ ಕಚಭರಂ ಕರ್ಣಂ ಕನತ್ಕರ್ಣಿಕಾಂ
ಬುರುಹಂ ಭ್ರಷ್ಟಮೆನಲ್ಕೆ ಶೋಕತ[9]ಪ[9]ಮಂ ನಿಷ್ಕೋಶ ನಿರ್ಗ್ರಂಥಮಿ
ರ್ದರುಹದ್ದಾಸನ ಖಡ್ಗಮಾವುದು ರಿಪುಸ್ತ್ರೀಯರ್ಗೆ [10]ಕಾ[10]ರುಣ್ಯದೊಳ್ ||೨೨||

1 ಶಾ (ಚಟದ) 2 ಕರ (ಜ) 3 ಜಂಗೆ (ಚಟಡಣ) 4 ದದ (ಣ) ದೆದ (ಚಟಡ)
5 ರೋ (ಜ) 6 ರ (ಜ) 7 ಮು (ಚಟಡ) 8 ಮೆಂಬಿ (ಜ) 9 ಮ (ಣ) 10 ಶಾ (ಜ)

ಜಿನದತ್ತೆಯೆಂಬಳಾ ಭೂ
ಪನ ಕುಲವಧು ತನ್ನ ದಾನನೆಂದೊಸೆದು ಕರಂ
ಜಿನನಿತ್ತ ಪುಣ್ಯಲಕ್ಷ್ಮಿಯ
ನನುಕರಿಸುವಳೆಸೆಯೆ ಸಿರಿಯೊಳಂ [1]ಶೀಲಮೊ[1]ಳಂ ॥೭೩॥

ಮೊಲೆಬಿಣ್ಪಿಂ ಮುಱಿದಪು[2]ದೀ[2]
ಲಲನೆಯ ಬಡನಡುವಿ[3]ದೆಂ[3]ದು ಕುಸುಮಶರಂ ಕೈ
ವಲದಾಂಕೆಗೊಟ್ಟ ನೀಲದ
ಸಲಿಗೆಯಿದೆನೆ ರೋಮರಾಜಿ ರಾಜಿಸಿ ತೋರ್ಕುಂ ॥೭೪॥

ಅಲರಾಗಿ ನಿರೀಕ್ಷಿಸಿ ಕಾ
ದಲನಂ ಮುಗುಳಾಗಿ ಸೋಂಕಿದೆಡೆಯೊಳ್ ಕಾಮಂ
ಗಲಸದೆ ಸರಳಾಗಿ ಪಟಿಂ
ಚಲೆವುದು [4]ತೊಳವ[4]ವಳಪಾಂಗವಲರ್ಗಳ ಪಾಂಗಂ ॥೭೫॥

ಪೋ ವ್ರತಮಾವ ಪೆಂಡಿರೊಳಮಿರ್ದೊಡಮೇನೊ ವಿಳಾಸವಾಂತ ನಿ
ತ್ಯವ್ರತಮಾಕೆಯೊಳ್ ಸೊಬಗುನೆತ್ತ ಗುಣವ್ರತಮಂ ಜಗಂ ವಿಳಾ
ಸವ್ರತಿ ಕೊಂಡವೇ ಸವಿರತಿವ್ರತಮಾ ನೃಪನೆತ್ತಿದೇಕಪ
ತ್ನೀವ್ರತಮೆಯ್ದೆ ಸೂಚಿಸವೆ ಕಾಂತೆಯ ರೂಪಿನ ಪೆಂಪಿನೊಳ್ಪೆಯಂ ॥೭೬॥

ಮಂದಾರಮೊಂದು ಪುಟ್ಟುವ
ಮಂದರಮುಂ ವಾರ್ಧಿವೇಲೆಯುಂ ಮಾಣಿಕಮೊ
ಲ್ದೊಂದೊಗೆವ ರೋಹಣಾ[5]ದ್ರಿಯ[5]
ಮುಂ ಧರೆಯುಂ ದೊರೆಗೆ ವಂದ ಪತಿಯುಂ ಸತಿಯುಂ ॥೭೭॥

ವ॥ [6]ಅಂತಿ[6]ಷ್ಟವಿಷಯಕಾಮುಭೋಗಂಗಳನನುಭವಿ[7]ಸುತ್ತುಮಿ[7]ರ್ಪಿನಮೊಂದು ದಿವಸಂ

ಮುನಿಚರ್ಯಾಕಾಲಮಿಾ ಧಾರ್ಮಿಕ [8]ಜಿನಗೃಹ[8]ಮಂ ಪುಣ್ಯಮೆಯ್ತರ್ಪ ಕಾಲಂ
ಜಿನದತ್ತಾದೇವಿ ದಾನಂಗುಡುವ [9]ಬ[9]ವಸೆಯೊಳ್ಕಾಲಮಿಾ ಕಾಲ[10]ಮಾ[10]ರುಂ
ಮನೆಯೊಳ್ ಸೂನಂಗಳಂ ಸಂಧಿ[11]ಸಿಡೆ ತಿಮಿತ[11]ಮಾಚಾರದಿಂದೆಂದು ಪೃಥ್ವೀ
ಜನಕೆಲ್ಲಂ ಸಾಱುವಂತೇನೊಗೆದುದೊ ಮಿಗೆ ಮಧ್ಯಾಹ್ನ ಶಂಖಪ್ರಣಾದಂ ॥೭೮॥

---

1 ರೂಪಿನೊ (ಙ) 2 ವೀ (ಙ) 3 ದೊಂ (ಚಟಡಣ) 4 ಪೊಳೆವ (ಜ) ತೊಳಪ (ಙ) 5 ಚಳ (ಜ) 6 ಇ (ಜ) 7 ಸಿ (ಚಟಡಣ) 8 ಜನಗೃಹ (ಗಜ) ಜನಗುಣ (ಙ) 9 ಬೆ (ಚಟಡಣ) 10 ವಾ (ಙ) 11 ಸಿದಿತಿಮಿರೆ (ಕ) ಸದಿಮಿಾರಿ (ಜ)

ಸದಮಳ ಪಾತ್ರಕ್ಷೇತ್ರದೊ
ಳಿದು ಬಿತ್ತುವ ಪದದ ಪೊಟ್ತು ಗೃಹಮೇಧಿಗದೇ
ವುದೊ ಮಧ್ಯಾಹ್ನದ ಪೊಟ್ತಿ
ಲ್ಲದ ಪೊ[1]ಟ್ಟೊ[1] ಬಂಜೆವೊಟ್ತು ತಾನದು ಪೊಟ್ತೀ ||೭೯||

ವ|| ಅದಂ ಕೇಳ್ದು ಕಾರ ಮೊಟಗಂ ಕೇಳ್ದ ನವಿಲಂತೆ ನಲಿದು ಯತಿ[2]ಗಳ್[2] ಪಾವನ[3]ಪದಪ[3]ದ್ಮಂಗಳಂಗಣಮಂ ಮೆಟ್ಟೆ ಪವಿತ್ರಂ ಮಾಡ್ಪ ಪೊಟ್ತಾದುದೆಂದು ಬೇಗ ಮಬ್ಬಿಗಳಂ [4]ಬಂ[4]ದಿಸಿ ಬಸದಿಯಂ ಪೊಱಮಟ್ಟರಸುನೆಯ ಬಾಗಿಲ್ವಾಡದೊಳ್ ವಿಭವಂ ಬೆರಸು ಬಂದಿರ್ದಳನ್ನೆಗಂ

ಹರಿಯುಂ ಕರಿಯುಂ ಪುಲಿಯುಂ
[5]ಹ[5]ರಿಣಿಯುಮೊಂದಾಗಿ ಮೆಚ್ಚಿ ಬೆಚ್ಚದೆ ಬೆನ್ನೊಳ್
ಬರೆ ಗಡಣದೊಳಾ ನಗರ
ಕ್ಕರಣ್ಯದಿಂ ಚರಿಗೆಗೊಟ್ಟನಂಗಜಮಲ್ಲಂ ||೮೦||

ಪೆಗಲೊಳ್ ದಕ್ಷಿಣಹಸ್ತಮೊಪ್ಪೆ ಸಸಿನಂ ವಾಮಂ ಕರಂ ತಾಗೆ ಗುಂ
ಡಿಗೆಯಂ ದೃಷ್ಟಿಯುಗ ಪ್ರಮಾಣ ಪ[6]ರ[6]ದೊಳ್ ಮತ್ತೆತ್ತಲುಂ ಸೂಸದೊ
ಳ್ಪಗೆ ನಿಷ್ಪಂದಮೆನಲ್ಕೆ ಪೂರ್ವತ[7]ಮ ಕಣ್ಣಂ[7] ಮುಟ್ಟುವಂತೊಯ್ಯಗೊ
ಯ್ಯಗೆ ಕಾಲ್ಗಳ್ ನೆಲಮುಟ್ಟೆ ಚಂದ್ರಗತಿಯಿಂ ಬಂದಂ ಮುನೀಂದ್ರೋತ್ತಮಂ ||೮೧||

ಒಂದುಂ[8]ಪ್ರಾಣಿಗೆ[8] ಭಯಮುಂ
ದಂದುಗಮುಂ ನೋವುಮೆಯ್ದೆ ಬಾರದ ತೆಱದಿಂ
ಬಂದಂ ಚರಿಗೆಗೆ ಬನದಿಂ
ಮಂದಾನಿಲನಂತೆ ಕುಕ್ಕುಟಾಸನದೇವಂ ||೮೨||

ಬೞಿಸಂದು ಮುಂದೆ ಕಂಪಿಂ
ಗೆಱಿಕೆ ಮನಂ ಮೋಲೆ ನೆಗೆದ ಮಲಧಾರಿಗೆ ಮೆಯ್
ನೆಱಲಾದಳಿತತಿ ಪೀಲಿಯ
[9]ಕ[9]ಟಿ[10]ಯಂಬರ[10]ದಲ್ಲಿ ಬರ್ಪ ತೆಱನಾಯ್ತಾಗಳ್ ||೮೩||

---

1 ಟ್ಟಂ (ಚಟ) ಳ್ದು (ಜ) 2 ಯುಗಳ (ಜ) 3 ಪ (ಚಜಣ) 4 ವಂ (ಚಟಡ) 5 ಕ (ಜ) 6 ಥ (ಜ) 7 ನು ಕಣ್ಣಂ (ಜ) ಮುಖಂಣಂ (ಣ) 8 ಪಾಣ್ತಿಗೆ (ಕ) ಪಾಣಿಗೆ (ಡ) 9 ಕ (ಚಟಡಣ) 10 ಯೆಂಬರ (ಗಚಟ) ಯಂಭರ (ಙ)

ಅಡಿಗೆಱಪ ಜನಕ್ಕಾಗಳೆ
ಕುಡ[1]ಲೆ[1] ಸಹಸ್ರಾಕ್ಷಪದವಿಯಂ ಮುನಿ ಕಯ್ಯೊಳ್
ಪಿಡಿದಿರ್ಪಂತೆವೊಲೆಸೆದ
ತ್ರಿಡಿದೊಪ್ಪುವ ಪಲವು ಕಣ್ಣ ಪೀಲಿಯ ಕುಂಚಂ ॥೮೪॥

ಕಾಣಲ್ಬಾರದ ಸೂಕ್ಷ್ಮ
ಪ್ರಾಣಿಗಳಂ ನೋಡಿ ನಡೆಯಲೆಂದಾ ಜೀವ
ತ್ರಾಣನ ಕಾ[2]ಲ್ಗಂ[2] ಕಣ್ಗಳೆ
ಮಾಣಿಕದಂತಾದುವೆನಿಸಿ ತೊಳಗಿದುವುಗುರ್ಗಳ್ ॥೮೫॥

ಮುನಿಪತಿಯ ತೋರ್ಪ[3]ಬರಿ[3]ಯೆ
ಲ್ವಿನ ಪುದುವಿಂ ಬೂದಿ[4]ವಾ[4]ಱುತಿ[5]ರ್ಪಿರಪಿಂ[5] ಕಾ
ಮನ ಸುಟ್ಟ ಕಾಡಿ[6]ದೆ[6]ನೆ ಕ
ರ್ಗನೆ [7]ಗ[7]ನಿತುದು ಮಲದ ಮಸಿಯ ಮ[8]ಸ[8]ಕದಿನಂಗಂ ॥೮೬॥

ಉಲಿವ ದಯಾತರಂಗಿಣಿಯ ಪಾವಸೆ ಕರ್ಬುರ ಕಾಯದೀಪಕೆ
ಜ್ವಲನಮುಮರ್ದಪ್ಪಿಕೊಂಡಸಮಲಕ್ಷ್ಮಿಯ ಮಯ್ಯ ಮೃಗೋದ್ಭವಂ ತಪೋ
ನಲ ನವಧೂಮಲೇಖೆ ಧೃತಿಪರ್ವತ ಲಗ್ನಘನಾಳಿ ಪಾಱಿಪ್ರೋ
ಗಲೆ ಪೊಱಮಟ್ಟ ಪಾಪಮೆನಿಸಿತ್ತು ಮಲಂ ಮಲಧಾರಿದೇವನಾ ॥೮೭॥

*ವ॥ ಅಂತು ತನ್ನ ಪುಣ್ಯಮೆ ಬರ್ಪಂತೆ ಬರ್ಪ ಪರಮ[9]ರ್ಷಿಯರಂ[9] ಕಂ[10]ಡೇಟ್ಟಿ[10]ರ್ಪ ನಿಧಾನಮಂ ಕಂಡಂತೆ ಕೃತಾರ್ಥೆಯಾಗಿ

* [11]ನ[11]ಡೆಮುಡಿ ಗಂಧವಕ್ಷತೆ ಫಲಾವಲಿ ಪೂವಿನಮಾಲೆ ಮುತ್ತು ಕ
ನ್ನಡಿ ಕಳಸಂ ವಿಲಾಸಿನಿಯರರ್ಚನೆ ಮಂಗಳಗೀತ ಭೇರಿ ಬೆ
ಳ್ಗೊಡೆ ಗುಡಿ ತೋರಣಂ [12]ತೊಡಿ[12]ಗೆ ಸೀಗುರಿ ಚಾಮರಮೆಂಬಿವೊಪ್ಪಮಂ
ಕುಡೆ ಜಿನದತ್ತೆಯೇಂ ನಡೆದಳೋ ನಿಲಿಸಲ್ ಮಲಧಾರಿದೇವನಂ ॥೮೮॥

* ವ॥ ಆ ಪ್ರಸ್ತಾವದೊಳ್

---

1 ರೆ (ಜ) 2 ಲಂ (ಜಣ) 3 ಪಿರಿ (ಜ) 4 ಪಾ (ಜ) 5 ರ್ಪರಲಿಂ (ಗ) ರ್ಪರಪಿಂ (ಟ) 6 ಗೆ (ಣ) 7 ಕ (ಣ) 8 ಳ (ಚಟಡ) ಣ (ಣ) 9 ಋಷಿಯರಂ (ಚ) ರುಷಿಯಂ (ಜ) 10 ಡಿದಿರೊಳ್ಪ (ಜ) 11 ಕ (ಜ) 12 ತುಡು (ಜ) * 'ಗಟ' ಪ್ರತಿಗಳಲ್ಲಿಲ್ಲ.

ಕರಟತಟ [1]ಘಟಿ[1]ತ ಮದ ಸುಂ
ದರ ಸುಭಗ ಸಲೀಲಗತಿಗೆ ಸೋಲ್ತು ಕರಂ ಕೇ
ಸರಿಣಿ ನಡೆ ನೋ[2]ಡೆ[2] ರದನಿಗೆ
ಪುರುಡಿಸಿ ಪಾಯ್ವಂತೆ ಪಾಯ್ದುದಲ್ಲಿ ಮೃಗೇಂದ್ರಂ ||೩೯||

ಭೃಂಗ ಮಲಿನೋಪಕಂಠಂ
ತುಂಗ ಶಿಖಾ ಚುಂ[3]ಬಿ[3]ಚಳಿತ ಚಂದ್ರಂ [4]ಗಿರಿಜೇ
ಶಂ[4]ಗೆಣೆವಂದು[5]ದು ಜಗ[5]ದ ಭು
ಜಂಗಮುವಳಯಾ[6]ದಿ[6]ಭಾಸಿ ಚಂದನನಿವಹಂ ||೪೦||

ಅಡಸಿ ಫಣಿ ಸುತ್ತೆ ಚಂದನ
[7]ದಡಿ[7] ಮೊದಲುಮನೊರಸಿಕೊಳ್ವ ಕೊರಲುಮನೆಳಸೊ
ರ್ಗೊಡೆ[8]ದು[8] ಕಟತಟದಿನಿಟಿ[9]ತರೆ
ನಡು[9]ಪೆ[9]ಟ್ಟಿಭಮಲ್ಲಿ ಕಟ್ಟು[10]ಪ[10]ಟ್ಟವೊಲಿರ್ಕುಂ ||೪೧||

ಪಿಡಿದು ಕೊ[11]ಲೆ[11] ಜೀವರಾಶಿಯ
ನಡಿಗಡಿಗರೆಯಾದೊಡಾ[12]ಯುಗಳ[12] ಪ್ರಾಣಮನಾ
ಗಡೆ ಪಾಯ್ದು ಕೊಳ್ವ ತೆಱದಿಂ
ಕುಡಿವುವು ಬಾಯ್ದೆಱೆದು ಪವನನಂ ಫಣಿತತಿಗಳ್ ||೪೨||

ಜೆಡೆ[13]ಯಂ ಬಕ್ಕಳೆ[13]ಯುಮನಾ
ಳ್ದಡವಿಯೊಳಿರ್ದೆಲರ[14]ನಲ[14]ದೆ ಕೋಟರ ಮುಖದಿಂ
ಕುಡಿವ ವಟವಿಟಪಿಪಟಳಂ
ತುಡುಂಕುವಂತಿರ್ಪುದಾವ ಚೋದ್ಯಮೊ ದಿವಮುಂ ||೪೩||

ನೀರಡಸಿದ ಕಾಸರಪತಿ
ಕೇರೆಯ ನಗದೊಸರೆಗೆತ್ತು ನಕ್ಕುವುದಹಿ[15]ಯುಂ[15]
ಸೈರಿಭದ ಬಾಯ ನೊರೆಯಂ
ಸೈರಿಸಿ ಪಾಲೆಂದು ನಕ್ಕುವುದು ಕಾನನದೊಳ್ ||೪೪||

---

1 ಗಳಿ (ಜ) 2 ಡಿ (ಚಡ) 3 ಬಿತ (ಜಡಣ) 4 ನೀರೇಜಂ (ಜ) 5 ವು ವನ (ಜ) 6 ಬಿ (ಜ) 7 ಕಡೆ (ಡಣ) 8 ದ (ಚಜ) 9 ಪು (ಜ) 10 ಪ (ಜಡ) 11 ಳೆ (ಜ) ಡೆ (ಡ) 12 ಯುಗ (ಗಚಟ) 13 ಯುಂಬ (ಜ) ಯುಂಬಕ್ಕಲೆ (ಡ) 14 ನೊರೆ (ಜ) 15 ಯಂ (ಜಡ)

ತಾರಗೆಯೆನೆ ತೊನೆದೊಟ್ಟಿದ
ಮೂರಿಯ ರೋಮಂಥ ಫೇನ ಮಂಜರಿ ನಿಕರಂ
ಕಾರಿರುಳ ತಿರುಳಿದೆನೆ ಮದ
ಸೈರಿಭಮಿರ್ಪುವು ಚಳತ್ತಮಾಳದ ನೆಟಲೊಳ್ ||೪೫||

ಗಿರಿಗುರುಚಪೇಟ ಪಾಟಿತ
ಕರಿಯಂ ಹರಿಕೊಂಡು ಕೇಱಿ ಪಾಱುವುದರುಣಾ
ತ್ಯರುಣತನು [1]ತರುಚರೇಂ[1]ದ್ರಂ
ಶರಧಿಗೆ ಕೈಚಿಟ್ಟ[2]ವೆ[3]ತ್ತಿ ಪಾಱುವ ತೆಱದಿಂ ||೪೬||

ಬಲಿದುಗುರ್ಗಳಿಲ್ಲ ಪಲ್ಗಳ
ಬಲಮಿಲ್ಲ ಕಡಂಗಿ ಕಾದುವುವು ಕಾನನದೊಳ್
ತೊಲಗದೆಳವೆಳಗುಮೆಳಗ
ಟ್ಟಿಲೆಯುಂ ತಲೆ[5]ಯೆತ್ತವಂ[5]ತೆ ಹರಿಕರಿಶಿಶುಗಳ್ ||೪೭||

ತಮಮಂ ಕಾಡೊಳಕೊಂಡು ಕಾದ ಪಗೆ ತಮ್ಮಿರ್ವರ್ಗಮಂತಾದೊಡಂ
ಸಮಮರ್ಕಂ ಸುಡು[4]ತುಂ[4] ನಿಜಾತ್ಮಶಿಖಿಯಿಂ [6]ದ[6]ನಂದಿಪಂ ಚಂದ್ರನಿಂ
[6]ದು[6]ಮಣಿ ಸ್ರೋತದಿನೆಂಬವೋಲ್ ವಿಪಿನದೊಳ್ಕಾದುತ್ಪಳಾನೀಕಮಂ
ಕಮಳಾನೀಕಮನರ್ಕ ಗೃಹ್ಯಕುಲಮಂ ಕೊಲ್ಗುಂ ವನೇಭೋತ್ಕರಂ ||೪೮||

ಆ ವನದೊಳಿರ್ಪ್ಪದವ ತಮ
ಸಾವೃತದೊಳಗೊಂದು ಶಬರ ಶಿಬಿರಂ ಪಾಪಂ
ತೀವಿದವೊಲ್ಪಾತಾಳದೊ
ಳಾವ[7]ಗ[7]ಮಿರ್ಪಂತೆ ದುಷ್ಟದಾನವಶಿಬಿರಂ ||೪೯||

ಪೊಡೆ[8]ದೆ[8]ತ್ತಂ ಪರಿಯುತ್ತುಮಿರ್ಪ ಪುಲಿವಂ ತಿಂಗುಂ ಶಿಶುಶ್ರೇಣಿಗಳ್
ಪಿಡಿದುರ್ಕಿಂ ಪೊಲಗೆಟ್ಟು ಪೊಕ್ಕ ಮೃಗಸಾಬಾನೀಕಮಂ ಕೊಂ[9]ದು[9] ಕೇ
ಸಡಗಂ ಸೂಡುವರಲ್ಲಿ ಬಾಲೆಯರೆನಲ್ಕೂರ್ಪೆತ್ತದಿಂ [10]ಮ[10]ತ್ತಮೊಂ
ದೆಡೆಗೇನೀಗುಮೆ ಪೋಗಲುತ್ಕಟ ಮಹಾಪಾಪ[11]ಕ್ಕೆ ತಾಂ[11]ಪಕ್ಕಣಂ ||೫೦||

---

1 ರತುಚಕೇಂ (ಜ) 2 ನೆ (ಜ) 3 ನೆತ್ತು ವಂ (ಜ) ಯೆತ್ತದಂ (ಟಣ) 4 ತಂ (ಚಟಡ) 5 ತಾ (ಚಜಟಡ) 6 ದ್ಯು (ಗಟಡ) 7 ನ (ಣ) 8 ದ (ಚಜಡಣ) 9 ಡು (ಚಟಣ) 10 ವೊ (ಜ) 11 ಕ್ಕಣಂ (ಜ)

ಮದಗಜಕುಂಭಕೋಟಿಯ ಕಲಂ ಕ[1]ರಿ[1]ದಂತದ[2]ಕೇ ತ[2]ರಕ್ಷು ಚ
ರ್ಮದ ತೆರೆಸುತ್ತು ಕೇಸರಿಯ ದಾಡೆಯ ಜೂದಿನ ದೀಂಟಿ ಪೀಲಿಯಂ
ಪೊದೆಸಿದ ಪಂದರಾಳಿಯಲರಾನೆಯ ಮುತ್ತಿನ ರಾಸಿ ಜೇನ ತು
ಪ್ಪದ ಕೆಱೆಯಲ್ಲಿ ನೆತ್ತರ ಕೊಳಂ ಚಮರೀ [3]ಮೃಗ[3]ವಾಳ ತೋರಣಂ ||೫೧||

ಆ ಪಳ್ಳಿಗಧಿಪನಾದಂ
ಕೋಪದೊಳಿರದರುಣನಾದ ಸಂಗರ ವಿಚಳ
ಚ್ಚಾಪದೊಳರ್ಜುನನಾದಂ
ರೂಪದೊಳತಿಕೃಷ್ಣನಾದ ವಿಂಧ್ಯಕನೆಂಬಂ ||೫೨||

ಪೊಸಕೋಲಂ ಗಱಿಗಟ್ಟುವಂ ಗರುಡ ಪಕ್ಷಚ್ಛೇದದಿಂ ತಿರ್ದುವಂ
ಪ್ರಸರದ್ದಂತಿಯ ದಂತದೊಳ್ ಹರಿಯ ದಂಷ್ಟ್ರಾಲೇಖೆಯಂ ಕೆಚ್ಚಿತ್ತೆ
ತ್ತಿಸುವಂ ಲೀಲೆಯೊಳರ್ಧಚಂದ್ರಶರಮಂ ಮಾಪ್ಪಿಟ್ಟಿಯಿಂ[4]ದಣ್ಮಿ ದ[4]
ಳ್ಳಿಸೆ ಸಿಂಹೀ[5]ಶ[5]ತ ನೇತ್ರದತ್ತ ಪ[6]ತಿ[6]ಶೋಕಾ[7]ವೃಂದ[7]ಕಂ ವಿಂಧ್ಯಕಂ ||೫೩||

ಜಯವಡೆದಾ ಪುಳಿಂ[8]ದ[8]ಪತಿಯಾಡುವ ಬೇಂಟೆಗೆ ಬೆರ್ಚಿಪೋಗಿ ಚಂ
ಡಿಯ ಮಱೆಯಂ ಮೃಗಾರಿ ಮು[9]ರವೈ[9]ರಿಯ ಮೈಮಱೆಯಂ ಖಗೇಂದ್ರನು
ರ್ವಿಯ ಮಱೆಯಂ ಮಹಾಪ್ರಳಯದಾದಿ ವರಾಹನಿದದ್ಭುತಂ ದಿಶಾ
ಳಿಯ ಮಱೆಯಂ ಗಡಿನ್ನುಮವೆ ಪೊಕ್ಕುಳದಿ[10]ರ್ದಪು[10]ವಷ್ಟದಂತಿಗಳ್ ||೫೪||

ಆ ವನಚರನ ಮನಃಪ್ರಿಯೆ
ಪೂವಿನಬಿಲ್ಲಾತನವಳ ಯೌವನ [11]ಸಲ್ಲ[11]
ಕ್ಷ್ಮೀವನಚರನೆನೆ ದೃಕ್ ಶಫ
ರೀವಾಗು[12]ರೆ[12] ಪೆಸರೊಳಾಕೆ ವಾಗು[12]ರೆ[12]ಯೆಂಬಳ್ ||೫೫||

ವಾಗುರಿಕೆಯ ಮೊಲೆವೆಟ್ಟದ
ಮೇಗಣ ಪರಿಪಕ್ವ ಬಿಂಬ ಫಲರಸಮಂ ಪೀ
ರ್ದಾಗ[13]ಳುಮ[13]ರ್ದೆ ತಣ್ಣನೆ ತಣಿ
[14]ದೋಗಡಿ[14]ಸಿರಲುಱಿದ ಪಣ್ಣಸೊಲ್ಲಂ ಭಿಲ್ಲಂ ||೫೬||

---

1 ಗಿ (ಚಟಡಣ) 2 ಕೆತ್ತ (ಜ) ಕಾತ (ಣ) .3 ವೃಕ (ಚಟಡಣ) 4 ದಣ್ಮುವ (ಜ) 5 ಸು (ಚಟಣ) 6 ೨ (ಜ) 7 ವಂಧ್ಯ (ಚಜಟಡಣ) 8 ದಿ (ಡಣ) 9 ರಾ (ಚಟಡ) 10 ರ್ದಪ (ಜ) ರ್ದಾವು (ಣ) 11 ಲ (ಚಟಡ) ವನಲ (ಜ) 12 ರಿ (ಚಟಡಣ) 13 ಳೆ (ಚಟಡಣ) 14 ದೀಗಡಿ (ಚ) ದೀಗಡ (ಟಡಣ)

ಎನಿ[1]ತುಂ ಕಟ್ತಿಲಿ[1]ಸಿದೊಡಂ
ವನೇಚರಂ ನಡೆವನಡರೆ ಪೊಳೆದಡಗದ ಮಿಂ
ಚಿನ ಗೊಂಚಲಂತೆ ಮಿಂಚುವ
ವನೇಚರಿಯ ಬಿಳಿಯ ಕಣ್ಣ ಬೆಳಗಿಂ ಬನದೊಳ್ ||೫೭||

† ಧವಳವಿಲೋಚನಂ ಪೊಳೆವ ಪೂವನೆ ಪೀನಕುಚಂ ಪ್ರಗಲ್ಭಗು
ತ್ಸವ[2]ಮನೆ ನಮ್ರ[3]ಬಾಹು ಸೆಳೆಗೊಂಬನೆ ಜಾತ್ಯ[3]ರು[3]ಣಾಧರಾಂಶು ಪ
ಲ್ಲವಮನೆ ಪೋಲೆ ವಿಂಧ್ಯಕನ ಬೆಂಬಳಿಯಂ ವನಲಕ್ಷ್ಮಿ ಕೂರ್ತು ಬ
ರ್ಪವೊಲಿರೆ ಬರ್ಪಳಾ ಶಬರಿ ಸೋರ್ಮುಡಿ ಕ[4]ಟ್ತಿ[4]ಲಿಸುತ್ತುಮಿರ್ಪಿನಂ ||೫೮||

ವ|| ಅಂತವರ್ ಕೃತಕಕಿರಾತ ಭೂಪತಿಯುಂ ವನಚರೀ ವೇಷ ವಶಗತ ಭವಾ
ನಿಯುಮಿರ್ಪಂತಿರ್ಬರುಮನ್ಯೋನ್ಯ[5]ಸ[5]ಕ್ತರುಮವಿಯುಕ್ತರುಮಾಗಿ ರಾಗದಿಂದಮಿರೆ

*ಕಱಿದುದು ಮೊಲ್ಲೆ ಮಲ್ಲಿಗೆ ಮುಗುಳ್ತುದು ಕೊಂಚೆಯ ಪಂಕ್ತಿಯಿಂಚರಂ
ಪೞಮರವಾದುದುಪ್ಪವಡಸಿತ್ತು ಪಿಕಧ್ವನಿ ಪೋಯ್ತು ನೇಳಲಂ
ಗೊಱಿಯದೆ ಮಾವು ಬಂದುದದಱಿಂ ಶಿಶಿರಾಧಮನಂ ಜಡಾತ್ಮನೆಂ
ದುಱಿದು ಬಸಂತನಂ ಕರೆದಳಕ್ಕುಮೆ ಭೂವಧು ವೇಶ್ಯೆಯಂದದಿಂ ||೫೯||

||ಸ್ವಾಗತ|| ನೋಡಿ ನೋಡ ರತಿ ಮಲ್ಲಿಗೆಯಂ ಕೈ
ನೀಡಿ ತಾಂ ತಿಱಿಯಲಾಱದೆ ಕಂಪಿಂ
ದೂಡುತಿರ್ಪಳೆನೆ ಕುಂತಳಮಂ ಸಾ
ರ್ದಾಡುತಿರ್ದುವದಱಿಕೊಳ್ ಮಧುಪಂಗಳ್ ||೬೦||

ವ|| ಆ ವಸಂತದೊಳಾ ತಮಾಳ ಶ್ಯಾಮಳನಪ್ಪ ವಿಂಧ್ಯಕನೊಂದು ದಿವಸಂ
ಶಾರ್ದೂಲಸ್ನಾಯು ಸಂಜನಿತ [6]ಸಿಂಜಿನೀ[6]ಸಮಾಸ್ಫಾಳನ ವಾಚಾಳ ಚಪಳ
ಚಾಪನುಂ ಕರತ[7]ಳಕಲಿತ[7] ಕಂಕಪತ್ರನುಮಾಗಿ ಮೃಗಯಾ ವಿನೋದದಿಂ ತೊೞಲು
ತಿರ್ಪಾಗಳ್ ಪೂಗಣೆ[3]ಯನ ಪೆಱಗೆ ಬರ್ಪ ರತಿಯ ರಮಣೀಯಮನೊಳಗುಮಾಡಿ

---

1 ಕಂ ಕತ್ತರಿ (ಚಟಡಣ) 2 ವೆನೆ ನಿವ್ನ (ಕ) ನೆ ವಿನವ್ನ (ಟ)ನೆ ನವ್ನ (ಜ)
3 ರ (ಜ) . 4 ತ್ತ (ಚಟ) 5 ಶ (ಜ) 6 ಶಿಂಜಿತ (ಚಟಣ) ಸಿಂಜಿತ (ಡ)7 ಳಿತ (ಜ)
† 'ಡ' ಪ್ರತಿಯಲ್ಲಿಲ್ಲ. * 'ಜ' ಪ್ರತಿಯಲ್ಲಿಲ್ಲ.

ತಳಿರುಡೆ ಫುಲ್ಲ ಕಂಕಣಮಶೋಕೆಯ ಬಿಲ್ [1]ಬಿಳಿ[1]ಯೆಂಬು ಕಾಡಪೂ
ಗಳ ತಲೆಸುತ್ತು ಮಾಂದಳಿರ ಕೈಪೊಡೆ ರಂಜಿಸೆ ಬೇಂಟೆಯಾಡೆ ಚಾ
ಪಳ ಹರಿಣೀವಿಲೋಕನಮನೀಕ್ಷ್ಕುಳಿಗೊಂಡಳೆನಲ್ಕೆ ಗಾಳುಗ
ಣ್ಪೊಳೆಯೆ ಪುಳಿಂದಿ ಬೀರ ಸಿರಿಯಂತಿರೆ ಬೆನ್ನನೆ ಬಂದಳೋಪನಾ ||೬೧||

ವ|| ಅಲ್ಲಿಂ ಪೆಱಗೆ

[2]ಶಳ[2] ಸೂಚೀಭಿನ್ನವಕ್ಷಂ ಕಿಟರದ[3]ಲಿಖಿ[3]ತ ಗ್ರೀವನಾಪೂತಿ ಶಂಕಾ
ವಿಳಚಿತ್ತೋ[4]ದ್ಘೋ[4]ಣನುತ್ಪ್ರಸ್ರವಣ ಸಮಯ [5]ಸೂತ್ಥಾಪಿತ್ತೈಕಾಂಘ್ರಿ[5]ವಕ್ತ್ರಾಂ
ಚಳನಾಳಸ್ಪೃ[6]ಷ್ಟನೀ ವೀ[6]ವೃತ ವದನ ವಿನಿಷ್ಕ್ರಾಂತ ಜಿಹ್ವಾಪ್ರವಾಳಂ
ಪೊಳೆದೊಂದೇಂ ಬಂದುದೋ ಬೇಡನ ಬಟಿವಟಿಯಂ ಶ್ವಾನನೇಣಾವಸಾನಂ ||೬೨||

ವ|| [7]ಆ ನಾಯ ಸೊವಡಿಂಗೇವಯಿಸಿ[7]

ಒರಸುತ್ತುಂ ಗ್ರಾವಕೋಣಂಗಳೊಳವಯವಮಂ ಕಂಡು ಕಾಡಾನೆಯಂ ಕೇ
[8]ಕ[8]ರಿಸುತ್ತುಂ ಕಣ್ಗಳಂ ತಾಗುವ ಬಿಸುಗದಿರಂ ಪೊಯ್ಯುತುಂ ಕೋಪದಿಂ ಘು
ರ್ಘುರಿಸುತ್ತುಂ ಗ್ರೀಷ್ಮದೊಳ್ಕೋಟೆ ಸಱನಱಸುತುಂ ಪೋಗುತಿರ್ದತ್ತು ದಂಷ್ಟ್ರಾಂ
ಕುರಘಾತವ್ಯಸ್ತಮುಸ್ತಾ[9]ಕ್ಷತ[9]ಸುರಭಿತ[10]ದಂಷ್ಟ್ರಾವ[10]ರೋಹಂ ವರಾಹಂ ||೬೩||

ವ|| [11]ಆ ವರಾಹನನವರೋಹಿಸುವಂತೆ[11]

ವನಗಜವೊಕ್ಕ[12]ವೋಲ್ಮ[12]ದದ ಕೊಟೆ ಸಱಿರೊಳ್ ಕೆಸಱಾಟವಾಡಿ ಸೊ
ರ್ಕಿನ ಸೊವಡಿಂಗೆ ಮುತ್ತಿ ಮಱದುಂಬಿಗಳಂಬಿಸೆ ರೋಮವಿಕ್ಕಿ ಬಿ
ಕ್ಕನೆ ಬಿರಿವಂತೆ ಬಂದ [13]ಬಲ[13]ದೊ[14]ಳ್ಪೆಳರ್ವ[14]ಟ್ಟು ಮದಕ್ಕೆ ವಂದ ಕಂ
ಪಿನ ಕಳಭಂಬೊಲಿರ್ದುದತಿದರ್ಪ ರಸಾಕರನೊಂದು ಸೂಕರಂ ||೬೪||

ವ|| ಆ ಪಂದಿಗಳನಾ ನಾಯೆ ಬೆಂಕೊಂಡು ಪೋಗೆ [15]ಮುಂದೊಂದು[15] ಮೇದಿನೀ
ಧರದರೀದೇಶದೊಳ್

---

1 ಬಲಿ (ಜ) 2 ಸಲೆ (ಚಟಡಣ) 3 ಲಿಭ್ಯ (ಜ) 4 ದ್ಘೋ್ರೀ (ಗ) ಡ್ಘೋ್ರ (ಚಟಣ) 5 ಸುತಾಪೇ ಕಾಗೀವ (ಗಡ) ಸುತಾಪ್ಯಕಾಂಗ್ರೀವ (ಚ) ಸುತಾಪೇಕಾಂಗ್ರಿವ (ಟ) ಸುತ್ಥಾಪಿವೈಕಾಂಘ್ರಿ (ಜ) 6 ಷ್ಟಂವಿ (ಚಟಡ) ಷ್ಟಸ್ಪೃಷ್ಟಂವಿ (ಜ) 7 — (ಣ) 8 ಸ (ಚಜಟಡಣ) 9 ಕ್ಷುರಿ (ಚಟ) ಕೆತಿ (ಜ) ಕ್ಷುರಿತ (ಡಣ) 10 ರೋತ್ರಾವ (ಜ) ಘ್ರೋವ್ರಾತ (ಚಟಡಣ) 11 — (ಣ) 12 ವುಳ್ಮ (ಕ) ಮುಳ್ಕ (ಜ) 13 ಭರ (ಚಣ) 14 ಳ್ಪೆಳರ್ (ಕ) ಳ್ಪೆಳರ್ವ (ಜ) 15 — (ಜ) (2, 8, 9, 10 ಪಾಠಾಂತರಗಳು ಕಾವ್ಯಸಾಂದವು.)

ಹರಿ ಹೀರೋದ್ರೇಕದಿಂ ಕುಂಜರಗಿರಿಶಿರದೊಳ್ಪಾ[1]ಯ್ವುದುಂ[1] ಪಿಂತೆ ಮೇಗಂ
ಬರದೊಳ್ ಮೇಘವ್ರಜಂ ಘರ್ಜಿಸೆ ಶರಭರವಾಶಂಕೆಯಿಂ ನಟ್ಟ ಕಾಲ್ನ
ಟ್ಟಿರೆ ಬೆನ್ನೊಳ್ಪೊಯ್ದು ಗು[2]ವಾ[2]ರ್ಯಿದ್ದಿರೆ ಬಿದುತಟದೊಳ್ಕಂದದೊಳ್ಪೊಕ್ಕ ಮೆಯ್ ಪೊ
ಕ್ಕಿರೆ ಸೋತ್ಕಂಠಂ ಸಧೀರಂ ಸಚಳಿತಪಟಮೊಂದಾಯ್ತು ಸಿಂಹಾವಲೋಕಂ ||೬೫||

ವ|| ಆ ಸಿಂಹಾವಲೋಕನಸಮನಾ ಶಬರ ಸಿಂಹನವಜ್ಞೆಯಿನವಲೋಕಿಸುತ್ತುಂ ಸಜಳಜಳಧರ ಮಳಿನ ವೃಥಕರಿನೋತ್ತುಂಗಕಾಯ ಬಳದಿಂ ವಿಂಧ್ಯಕಂ ಮೇಲಪ್ಪ ವಿಂಧ್ಯಕನಂದಿನ ಬೇಂಟೆಯೊಳ್ ಬೆರ್ಚಿ ನೋಡುವ ಪುಲ್ಲೆಗಳೊಳ್ ನಲ್ಲಳ ಕೊಲ್ಲಿ ನೋಟಮಂ ಕಂಡು ಕೊಲಲೊಲ್ಲದೆಯುಂ ಕಾಡಾನೆಯ ಕುಂಭಸ್ಥಳಂಗಳೊಳ್ ಕಾಮಿನಿಯ ಮೊಲೆಯ [3]ಮಿಸುಪಂ[3] ಕಂ[4]ಡಿ[4]ಸಲೊಲ್ಲದೆಯುಂ ಸೋಗೆನವಿಲ್ಗಳೊಳೆ ವಾಗು[5]ರೆ[5]ಯ ಸೋರ್ಮುಡಿಯ ಸಿರಿಯ ಸೊಬಗಂ ಕಂಡಿಡಲೊಲ್ಲದೆಯುಂ ನಡೆನಡೆಯೆ ಮುಂದೆ[6]ವೆಡೆ[6]ಯೊಳೊಂದು[7] ಮಹಾಮಹೀಧರ ಮಸ್ತಕದೊಳ್

ಸಮಪಾದಂ ಪೊರ್ದೆ ಬಲ್ಪಂ ಕರಣಸಮುದಯಂ ತನ್ನೊಳಿರ್ಕಾಪೆ ಕಣ್ಗಳ್
[8]ನಿಮಿಷವ್ಯಾಸಂಗಮಂ ಬಿಟ್ಟಿರೆ ಬಳೆಯೆ ಚಿದಾಸ್ವಾದ ಸೌಖ್ಯಂ ನಿದಾಘ
ದ್ಯುಮಣಿ ಪ್ರೌಢಾಂಶುಗಾಸ್ಯಾಂಬುಜಮಲರೆ ಮನಂ ಧ್ಯಾನದೊಳ್ ಸಿಲ್ಕೆ ಕಯ್ಯಿ
ಕ್ಕೆ ಮುನೀಂದ್ರದ್ವಂದ್ವ[7]ಮೊಂ[7]ದಿರ್ದುದು ಗಿರಿಶಿಖರದ್ವಂದ್ವದಿರ್ಪಂದದಿಂದಂ ||೬೬||

ವ|| ಅಂತು ಕ[8]ಲ್ನಿ[8]ಲೆ ನಿಂದ ವಿಮಳಬುದ್ಧಿಯುಮಮಳಬುದ್ಧಿಯುಮೆಂಬ ಮುನಿದಾರಕರಂ ದೂರಾಂತರದೊಳ್ಕಂಡು ವಿಂಧ್ಯಕಂ ವಾಗುರೆಗೆಂದನಾ [9]ತೋರ್ಪ ಪುರುಷಮೃಗಂಗಳಂ ಪಿಡಿಲ್ವೊಡೆಯೆ [10]ಕೋಡುಂಗ[10]ಲ್ಗಳ್ ಕೆಡೆವಂತೆಯೊಂದೇ ಕೋಲೊಳ್ಕೆಡೆವಿನಮೆಚ್ಚಪೆಂ ಮೆಚ್ಚುಂಟೆಯೆಂಬುದುಮಾಕೆ ನೀಡುಂ ಭಾವಿಸಿ ನೋಡಿ ನಡನಡ ನಡುಗಿ

ಇವರ[11]ನಿ[11]ಸುವಾಗಳೆನ್ನಯ
ಕಿವಿಯೋಲೆಯ [12]ಸೊಲ್ಲೆ[12]ಯಕ್ಕುಮೆಂದಾ ರತಿ ಕಂ
ತುವಿನಿಸುವ ಕಯ್ಗೆ ಪಾಯ್ವಂ
ತೆವೊಲಪಳಾ ಶಬರ[13]ನಿ[13]ಸುವ ಕಯ್ಯಂ ಪಿಡಿದಳ್ ||೬೭||

---

1 ಯ್ದುವಮಂ (ಚಟಡ) ಯ್ದುವುಂ (ಣ) 2 ಪೊರ್ (ಜ) ಪಾರ್ (ಚಣ) 3—(ಜ) 4 ದಿ (ಚ) 5 ರಿ (ಚಟಡ) 6 ದು (ಜ) 7 ವುಂ (ಜ) 8 ಲ್ಮ (ಜ) ಲ್ಮೇ (ಚಟಣ) 9 - (ಜ) 10 ಕೊಂಡಕ (ಜ) 11 ನೆ (ಚಟಡ) 12 ನೋಲೆ (ಕಚಟ) ಮೋಲೆ (ಡಣ) 13 ನೆ (ಚಟಡ)

ಪುರುಷಮೃಗಂಗಳಲ್ಲಮಿವರಪ್ಪೊಡೆ ದಿವ್ಯ ಮುನೀಂದ್ರರಿಜ್ಜೊಡಂ
ಶರವಿದು ತಾಗಲಣ್ಮದಿವರಂ ನಡಲೊಲ್ಲದೆ ಸೂರ್ಯರಶ್ಮಿಯೋ
ಸರಿಸಿಯೆ ಪೋಗುತಿರ್ದಪುದು ನೋಡ ಪದಾಬ್ಜಮನೋಪ ಸಿಂಹಮುಂ
ಶರಭಮುಮೊ[1]ತ್ತುತಿರ್ಪು[1]ವಿವಱಿಂ ಬಲವಂತಮೆ ನಿನ್ನ ಸಾಯಕಂ ||೬೮||

[2]ಕೆಳರ್ದು[2] ಪರಿತಂದ [3]ಬೇ[3]ಗೆಯು
[4]ಮ[4]ಳುರಲ್ತಾನಳ್ಕಿ ನಿಂದು ಪೆಱಕಾಲೊಳ್ಕಿಂ
ದಳ[5]ರಂ[5] ಕೇರ್ಗಟ್ಟಿದವೋಲ್
ಬಳೆಯಿಸಿ ಮುರಿದಪುದು ನೋಡು ಮುನಿಪುಂಗವ[6]ರಾ[6] ||೬೯||

ವ|| ಸೀನಿವರನೆಂತು ಬಲ್ಲೆಯಪ್ಪೊಡೆ

ಹರಿಶಕ್ತೀ ಭವದಸ್ತ್ರ ಭಿನ್ನ ಕರಿಕುಂಭೋನ್ಮುಕ್ತ ಮುಕ್ತಾಫಲೋ
ತ್ಕರಮಂ ಮಾಱಲೆ ಪೋಗಿ ರಾಜಗೃಹದೊಳ್[7]ಕಾಣ್ಬೆಂ[7] ಗೃಹದ್ವಾರದೊಳ್
ಬ[8]ರ ಪಾದಾರ್ಗ[8]ತ ಭೂಪನಾ ವೃಷಭದತ್ತಂ ಭಕ್ತಿಯಿಂದೀ ಮುನೀ
ಶ್ವರರಂ ತಾನಿದಿರ್ಗೊಂಡು ಕಾಲ್ಗೆಱಗುವಂ ರತ್ನಂಗಳಿಂದರ್ಚಿಪಂ ||೭೦||

ಎನೆ ಬಿಲ್ಲುಮನಂಬುಮನಾ
ವನಚರನೀಡಾಡಿ ದಿವಿಜಧನುವಂ ಮಿಂಚಂ
ಘನಮಿಾಡಾಡುವವೋಲ್ ಭೋಂ
ಕನೆ ಶರದದೊಳಮುಳನಾಗಲುದ್ಯುತನಾದಂ ||೭೧||

ವ|| ಆಗಿಯಾ [9]ಬೇ[9]ಗದೊಳುತ್ತರೋತ್ತರ ಸ್ಥಾನಮಂ ತಾನೇಱುವುದನಱಿ
ಪುವಂತೆ ನಗಾಗ್ರಮನೇಱಿ ತಾಮರೆಗಳ್ಗೆ ತಪ್ಪಂ ಮಾಡಿ ಕಾಲ್ವಿಡಿವ ತುಂಬಿಗಳಂತಾ
ಯೋಗಿಯುಗ[10]ಳದ[10] ಪದಯು[11]ಗಳಂಗಳ[11] ಮುಂತೆ ಮೈಯಿಕ್ಕಿರ್ಪುದುಮನ್ನೆಗಮಾ
ಮುನಿಕುಮಾರರ್ ಕಯ್ಯೆತ್ತಿಕೊಂಡು ಲುಬ್ಧಕನ ಕಾಲ ಲಬ್ಧಿಕ್ಷಯೋಪಶಮಮಂ
ಕಂಡು ಕರ್ನೆಯ್ದಿಲ ಮೇಲೆ ಕುಮುದಪ್ರಿಯನಮೃತಮಯ ಮಯೂಖಮಂ ತಳೆವಂತೆ
ದಯಾಮೃತರಸಮಂ ತಳೆ[12]ದು ದುಃ[12]ಪಾತಕನಂ ಪೂತಂ ಮಾಡಿ

---

1 ತ್ತಿದಪ್ಪು (ಚಟಡಣ) 2 ಕೆಳದು (ಜ) ಕಳೆದು (ಡ) 3 ಬ (ಜಡ) 4 ಮು (ಜ)
5 ರಿಂ (ಜ) 6 ನಾ (ಚಟಡ) 7 ಕೊಂಬೆಂ (ಚಟಡಣ) 8 ರ ಪಾದಾರ್ಗ (ಚಡ) ರೆ ಪಾದರ್ಗ
(ಣ) 9 ವೇ (ಣ) 10 ಳ (ಚಟಡಣ) 11 ಗಂಗಳಂ (ಜ) ಗಂಗಳ (ಡ) ಗಳಂಗ (ಣ)
12 ಪದು (ಚಟಡ) ವಂತು (ಜ)

ಕೊಲಲಾಗದು ಕಳಲಾಗದು
ಕುಲಟೆಯರೊಳ್ ನೆರೆಯಲಾಗದಾರ್ತದಿನರ್ಥ
ಕ್ಕಲವರಲಣಮಾಗದು ಪುಸಿ
ಯಲಾಗದೀ ಬ್ರತಮನ್ನೈದುಮಂ ಪಿಡಿ ಮಗನೇ ॥೭೨॥

ವ॥ ಎನೆ ಮಹಾಪ್ರಸಾದಮೆಂದು

ಶರವದು ಕಯ್ಯೊಳ್ [1]ಪಂಕಂ[1]
ಸರಸಿಜ ಜನಕತ್ವ ಗುಣಮನಳವಡೆ ಕೊಳ್ವಂ
ತಿರೆ ವಿಮಳಮತಿಯ ಕಯ್ಯೊಳ್
ಪರಮವ್ರತಮಂ ಕಿರಾತನೊಲವಿಂ ಕೊಂಡಂ ॥೭೩॥

ಜಿನ ಸಮಯವ್ರತಮೆತ್ತಲ್
ವನಚರನೆತ್ತಲ್ ವಿರುದ್ಧವೆನಬೇಡ ಜಗ
ಜ್ಜನನುತ ಸಿದ್ಧರಸಂ ಕ
ರ್ಬುನಮಂ ಪೊನ್ಮಾಡಲಾಯ್ತು [2]ಪೊನ್ನೇನಾಯ್ತೋ[2] ॥೭೪॥

ವ॥ ಅಂತು ಮೇರುವಂ ಸಾರ್ದ ಕಾಗೆ ಪೊಂಬಣ್ಣಮಾದಂತಿರಾ ಜಾತ ರೂಪಧರರಂ ಸಾರ್ದು ಶಬರಂ ಸುವ್ರತ ಸ್ವೀಕಾರಭಾಸುರನಪ್ಪುದುಂ ವಾಗುರೆಯುಂ ಮನಮಲ್ಲದ ಮನದೊಳಾನುಮೀವ್ರತಮಂ ಕೈಕೊಂಡೆನೆಂದು ಪೋಪ ಪರಮೇಶ್ವರಂ ಬೞಿಯನವರ್ಮುಗುಳ್ದು ವಲ್ಲಿನರಂ ಪೋಗಿ ಮುಗುಳ್ದು ಬಂದು ವಿಪಿನಮಂ ಪೊಕ್ಕು ತನ್ನ ಮುನ್ನೆಗೆಯ್ದ ವಧಭೀಭತ್ಸ ಸ್ಮರಣಮೆ ಕಂದಮೂಳಫಳಾಸ್ವಾದನದೊಳು ಮುಟ್ಟುಪಡಮಂ ಪಡೆವುದುಮದೇನುಮಂ ನೆನೆಯದೆ ಮದನಾರಿಗಳ ಪದನಳಿನಮಂ ನೆನೆಯುತ್ತುಮಿರೆಯಿರೆ

ಸ್ವಗೃಹೀತೆ ಪ್ರತರಕ್ಷಾ
ಪ್ರಗಲ್ಭಮತಿ ಪುಟ್ಟಿ[3]ದತ್ತು[3] ತದ್ವನಚರಸೂ
ನುಗೆ ಕಾಷ್ಠಕ್ಕನಲಂ ಪಂ
ದಿಗೆ ಮುತ್ತುರಗಂಗೆ ಮಾಣಿಕಂ ಪುಟ್ಟುವವೋಲ್ ॥೭೫॥

---

1 ಪರ (ಜ) 2 ಪೊಂಗೇನಾಯ್ತೋ (ಚಜ) 3 ದಂತು (ಕಗಚಡ)

ವನಚರರಿಲ್ಲದಲ್ಲಿ ಮೃಗದಿಂ ಮೃಗಮಾರಣಮಿಲ್ಲದಲ್ಲಿಯೆ
ಲ್ವಿನ ಕೊಲವಿಲ್ಲದಲ್ಲಿ ಖಗದಿಂ ಖಗಮರ್ದನಮಿಲ್ಲದಲ್ಲಿ ತೋ
ಱಿನ ಕವಿಯಿಲ್ಲದಲ್ಲಿ ಶಿಬಿರಂ ಫಣಿಹಿಂಸನಮಿಲ್ಲದಲ್ಲಿ ತೊ
ಲ್ವನೆ ಪೊ[1]ಲಸಿ[1]ಲ್ಲದಲ್ಲಿ ಶಬರಂ ಸುಖಮಿರ್ಪನಿದೇಂ ಸುಚಿತ್ರಮೋ ||೭೬||

ಗಿಳಿ ತಿನ್ನದ ಬಿಂಬಫಲಂ
ಗಳ[2]ನನ್ಯ[2]ಭೃತಂ ಕ[3]ರ್ದು[3]ಕದಿವ್ಮಾವಿನ ಪ
ಣ್ಗಳನನ್ಯ ಪಕ್ಷಿಯುಣ್ಣದ
ಶಲಾಟು ಸಂಕುಳಮನಾಯ್ದು ಮೆಲುವಂ ಶಬರಂ ||೭೭||

ಜಳಧರ ವಿಮುಕ್ತಧಾರಾ
ಜಳಮಂ ಕುಡಿದಿರ್ಪ ಖಗದವ್ರೊಲ್ಕುಡಿದು ಮಹಾ
ಚಳ ಶಿಖರ[4]ಗ[4]ಳಿತ ನಿರ್ಝರ
ಜಳಮಂ ಸಲೆ ಬೇಡನುಱ[5]ದ ಜಲಮಂ ಬೇಡಂ ||೭೮||

ವ|| ವಾಗುರೆಯೊಡ[5]ನಾಡು[5]ವ ಬೇಡತಿಯರ್ ಮೇರೆಗೆಡೆದು ಕಂಡುಂ ನೀನುಂ ನಿನ್ನ ಗಂಡನುಂ ಪುಲಿಯಂತಿರ್ದು ನರಿಯಂತಿರೇಕಿರ್ದಪಿರೆನೆ ಕಣ್ಬನಿಯಂ ತೀವಿ ಭಿ[6]ಲ್ಲಿ ಮೆಲ್ಲನಿಂ[6]ತೆಂದಳ್

ತುಡೆ ಕೋಲಂ ಮುನಿಗಳ್ಗೆ ಕಾದ ಫಲಮಂ ಕೈ[7]ಕೆಯ್ಯೊಳುಂ[7]ಡಪ್ಪೆನಾ
ದಡಿಗರ್ ಮಂತ್ರಿಸಿ ಕಟ್ಟಿದರ್ಕ[8]ಲಿ[8]ಯ ಕಯ್ಯಂ ಬಾಯುಮಂ[9] ಕೆಟ್ಟಿ[9]ನಾಂ
ಪಿಡಿಯಂ ಪಕ್ಕಿಗಳಂ ಮೃಗಕ್ಕೆ ಬಿಡಲೊಲ್ಲಂ ನಾಯ್ಗಳಂ ಜೇನುಮಂ
ಬಡಿಯಂ ಗಾಣಮನಿಕ್ಕನೊಕ್ಕ[10]ನಿ[10]ನಿಯಂ ತನ್ನಿಕ್ಕೆಯಂ ಬಾಟಿಕ್ಕಿಯಂ ||೭೯||

ವ|| ಎಂಬುದುಮಾಕೆಗಳೆಂದರ್ ನೀನೆಮ್ಮ ಮನೆಯೊಳ್ ಬಾಯ್ಗೆ ಬಯಸಿದುದ ನುಂಡು ಮೆಯ್ಗೆ[11] ಮೆ[11]ಚ್ಚಿದಂತಿರು ಬಾಯೆಂ[12]ಬು[12]ದುಂ ವಾಗುರೆ ತಲೆಯನಲುಗಿ ಬೆರಲಂ ಮಿಡಿದು ಮನದೊಳಿರ್ದುದಂ ಮಾತಿನೊಳ್ ಬಱಿಕೆಯ್ದೆನಲ್ಲದೆ ಬೇಱಿಕೊಂ ದರ್ಕೆ ಬಗೆದವಳೆನಲ್ಲೆ[13]ನಿನ್ನೆ[13]ನ್ನ ನಲ್ಲನಪ್ಪುದನಪ್ಪೆನದುಲೇಸಾದೊಡಂ ಪೊ[14]ಲ್ಲಾ[14]

---

1 ಸೆಯಿ (ಕ) ಸಲಿ (ಚಟಣ) ಸಯಿ (ಡ) 2 ನಿತ್ಯಂಪರ (ಚಡಣ) ನಿತ್ಯಪರ (ಟ)
3 ರ್ದು (ಡಣ) 4 ದ (ಣ) 5 ನೋದು (ಚಟಡಣ) 6 ಲ್ಲನಿಂ (ಚಟಡ) ಲ್ಲಿಯಿಂ (ಣ)
7 ಗೆಯ್ಯೊಳಂ (ಚಟಡಣ) 8 ರಿ (ಡಣ) 9 ಕಟ್ಟಿ (ಚಟಡಣ) 10 ಗಿ (ಗಟ) 11 ಬೆ (ಚಟಡಣ)
12 ದುಕರೆವು (ಜ) 13 ನೀನೆ (ಚಟಡ) 14 ಲ್ಲ (ಚ)

ದೊಡಮೆನ್ನ ಪುಣ್ಯಮೆಂದು ಪೂಣ್ಡಿರ್ದಳಿರ್ಪುದುಮೊಂದು ದಿವಸಂ ವಿಂಧ್ಯಕನೆಲ್ಲಿಯು ಮೊಳ್ಳಿದುವಪ್ಪ ಫಲಂಗಳಂ ಪಡೆಯದಱಸುತ್ತುಂ ಬಂದೊಂದು ಕುಬ್ಜಾಮ್ರಕುಜದ ಬೀೞಲ್ಕೊಂಬಿನ ಪಸುರೆಲೆಯ ಕುಸುಂಕುಱಳೊಳಗೆ ರಸಾಯನದ ಕುಪ್ಪಿಗೆಯಂತೆ ತೋರ್ಪ ತನಿವಣ್ಣಂ ತಿಱಂಗುಲೊಡನೆ

ತರುಣತರು ವಿಷಧರಂ ಕೋ<br>ಟರಮುಖದಿಂ ನುಂಗಿದಂತಫೆಪ್ರೇರಣೆಯಿಂ<br>ಪಿರಿದಪ್ಪ [1]ಪ್ರೋ[1]ಟಲೊಳಗಾ<br>ಸರಸಫಳಂ ಕೈ[2]ಬರ್ದುಂಕೆ[2] ಬಿರ್ದತ್ತಾಗಳ್ ॥೮೦॥

ಆ ಪಣ್ಣನಱಸುವಳಿಪಿಂ<br>ದಾ ಪೋಟಲ್ಗುಯ್ದ ತತ್ಕಿರಾತನ ಕರಮಂ<br>ಕೋಪದೊಳಹಿ ಕೊಂಡುದು ತರು<br>ಚಾಪದಿನಂತಕನ ಕಣ[3]ಯೆ ಕೊಳ್ವ[3]ವೊಲೆ[4]ನಸುಂ[4] ॥೮೧॥

ಅಯ್ಯೊ ! ಫಳಾಮೃತರಸಮಂ<br>ಕಯ್ಯಿಂದಂ ಪಿಡಿಯೆ ವಿಷಮುದಾ[5]ಯ್ತೇ[5] ಬೇಡಂ<br>ಗಯ್ಯ ನೃಶಂಸ ಕೃತಾಂತನ<br>ಕಯ್ಯಡಕಮನಱ[6]ವೆನೆಂಬ ದೇವನುಮೊಳನೇ ॥೮೨॥

ಪಿಕ ಹಾಹಾಕ್ರಂದನಮಂ<br>ವಿಕಳೆ ವನಾಗ್ರಸ್ತೆ ಮಾ[6]ಡಿ[6] ಸತಿ ಸತ್ತು ಯಶೋ<br>ಧಿಕ ವೃಷಭದತ್ತ ವಿಭುಗಿ<br>ಭ್ಯಕೇತುವೆಂ[7]ಬಾತ್ಮಜಾತ[7]ನಾದಂ ವ್ಯಾಧಂ ॥೮೩॥

ವನಚರಿಯುಮೆನಗೆ ಮತ್ತಾಂ<br>ತನ ಲೋಕಮೆ ಲೋಕಮೆಂದು ಹಸ್ತಮನಾ ಪಾ<br>ವಿನ ಪಲ್ಗೆ ಕೊಟ್ಟು ಸತ್ತಾ<br>ತನ ಪೊಟಲೊಳೆ ಮುಖ್ಯನಪ್ಪ ದೀವ[8]ರ[8]ನಾದಂ ॥೮೪॥

---

1 ಪಿರಿದ ಪ್ರೊ (ಜ) 2 ಕದುರ್ಗಂಕೆ (ಚಡಣ) ಪಿದ.ಗಂಕೆ (ಟ) 3 ಯ ಕೊಂಡ (ಚಟಡಣ) 4 ಸೆ ಇಂ (ಜ) 5 ಯ್ತನೆ (ಜ) 6 ಡೆ (ಚಟಣ) 7 ದೆಂಬಾತ್ಮಜ (ಚ) ದೆಂಬ ತನುಜ (ಟ) ತೆಂಬ ತನುಜ (ಡ) ಬಾತ್ಮಜ (ಣ) 8 ಳ (ಚಟಡಣ)

ವ॥ ಆ ವೃಷಭದತ್ತ ವೈಶ್ಯೋತ್ತಮನ ವಿಭವಮಂ ಪೇೞ್ವೊಡೆ

ಓಂಗದ ಪೊನ್ನರಾಸಿಯ ಬಿಸಿಲ್ಗಳೆ ಮುತ್ತಿನ ಮೊತ್ತದಚ್ಚವೆ
ಳ್ದಿಂಗಳೆ ಮಾಣಿಕಂಗಳೆಳಸಂಜೆಯೆ ನೀಳ್ದೊಗೆದಿಂದ್ರನೀಲಜಾ
ಲಂಗ[1]ಳ[1] ಮರ್ವೆ ವಜ್ರರುಚಿಯೇೞ್ಗೆಯೆ ಪಚ್ಚೆಯ ರೋಚಿಯಚ್ಚಜಾ
ಳಂಗಳೆ ಸಂತತಂ ವೃಷಭದತ್ತ ವಣಿಕ್ಪತಿಯೊಂದು ಗೇಹದೊಳ್ ॥೮೫॥

[2]ಉಮು[2]ಬ್ಬಿ ಭ[3]ಮದಕರ್ದಮ[3]ಮಂ
ಕ್ರಮದೊಳ್ ಕಾನೀಕಜಾನುದಘ್ನ[4]ಮ[4]ಸೆ ತುರಂ
ಗಮ ಲಾಳಾಜ[5]ಳ[5]ದ ಪೊನಲ್
ತೆಮ[6]ಳ್ದಿ[6] ತೊಳೆವುದು ತದೀಯ ಗೇಹಾಂಗಣದೊಳ್ ॥೮೬॥

ತೆಗೆದತಿವರ್ತಿಗಳಂ ದಂ
ತಿಗಳ ಮೊಗಂಗಾಣದತ್ತ ಕಟ್ಟಿದೊಡೆ ಮೊಗಂ
ಬುಗಲವ್ವಳಿಪುವು ಮಣಿಹ
ರ್ಮ್ಯಗತ ನಿಜಚ್ಛಾಯೆಯೊಳ್ ವಣಿಗ್ವಲ್ಲಭನಾ ॥೮೭॥

ಪರದನ ಪೆರ್ಮನೆಯೊಳ್ ಕ
ಪ್ಪುರಮಂ ಬೆಳ್ವಿಟ್ಟದೆಂದು ಚೇಟಿಕೆಯರ್ ಕ
ತ್ತುರಿಯಂ ಹರಿನೀಲ ಮನೋ
ಹರ ಕುಟ್ಟಿಮಗಜಮಿದೆಂದು ಪೊಱಗು[7]ತ್ತಿರ್ಪ[7]ರ್ ॥೮೮॥

ಪದ್ಮದ ಸುತನಖಿಳ ಕಳಾ
ಸದ್ಮಂ ಚತುರಾಸ್ಯನಾದ ತೆಱನಂ ತೋಱಲ್
ಪದ್ಮಶ್ರೀಯ ಸುತಂ ವಿಪ
ಪದ್ಮರ (?) ಸುತನಿಭ್ಯಕೇತು ಕಳೆಗಳನಾಳ್ದಂ ॥೮೯॥

ಸಮಸಂದಾ ರತಿಯಿಭ್ಯಕೇತುವಿನ ರೂಪಂ ಕಂಡು ಕಣ್ಸೋಲ್ತು ಕೂ
ಡುವ ಕಾಯ್ಪಿಂದಭಿಸಾರಿಕಾ ಪದವಿಗಂದೊಂದಾಸೆಯಂ ಮಾಡುವಳ್
ಭವನಿರ್ನ್ಮೊರ್ಮೆ ಮನೋಜನಂ ಮುನಿದುನೋೞ್ಕಿಂದೇನೊಪ್ಪುವಳ್ (?) ವಸಂ
ತ ವಿಳಾಸಕ್ಕೆ ಕನಲ್ವಳೆಂದೊಡೆ ವಣಿಕ್ಕಾಂತಂ ಕರಂ ಕಾಂತನೋ ॥೯೦॥

---

I ಳೆ (ಜಣ) 2 ಒಮು (ಚಟ) ಒಮುಮು (ಣ) 3 ಕರ್ದಮು (ಚಟಣ) ಕರ್ದ (ಡ)
4 ಮೆ (ಜ) 5 ಸ (ಜ) 6 ಳ್ಚಿ (ಜ) ಳ್ಪಿ (ಟ) 7 ಗುತಿಪ್ಪ (ಜ)

ಶ್ರುತವಧು ಕೂರ್ತು ಕೊಟ್ಟ ತೆಱದಿಂದೆಸೆದಿರ್ಪುದು ನಾಟಕ ಪ್ರವೀ
ಣತೆ ಕೃತಿಭಾವಕೋವಿದತೆ ಶಬ್ದಸಮಗ್ರತೆ ತರ್ಕರೀತ್ಯಭಿ
ಜ್ಞತೆ ನಯವಾಗ್ವಿಚಕ್ಷಣತೆ ವಾದ್ಯವಿದಗ್ಧತೆ ನರ್ತನ ಪ್ರಗ
ಲ್ಭತೆ ರಸಗಾನಮಗ್ನತೆ ವಿಳಾಸರಸಜ್ಞತೆ ವೈಶ್ಯಪುತ್ರನಾ ||೯೧||

ಬಾಧಿಸುವಂ ಮನೋಮೃಗಮನಂಗಜ ದಾ[1]ಮ[1]ಮನಿಟ್ಟು ಸೋಲ್ತು ಬಿಂ
ಬಾಧರೆಯರ್ಕಳೊಪ್ಪು[2]ವ ಪಿಣಿಲ್ಗೆ[2] ವಿಲಂ ಪಿಡಿವಂ ವಿವೇಕವಿ
ದ್ಯಾಧರನಂಗಜಾಳದೊಳೆ ಸಿಲ್ಕಿಸುವಂ ಸಲೆ ಪೋದ ಜನ್ಮ[3]ದಾ
ಪೋ[3]ದನಕೆಯ್ತುಮಂ (?) ಕೆದಱುವಂತಿರೆ ಲೋಚನ ಮತ್ಸ್ಯಜಾಲಮಂ ||೯೨||

ಅಪ್ರತಿಮ ರಾಜಗೃಹ ನಗ
ರಪ್ರಭು ಜಿತಶತ್ರುವೆಂಬನಾ ಭೂಪಂಗಂ
ಸುಪ್ರಭೆಗಂ ಪುಟ್ಟಿದ ಕಮ
ಳಪ್ರಭೆ ರೂಪಾತಿಶಯದ ಸಿರಿಯಂ ಪಡೆದಳ್ ||೯೩||

ವ|| ಆಕೆಯ ನೂತನ ತನು[4]ವ[4]ನಕ್ಕೆ ವಸಂತದಂತೆ ಬಂದ ಪ್ರಸನ್ನಯೌವನಮಂ ಜಿತಶತ್ರು ಮಹಾರಾಜಂ ಕಂಡು ಭೂಮಂಡಲದೊಳುಳ್ಳ ರಾಜಕುಮಾರರಂ ಬರಿಸಿ ಸ್ವಯಂಬರಮಂ[5] ಸ್ಮರನ[5] ಬರವಿತ್ತಂತೆ ಮಹಾವಿಭೂತಿಯಿಂ[6] ಮಾಡಿ[6]ಪ್ಪುದುಂ ವನದೊಳಗೆ ಬಳೆಯುತ್ತುಮಿರ್ಪ ಮಾಸಕೇಶುವಿನಂತೆ ನೆಲನುಂ ನೋಡಱುಂ ಕಾಣದಂತು ಮನೆಯೊಳಗೆ ಬಳೆಯುತ್ತುಮಿರ್ದ ಭೃಕೇತುಕುಮಾರಂ ವೇದನೋದನೆಯುಂ ನಿಜಜನಕನೊಡನೆ ಬಂದು ನೋಡುತ್ತುಮಿರೆ

ಎನಿತಲರ್ಗಳಲರ್ದೊಡಂ ಭೃಂ
ಗನಾಯಕಂ ಜಾತಿ[6]ಗೆಱಗುವಂತಿರೆ ನೃಪನಂ
ದನರೆನಿತೆಸೆದಿರ್ದೊಡಮಂ
ಗನೆಯಲರ್ಗಣ್ಣಿ ಭೃಕೇತುಗೆಱಗಿದುವಳಿಪಿಂ ||೯೪||

ರಾಗದಳುರ್ಕೆಯಿಂ ನೆರೆದ ರಾಜಕುಮಾರರ ಕ[7]ಣ್ಗಳೆಯ್ದೆ[7] ಪಿ
ಗ್ಗಾಗಿರೆ ಕಾಮಿನೀಜನದ ಕ[8]ಣ್ಗಳೆಯಲ್ತ[8]ರೆ ತನ್ನನುರ್ಚಿದಾ
ಪೂಗಣೆ[9]ಪಲ್ಲವಂಬಿಡದು ಮಾಲೆಯನೋಜಿಸಿ ಮೇಲೆ ಸೂಸುವಂ
ತಾಗಿರೆ ವೈಶ್ಯಸೂನುಗೊಲವಿಂ ಕಮಳಪ್ರಭೆ ಮಾಲೆ ಸೂಡಿದಳ್ ||೯೫||

---

1 ವ(ಚಟಡಣ) 2 ಪಿಣಿಲಂ ನ (ಚಟಡಣ) 3 ದಬ್ಬಾ (ಜ) 4 ವು (ಚಟಡಣ)
5 ಸ್ವಯಂ (ಒ) 6 ಜಿ (ಜ) 7 ಣ್ಗೆಸೈದೆ (ಒ) 8 ಣ್ಗೆಳಲಲ್ತ (ಜ) 9 ಯೆಲ್ಲಮಂ ಪಿ (ಜ)

ವೈಶ್ಯಸೂನುಗೊಲವಿಂ ಕಮಳಪ್ರಭೆ ಮಾಲೆ ಸೂಡಿವಳ್

ಅಱಿದು ಜಿತಶತ್ರು ಭೂಪನ
ಕಿಱಿಯರಸಿ ವಸಂತಸೇನೆಯಾ ಕಾಮಿನಿಯ
ಟ್ಟಱ ತನುಜೆ ಮದನಸೌಂದರಿ
ನೆಱೆದಳ್ ನೃತ್ಯದೊಳಮಸಮ ಸಾಹಿತ್ಯದೊಳಂ ||೯೬||

ವನಿತೆಯ ರೂಪುಂ ಪ್ರಸಜ
ವ್ವನಮುಂ ಮೋಹನಮದಿನ್ನುದಂಚಿತ ರಸ ನ
ರ್ತನ ಭಾವಭಾವಿತಂ ಗಡ
ನನೆ ಕಾಮನಮೋಘಬಾಣಮಾದುದು ಪೆಱ[1]ತೇಂ[1] ||೯೭||

ವ|| ಅಂತು ಭುವನ ಭುಂಭುಕಮಾದ ತನ್ನ ಮಗಳ ವಿಚಿತ್ರ ನೃತ್ಯ ವಿದ್ಯಾ ವಿಳಾಸಮಂ ಕಂಡು ಜಿತಶತ್ರು ಮಹಾರಾಜನೀ ವಿದ್ಯೆಗಿಭ್ಯಕೇತುಕುಮಾರನೆ ಬಲ್ಲನಾ ತನಲ್ಲದೆ [2]ಶರ್ವ[2]ನುಮಱಿಯನೆಂದು ವಿವಿಧವಾದ್ಯವಾದನ ವಾಚಾಳಮುಂ ಗಾಯಿಕಾ ಜನ[3]ಸಂಛ[3]ನ್ನಮುಂ ವಾಂಶಿಕಸಂಕುಳ ಸಂಕೀರ್ಣಮುಂ ಶೈಲೂಷಸಮೂಹ ಸಂಮರ್ದ ಮುಂ ಭಾರತಿಕವೃಂದಭರಿತಮುಂ ವಾ[4]ಗ್ಗೇ[4]ಯಕಾರವಿಳಸಿತಮುಂ ಪ್ರಗೀತಪ್ರಕೀರ್ಣ ಮುಂ ತಾಳಧರಾಧಿಷ್ಠಿತಮುಮಪ್ಪ ಮಣಿಮಯ ನೃತ್ಯಮಂಟಪಕ್ಕೆ ಇಭ್ಯಕೇತುಕುಮಾ ರನಂ ಬರಿಸಿ

ಇಕ್ಕಿದ ಮುತ್ತಿನೆಕ್ಕಸರದೋಲೆ ತುಱುಂಬಿದ ಜಾದಿವೂವೆ ತೊ
ಟ್ಟಿಕ್ಕಸರಂ ಕೆಲಕ್ಕೆ ನಸುಕೊಂಕಿನ ಕತ್ತುರಿಯಡ್ಡಬೊಟ್ಟು ತ
ಳ್ತಿಕ್ಕಿದ ಚಂದನಂ ಮುರಿದು ಸುತ್ತಿದ ಚಂಪಕಮಾಲೆ ಕಣ್ಗಳಂ
ಜಕ್ಕುಲಿಸಿತ್ತು ಪಜ್ಜಳಿಪ ವಜ್ರದ ಕಂಕಣಮಾ ಕುಮಾರನಾ ||೯೮||

ವ|| ಅಂತು ಕಂತುವಿನಂತೆ ಬಂದ ಸೌಭಾಗ್ಯಸಕಿಂಚನನಂ ಕಾಂಚನಪೀಠದೊ ಳ್ಕುಳ್ಳಿರಿಸಿ ಕೇಳಿಕೆಯಂ ಮಾಡೆ

ವನಿತಾಪಾದ ಪಯೋಜಸಂಗಸುಖದಿಂದಂಗಕ್ಕೆ ರೋಮಾಂಚಮಾ
ಯ್ತೆನೆ ನಟ್ಟಂತಿರೆ ಸೂಸೆ ಸೂಜಿಗಳನಾ ಪೊಂ[5]ಜಾಜಿ[5]ಯೊಂದೊಂದು ಚೂ
ರ್ಮನೆಗೊಂಡೊಂದಲರಾಯ್ತು [6]ಕೋದ[6] ತೆಱದಿಂದಿರ್ಪಂತು ಫುಲ್ಲಾಂಬುಜಾ
ನನೆ ಪುಷ್ಪಾಂಜಲಿಗೊಟ್ಟಳಂಗಜ [7]ಸುಧಾ[7]ಸಾರಂ ಪೊದಟ್ಟಿಂದದಿಂ ||೯೯||

---

1 ತೇ (ಚಟಡಣ) 2 ಸರ್ವಜ್ಞ (ಜ) 3 ಸಚ್ಛ (ಚ) 4 ಗ್ಮಿ (ಚಟಡಣ) 5 ಪೂಜೆ (ಜ) ಜೂಜೆ (ಚಟಡ) 6 ಕೊಯ್ದು (ಚ) ತೋಯ್ದು (ಟಣ) ಱದ (ಡ) 7 ಸುರಾ (ಚ) ಸರಾ (ಜ)

ಬಾಡಿದಲರಱಿಪೆ ಸೆಱೆ ನಂ
ಜೂಡಿದ ಸೂಜಿಗಳಸ[1]ಳ[1]ಪಿ [2]ತುಂಬಿ[2]ಯೊಲವ[3]ನೇ[3]
ನಾಡಿದಳೊ ಸೂಜಿಗಳ ಕೂ
ರ್ಪೊಡೆದ ನೋ[4]ಸೆ[4]ಯಲರ ಮೇಲೆ ನಾನಾವಿಧದಿಂ ||೧೦೦||

ಪರಿದ ತಿಳಕಮನೆ ಕಂಡೆಸೆ
ದಿರೆ ಕೊಟ್ಟುದ್ದಂಡಪಾದದುಗುರ್ಗನ್ನಡಿಯೊಳ್
ತರಳಾಕ್ಷಿ ತಿರ್ದಿದಳ್ ಚೆ
ಚ್ಚರದಿಂ ಮತ್ತೊಂದು ಪಾದದುಂಗುಟದಿಂದಂ ||೧೦೧||

ವ|| ಅಂತು ಸವ ವಿಕಮಮೆಂಬೆರಡುಂ ತೆಱದ ನೃತ್ಯಮತ್ಯಂತ ಮನೋಹರಮುಂ ಕೌತುಕಕರಮುಮಾಗೆ ಮಗಧ[5]ಸುಂ[5]ದರಿ ಕಿರಿದುಬೇಗಮಾಡುತ್ತುಮಿರೆ ನೆಯ್ಮಱೆದು ನೋಡುತ್ತುಮಿರ್ದು ನಯನಸಂಸಂಗಕ್ಕೆ ಸಯೋಪರ್ಶನಯದ ಸಯಂಗಳುಮಂ ಬೆ[6]ಳಂ[6]ಗಿರ್ಪ ಪ್ರೊಳೆಯು[7]ಕ್ಕೆ (?) ಚಾರಿಯಮಾದ[7] ಚಾರಿಯುಂಗಳುಮಂ ಚತುಃಷಷ್ಟಿಕರ್ಮಂಗಳಾಲಂಬಪಸ್ತಮಾದ ಹಸ್ತಗಳುಮಂ ಭಾವರಸಾಶ್ರಿತಂಗಳಾದ ದೃಷ್ಟಿಗಳುಮಂ ಸರಸ್ವತಿಗ[8]ಳಂ[8]ಕರಣಂಗಳಾದ ಕರಣಂಗಳುಮಂ ಶೃಂಗಾರಶ್ರೀಗೆ ಹಾರಮಾದಂಗಹಾರಂಗಳುಮಂ ನರ್ತನಕ್ಕೆ ಚಾರುತ್ವಂಬಡೆದ ಚಾರಿಗಳುಮಂ ನೃತ್ಯವಿದ್ಯಾದೇವತೆಗೆ ಮಂಡನಮಾದ ಮಂಡ[9]ನಂ[9]ಗಳುಮಂ ಸುಲೇಖೆಗೆ ನೆಲೆಯಾದ ನಿಲವುಗಳುಮನ ನರಪರ[10]ಬಂ[10]ಡೆಡೆಗಳೊಳ್ ಪ್ರಸಯಿಸಿ ಪೆಸರಿಟ್ಟು[11]ತಾಳದೊಳ್ಕೂ[11]ಗಿದಂತೆ ವಾದ್ಯದೊ[12]ಳ್ಳೆ[12]ದಂತೆ ನಿರುಪಮಾಡ ನೃತ್ಯಂ ನೃತ್ಯಶಾಸ್ತ್ರಮನಭಿನಯಿಸುವಂತಾದುದೀ ಕಪೋತ[13]ಕರ[13]ವಿಕೀರ್ಣಕನಕ ಸೂ[14]ಚೀ[14]ಸಂಚಯ ಸ್ಥಾಪನ ಕೌತುಕ ಕ್ರಿಯಾಕೌಶಲಮುಮಿಾ ಪುಷ್ಪಾಂಜಲೀಕ್ಷೇಪಣಸೈಪುಣ್ಯಮುಮಿಾ ವಿಷಮ ವಿದ್ಯಾಸಾಧನಮುಂ ಸರಸ್ವತಿಗಂ ಸಾರದೆಂದು ಕುಮಾರಂ ಮೆಚ್ಚಿ ಮೆಚ್ಚಿಂಗೆ ಮೆಚ್ಚುಗುಡುವಂತೆ ಮಹೀಸಾಧನಾ ಕುಮಾರಿಯುಮಂ ಕುಡೆ ಮಹಾವಿಭೂತಿಯಿಂ ಮದುವೆ ನಿಂದು

ಅನುರಾಗಾಂತಂ ವಸಂತಪ್ರಿಯನ ವಿರಹದೊಳ್ ಗ್ರೀಷ್ಮತಾಪಜ್ವರಂ ಮೇ
ದಿನಿಗಾದಂ ಪುಟ್ಟೆ ಮೇಲೇಂ ತಳಿದುದೊ ಮಱೆಯುಂ ಪ್ರಾ[15]ವೃ[15]ಷಂ ಚಂದ್ರಿಕಾ ಚಂ
ದನವುಂ ಸೂಸುತ್ತುಮೆತ್ತಂ ಶರದಮಿರಪೆ ತಂದತ್ತು ಕೆಂಗಾಳಿಯುಂ ಹೈ
ಮನನುಂ ಹೇಮಂತಮೆತ್ತಂ ಸುರಿದುದು ಶಿಶಿರಶ್ರೀ[16]ತು[16]ಷಾರಂಗ[17]ಳಿರ್ಪ[17] ||೧೦೨||

1 ರಿ (ಚಟಣ) ರು (ಡ) 2 ಕುಂಭಿ (ಚಟಡಣ) 3 ಗೇ (ಚಟ) 4 ಲೆ (ಜ) 5 ಸೌಂ (ಜಡ)
6 ಡಂ (ಚಟಡಣ) 7 ಕರ್ಣಮಾ (ಕಡ) ಕರ್ಣಮಾ ಚಾಳಯಮಾದ (ಚಟಣ) 8 ಳಂತಃ (ಟಡಣ)
9 ಳಂ (ಜ) 10 ಬಬ (ಚಡಣ) 11 ಕಾಳದೊಳಕೂ (ಚಟಣ) ತಾಳದೊಳ್ ತೂ (ಡ) 12 ಳೆಳ
(ಜ) 13 ಬಗ (ಚಟದಣ) 14 ಜಿ (ಚಟ) 15 ವಿ (ಜಟ) 16 ರು (ಜ) 17 ದಿರ್ಪಂ (ಗಟ)

ನೃತ್ಯಮತ್ಯಂತ ಮನೋಹರಮುಂ ಕೌತುಕಕರಮುಮಾಗೆ

ವ|| ಅಂತು ಬಂದಾಱುಂ ಋತುಗಳೊಳಾದನು[1]ಭಾ[1]ವೋಚಿತ ಕ್ರೀಡಾರಸಂಗಳ ನಾಱುಂ ರಸಂಗ[2]ಳಿಂ[2] ಸವಿವಂತೆ ಸವಿದು ಸಕಳಕಳಾಸೌಕರ್ಯಕ್ಕಂ ಸೌಭಾಗ್ಯಕ ಮೇಕಪತಿಯಾಗಿ

ಅನುಪಮರಾಜ್ಯನಂದನೆಯರಾ ಕಮಳಪ್ರಭೆಗಂ ವಿಲಿಪ್ತಚಂ
ದನಘನಪಾಳಂಗಿಗಾ ಮಗಧಸೌಂದರಿಗಂ ಪತಿಯಾದನಾ ವಣಿ
ಗ್ಜನನಧಿನಾಥನೊಂದೆ ಕೊ[3]ಳನ[3]ಲ್ಲಿಯೆ ಪುಟ್ಟಿ ಪೊಗೆತ್ತಿಪೆತ್ತ ಪ
ದ್ಮಿನಿಗಮನಾರತಂ ಸಿತಸರೋಜಸಿಗಂ ದಿನನಾಥನಾದವೋಲ್ ||೧೦೩||

ಅಸಿಯಳ ವಿದ್ಯೆ ಕೂರಿಸಿದುದಿಲ್ಲ ನೃಪಾಗ್ರತನೂಜೆಯಿಂದೆ ಕೂ
ರಿಸಿದುದಧೀಶನಂ ಸೆಬಗು ಕೂರಿಸುವಂತಿರೆ ವೆಣ್ಣವಿದ್ಯೆ ಕೂ
ರಿಸುಗುಮೆ ತುಂಬಿ ಮಲ್ಲಿಗೆಗೆ ಕೂರ್ಪವೊಲೊಪ್ಪೆ ವಿಚಿತ್ರಬಂಧದಿಂ
ದೆಸೆದಿರೆ ಕಟ್ಟಿ ತಂದು ಸೊಪಡಿಲ್ಲದ ಮಾಲೆಗೆ ಕೂ[4]ರಲಾ[4]ರ್ಪಮೇ ||೧೦೪||

ವ|| ಅಂತು ಮಗಧಸೌಂದರೀ ವಿವಾಹ ವಿಹಿತಮನಾ ದೀನಮಾನಸೆಯಾದ ಕಮಲಪ್ರಭೆ[5]ಯ[5] ಮುದ್ದುಮೊಗಮಂ ನೋಡಿ

ಹೃದಯಾಧೀಶಂ ಕುರುಳ್ಗವ್ವಳಿಸೆ ಸುಡಿಸೆ ಮೇಲ್ವಾಯೆ ಲಲ್ಲೈಸೆ ಮೆಲ್ಪಿಂ
ಮೊದಲೊಳ್ ಸರ್ವಾಕ್ಷಿಪಾತಂ ಬಳಿಕದು ನಯನಾರ್ಧಾವಲೋಕಂ ಬಳಿಕ್ಕೊಂ
ದುದಯಂ ನೇತ್ರತ್ರಿಭಾಗಂ ಬಳಿಕಿಳಿದುದಪಾಂಗೇಕ್ಷಣಂ ತಾಂ ಬಳಿಕ್ಕಾ
ವುದುಮಿಲ್ಲಾಯ್ತುಗ್ಗಳಂ ಕಾಮುದಮಿನಿಯಳ ಸನ್ಮಾನದಿಂ ಮಾನಮಲ್ತೇ ||೧೦೫||

ವ|| ಎಂಬಿನಂ ಕಮಳಪ್ರಭೆಗಂ ತನಗಂ ಹುರುಡಿಂದಮೇ ಪರಸ್ಪರಾನುರಾಗ ಮಳವಿಗೞಿಯೆ

ಪುಳಕಂ ಪಕ್ಕೆಗೆ ಸಾರದಂತು ಬೆಮರೆಂದುಂ ಕುಂದದಂತರ್ಧಕು
ಟ್ಮಳಿತಂಗಳ್ನಯನಂಗಳುಳ್ಪಲರದಂತೊಂದೊಂದಱೊಳ್ ಪತ್ತಿ ಮೆ
ಯ್ಗಳಲಂ[6]ಪಂ[6] ಬಿಡದಂತು ಸೈಸಮಯ[7]ದಂತಾ[7]ನಂದ ವಾರಾಶಿಯೊಳ್
ಮುೞುಗಿರ್ದಳ್ಪೆರ್ದೆ ಮೂಡದಂತು ಕುವರಂ ಕೂಡಿರ್ದನಬ್ಜಾಕ್ಷಿಯೊಳ್ ||೧೦೬||

ವ|| [8]ಇತ್ತ[8] ಮಗಧ ಸೌಂದರಿ ತನ್ನ ಪಾಳೆಯದೊಳಂ ವಾಸವಸಜ್ಜಿಕೆಯಾಗಿ

---

1 ಭ (ಚಟಡಣ) 2 ಳಂ (ಚಟಡಣ) 3 ರಳ (ಚಟಡಣ) 4 ಡಲಾ (ಚಡಣ) ಡಲು (ಟ)
5 ಯಾಳನಲ್ಲ (ಚಟಡಣ) 6 ಪಿಂ (ಚಟಡಣ) 7 ದತ್ತಾ (ಚಟಡಣ) 8 ಇಂತು (ಚಟಡಣ)

ಪತಿಚಿತ್ತಾನರ್ದ ನಿದ್ರಾವಿರಹಿತೆಯಿರುಳಿಂತಪ್ಪುದುಂ ಸುಪ್ತಪಾರಾ
[1]ವ‍ತಮಂ ಬಂದೆತ್ತುವಳ್ ಹಂಸೆಗಳೆರಡೆಮೆಯೊಂದಾಗಲೀಯಳ್ ನವಿಲ್ವಾ
ಣತಿಯಂ ಕಣ್ಮುಚ್ಚಲೀಯಳ್ ಗಟಿಪುವ ಗಿಳಿಯಂ ತೂಂಕಡಂ ಕಾಣಲೀಯಳ್
ಕತೆಯಂ ಪೇಟಿಂದವಳ್ ಸಾರಿಕೆಯುಮನ[2]ನಿ[2]ವಂಗೆಯ್ದು ಕಣ್ಗೆಯ್ಯಲೀಯಳ್ ||೧೦೭||

ಅರಗಿಳಿಯಂ ಮೃಗಾಕ್ಷಿ ಪಿಡಿದೋದಿಸಲ[3]ಣ್ಮಳಿಸುಯ್ಯ[3] ಬೆಂಕೆಯಿಂ
ಕರಿಮುರಿಯಕ್ಕುಮೆಂದು ತೆಗೆದಪ್ಪಲುಮ[4]ಣ್ಮಳ[4] ಮೆಯ್ಯ ತಾಪದಿಂ
ಕುರವಕಮೆಯ್ದೆ ಸೀದಪುದಿದೆಂದು ಕರಂ ತಿಳಕಾವನೀಜಮಂ
ಕೊರಗುಗುಮೆಂದು ನೋಡಲಣಮ[5]ಣ್ಮಳ[5] ತಪ್ತ ವಿಲೋಚನಾರ್ಚಿಯಿಂ ||೧೦೮||

ಪರಪಿ ನಚಿುಸುಯ್ಯ ಕಂಪಂ
ಸುರತ ಸುಖಾಸ್ವಾದ ಸುಭಗ ಚಿಂತಾಭರದಿಂ
ಪಿರಿದು ವಿರಹಾರ್ತಿ ಜೇಟದ
ಬಿರಿತುಗುಳಪ್ಪೊಲಿರ್ಸಳಿಕುಳಾಳಿಕೆ [6]ಬನನೊಳ್[6] ||೧೦೯||

ತಡೆದು ಬರೆ ನಲ್ಲನೀಕ್ಷಿಪ
ಮಡವಿಯ ಕ[7]ಟ್ಟಿ[7]ಲಿನ ಮೊಗಮುಮುರುಸೇಕ್ಷಣಮುಂ
ತೊಡೆದುಂಜನ[8]ಮುಂ ಮ[8]ಱಿತದಳ
ವಡೆ (?) ನೀರ್ಗುಂಕುಮುಮನೆಚ್ಚಿಕೆಂಡವೊಲೆಸೆಗುಂ ||೧೧೦||

ವ|| ಆ ಮಗಧ[9]ಸೌಂದರಿಯ ಸೌಂದರ[9]ವಿದ್ಯೆಯ ದೌರ್ಭಾಗ್ಯಮೆ ನಿರ್ವೇಗ ನಿಮಿತ್ತಮಾಗೆ

ಮನಮುಂ ವಿರಕ್ತಿಗಿತ್ತೊ
ಳ್ಪಿನ ರಾಜ್ಯಮನಿಭ್ಯಕೇತು ಕುಮರಂಗಿತ್ತಂ
ತನುವಂ ತಪಕ್ಕೆ ಜಿತಶ
ತ್ರುನೃಪಂ ನಿಯಮಸ್ಥಯತಿಯ ಪಾದಾಂತಿಕದೊಳ್ ||೧೧೧||

---

1 ಪ (ಜಡ) 2 ವಿ (ಜ) 3 ಮ್ಮಳಿಸುಯ್ಯ (ಚಣ) ಮ್ಮಳಿಸುಯ್ಲು (ಟಡ) 4 ಮ್ಮಳಿ (ಚಟಡಣ) 5 ಮ್ಮಳು (ಟಡ) ಮ್ಮಳಿ (ಣ) 6 ಯಪಲ್ರಿತೊಳ್ (ಚಟಡಣ) 7 ಱು (ಚಜ) ಱು (ಟಡ) 8 ಮುಂ ಪೊ (ಜ) 9 ಸುಂದರಿಯ ಸುಂದರ (ಚಟ) ಸೌಂದರಿಯ (ಜ)

॥ ದ್ರುತವಿಲಂಬಿತ ॥ ಅವನಿ ಕೀರ್ತಿಸೆ ತಾಳ್ದಿದನಿಭ್ಯಕೇ
ತುವಿನ ತಂದೆಯುವೊಳ್ತಪಮಂ ಮನೋ
ಭವನನಂಡಲೆದಿಕ್ಕಿದ ಮಂದರ
ಸ್ಥವಿರರೆಂಬ ಮುನೀಂದ್ರರ ಪಕ್ಕದೊಳ್ ॥೧೧೨॥

ಇನಬಿಂಬಂ ಕೋಂಟೆಯ ಕ
ಟ್ಟಿನ ಕೊತ್ತಳವಂಬುಗಂಡಿಯೊಳ್ನುಸುಳುತ್ತೊ
ಯ್ಯನೆ ಸಿಲ್ಕಿ ಸಿಲ್ಕುದಾ ಪುರ
ವನಿತೆಯ [1]ನವ[1]ಕರ್ಣಪೂರ ಕಮಳದ ತೆಱದಿಂ ॥೧೧೩॥

ಇಂದುವ ಬಿಂಬಂ ಪಟಯಿಗೆ
[2]ಯೆಂದುಂ[3] ಪಿಡಿವಡೆಪು ಕಿಱಿದುಬೇಗಂ ನಗರೀ
ಸೌಂದರಿಯ ಕಯ್ಯ ಕೇಳಿಯ
ಕಂದುಕ[2]ದಂ[3]ತಿರ್ಪುದೊಪ್ಪೆ ಪತನೋತ್ಪತನಂ ॥೧೧೪॥

ಅವಿರಳ ಕೇತಕ ಪರಿಮಳ
ನವಾಪ್ತ ತ್ರೈತ್ಯಂ ಪ[4]ವಮಾಂ[4]ದ್ಯ ನಳಿನೀ[5]ಗುಣಂ[5] (?)
ಪವನ ಪವನಾ[6]ಶನೀಂಟು[6]ವು
ದು ವಿಯೋ[7]ಗಿ[7]ಪ್ರಾಣ ಪವನನಂ ಪುರವರದೊಳ್ ॥೧೧೫॥

ವ॥ ಎಂಬ ಪೊಗೞ್ತೆಗೆ ಜನ್ಮಗೃಹಮುಂ ಲಕ್ಷ್ಮಿಗೆ ಕುಳಗೃಹಮುಂ ಕಳಾಧಿ
ದೇವತೆಗೆ ಕೇಳೀಗೃಹಮುಮಪ್ಪ ರಾಜಗೃಹಕ್ಕಧಿರಾಜನಾಗಿ •

ಕರ[8]ಸಾ[8]ರಾಸ್ವಾದನಂ (?) ಚುಂಬನ ಮಧುಪ ಸುಹೃತ್ಸಂಗಮಾಲಿಂಗನಂ ವೀ
ರ ರಸಸ್ವೇದಾಂಬು ದೃಪ್ತಾಹತ ಹತಿಸಿತ ಕಾ[9]ಮಾದ[9]ಶಾಗ್ರಕ್ಷತಂ ಕುಂ
ಜರಕುಂಭಾಸ್ಫಾಲನಂ ಪೀವರಕುಚಕಲಶಾಸ್ಫಾಲನಂ ಲೀಲೆಗಾಗು
ತ್ತಿರೆ ರಾಜ್ಯಶ್ರೀಯ ಸಂಭೋಗಮನೊದವಿಸಿದಂ ರಾಜವಿದ್ಯಾವಿಳಾಸಂ ॥೧೧೬॥

---

1 ರಾ (ಚಟಣ) 2 ಯಿಂದಂ (ಚಟಡಣ) 3 ದಿಂ (ಜ) 4 ವಂ (ಚಟಡಣ) 5 ಗಳಂ (ಚಟಡಣ) 6 ಶನಿಂದು (ಚಟಡಣ) 7 ಗ (ಚಟಡಣ) 8 ಧಾ (ಡಣ) 9 ಮಾಂಕು (ಚಟಡಣ)

ಇದು ಮೃದುಪದ ಬಂಧ[1]ಬಂಧುರ[1] ಸರಸ್ವತೀ ಸೌಭಾಗ್ಯ ವ್ಯಂಗ್ಯ [2]ಭಂಗಿ[2] ನಿಧಾನ ದೀಪವರ್ತಿ [3]ಚತುರ್ಭಾಷಾ ಕವಿಚಕ್ರವರ್ತಿ[3] ನೇಮಿಚಂದ್ರ ಕೃತಮುಂ ಶ್ರೀಮತ್ಪ್ರತಾಪ ಚಕ್ರವರ್ತಿ ವೀರಬಲ್ಲಾಳದೇವ ಪ್ರಸಾದಾಸಾದಿತ ಮಹಾಪ್ರಧಾನ [4]ಸೆಜ್ಜೆವಳ್ಳ[4] ಪದ್ಮನಾಭದೇವ ಕಾರಿತಮುಮಪ್ಪ ನೇಮಿನಾಥಪುರಾಣದೊಳ್

ತೃತೀಯಾಶ್ವಾಸಂ

ಸಮಾಪ್ತಂ

---

1 — (ಜ) 2 ಭಂಗಿನೀ (ಚಜಟಡ) 3 — (ಜ) 4 ಪದವೀ ವಿರಾಜಿತ ಸೆಜ್ಜೆವಳ್ಳ (ಜ)

# ಚತುರ್ಥಾಶ್ವಾಸಂ

ಶ್ರೀಪತಿಯುಂ ಸ್ಥೈರ್ಯದಿಂ ಪೃ
ಥ್ವೀಪತಿಯುಂ ವೀರಪತಿಯು[1]ಮಪ್ಪು[1]ದುಮಿರದ
ಲ್ತಾ ಪ್ರೋ[2]ಟ್ಟು[2]ವಿತ್ತು ಕೀರ್ತಿ
ಶ್ರೀಪತಿಯಾದಂ ಸರಸ್ವತೀ ಶೃಂಗಾರಂ ||೧||

ಪೊಂ ಪಟ್ಟಮಪ್ಪವೊಲ್ಭೂ
ರ್ಖಂ ಪಂಡಿತನಪ್ಪ ತೆಱದೆ ವಾಣಿಯ ದಯೆಯಿಂ
ದಂ ಪರದನರಸನಾಗಿ
ರ್ದಂ ಪೃಥ್ವಿಗೆ ಸ್ಥೈರ್ಯ ಪಮೊಗುಲಾಜಿದುದುಂಟೇ ||೨||

ವ|| ಒಂದು ದಿನಸಮಾ ಪ್ರತಾಪಮಾರ್ತಂಡಂ ಮಾರ್ತಂಡೋದಯ ಸಮಯದೊಳೊಡ್ಡೋಲಗಂಗೊಟ್ಟಿರೆ

ಕರಿಕುಂಭದ ಮುತ್ತಂ ಕ
ತ್ತುರಿಮಿಗಮುಂ ಸಿಂಹಶಾಬಮುಂ ದರ್ಶನಮಿ
ತ್ತುರವಣಿಸಿ ಬಂದನಾ ಧೀ
ವರನಾಯಕನಿಭ್ಯಕೇತು ಭೂನಾಯಕ[3]ನಂ[3] ||೩||

ವ|| [4]ಕಾಣ[4]ಲೊಡನಾರ್ಗಂ ಮಾಡದ ಮೋಹಮನವಂಗೆ ಮಾಡಿ ಸೇನಾಪತಿ ಪದವಿಯಂ ಕೊಟ್ಟು ತನಗಾತನೇ ಪರಮ ವಿಶ್ವಾಸ ಭೂಮಿಯುಂ ಪರಮ ಪ್ರೇಮ ಭೂಮಿಯುಮಾಗೆ ಮಳಯಾನಿಳಂಬೆರಸು [5]ಬಸಂತಂ ವನ[5]ರಾಜ್ಯಂಗೆಯ್ವಂತೆ ದೂರಾಯಾತಧೀವರಂ ಬೆರಸು ವಿಳಾಸವಸಂತಂ ರಾಜ್ಯಂಗೆಯುತ್ತುಮಿರ್ದೊಂದು ದಿವಸಮಾ ಮಂದರ [6]ಧೀರಂ[6] ಮಂದರಸ್ಥವಿರಭಟ್ಟಾರಕರ ಸಮೀಪದೊಳ್ ಧರ್ಮಮಂ ಕೇಳುತ್ತುಮಿ[7]ರ್ದ[7] ದೂರ ದೇಶದೊ[8]ಳ್[8]ರ್ದ ಧೀವರಾ[9]ಖ್ಯ[9]ನಲ್ಲಿಗೆ ಮೆಲ್ಲಗೆ ಪತ್ತೆ ಸಾರ್ದು ಸಾದ್ರ್ರ ಹೃದಯನಾಗಿ ಮನಃಪ್ರಿ[10]ಯ ವ[10]ಚನಾಮೃತಮಂ ಕಿವಿಗುಡಿತೆಯಿಂ ಕುಡಿಯುತ್ತುಮಿರ್ಪುದಂ ಕಂಡು

---

1 ಮಿಂಪುದ (ಚಟಣ) ಮಿಪ್ಪ (ಡ) 2 ತ್ತು (ಚಟಡಣ) 3 ನಾ (ಟ) 4 ಕೊಡ (ಕಗ) ಕೊಡ (ಚಟಡ) ಕುಡ (ಣ) 5 ವಸಂತನ (ಚಟಣ) ವಸಂತಂ (ಡ) 6 ಧರ (ಡ) 7 ತ್ತ (ಜ) 8 ಳುಮಿ (ಚಟಡ) 9 ಜ (ಜ) ಜ್ಞ (ಡ) 10 ಯು ಪ್ರಿಯ ವಚನಮನಾಲಿಸುವ ರಜಸ್ವಲಾಶ್ರವಣದಂತೆ ಮಭಯು (ಜ)

ಎನಗೀ ಮಿಾಂ[1]ಗು[1]ಲಿಗನ ಮೇ
ಗನಿಮಿತ್ತಂ ಪ್ರೇಮಮಣುಗು ಮಗನೊಳಮೊಲ್ವಂ
ಗನೆಯೊಳಮಾಗದುದಾಯ್ತಿದ
ನನುಪಮ ನಿ[[2]ರ್ಬಾಧ[2]]ಬೋಧ ಭಾಸುರ ಬೆಸಸಿಂ ||೪||

ಎನೆ ನಿನ್ನ ಪೋದ ಭವದಂ
ಗನೆ ವಾಗುರೆಯೆಂಬಳೀತನಾ ಭವದೊಳೆ ನೀಂ
ವನಚರನೆ ಎನಲೊಡಂ ತೆ
ಕ್ಕನೆವೋದಂ ಜನ್ಮನಾಟಕಕ್ಕವನೀಶಂ ||೫||

ಆರೇನಾದಪರೆಂಬುದ
ನಾರಱಿವರೊ ಜಗದೊಳುಳ್ಳ ರೂ[3]ಪು[3]ಗಳಂ ಸಂ
ಸಾರಿಯ[4]ಘೆ[4]ಸೂತ್ರಧಾರ
ಪ್ರೇರಣೆಯಿಂ ಪೊತ್ತು ಸುತ್ತಿ ಕುಣಿಯುತ್ತಿರ್ಪರ್ ||೬||

ವ|| ಎಂದು ಬೇಗದಿಂ ನಿರ್ವೇಗಪರನಾಗಿ ಸುಕೇತುವೆಂಬ ತನ್ನ ತನಯಂಗಿಚ್ಛಕೇತು ರಾಜ್ಯಭಾರಮನಿತ್ತು ತಪೋರಾಜ್ಯಭಾರಮನೆತ್ತಿಕೊಳ್ಳಲೊಡನೆ

ಯುವತಿ ಕಮಳಪ್ರಭೆಯುಮಾ
ತ್ಮವಲ್ಲಭ ಪ್ರೇಮದಿಂ ತಪಂಬಟ್ಟಳ್ ಕಾಂ
ತವಸಂತಂ ಬೀತೊಡೆ ಮಾ
ಧವಿಲತೆಯುಂ ಪಿಂತೆ ಬೀಯದೇನಿರ್ದಪುದೇ ||೭

ಆ ಪ್ರ[5]ತಿ[5]ಪತಿ ಪದಕಮಳ ಮ
ಧುವ್ರತ[6]ನಂ[6]ದಾಗಿ ಧೀವರಂ ಲೋಪಿತ ಪಾ
ಪವ್ರಣನಣುವ್ರತಾದಿ ಗು
ಣವ್ರತ [7]ದೀ[7]ಕ್ಷಾ ವ್ರತಂಗಳಂ ಕೈಕೊಂಡಂ ||೮||

ವ|| ಅಂತು ಮಕರಕೇತುವಿಂಗೆ ಧೂಮಕೇತುವಾಗಿಚ್ಛಕೇತು ದಿವ್ಯ[8]ಕಾಂತಾ[8] ಕಟಾಕ್ಷಧವಳ ದೀಧಿತಿ ಸುಧಾ ಸೌಧಮಪ್ಪ ಸೌಧರ್ಮಕಲ್ಪದ ಶ್ರೀನಿಳಯ ವಿಮಾನದೊಳ್ ಶ್ರೀದೇವನೆಂಬ ದೇವನಾದಂ ತಪಸ್ತಪನ ವಿಕಸಿತ ವದನ ಕಮಳಪ್ರಭೆಯಪ್ಪ

---

1 ಬು (ಕಗ) 2 ರ್ವಾದ (ಚಜಟಡಣ) 3 ಪ (ಜ) 4 ಹ (ಡ) 5 ತ (ಚಟಣ) 6 ನೆಂ (ಚಟಡಣ) 7 ಶಿ (ಚಟಡಣ) 8 ಕುಂತಳ (ಚಟಡಣ)

ಕಮಳಪ್ರಭೆಯುಂ ಸುಪ್ರಭವಿಮಾನದೊಳ್ ವಿಮಲಪ್ರಭನೆಂಬ ದೇವನಾದಳ್ ವ್ರತ ಸ್ವರೂಪ ನಿರೂಪಣಾ ಪ್ರವೀಣ ಪರಮಾಗಮ ಶ್ರವಣ ನಿರ್ಮಳ ಭೂತ ಧೀವರನಪ್ಪ ಧೀವ[1]ರನುಂ[1] ವಿದ್ಯುತ್ಪ್ರಭವಿಮಾನದೊಳ್ ಶ್ರುತಪ್ರಭಾಂಕನೆಂಬ ದೇವನಾದಂ [2]ಇಂತಾ[2] ಮೂವರುಂ ಸುರಲೋಕ ಸೌಖ್ಯಮನನುಭವಿಸಿ ಬಂದು

ಶ್ರೀದೇವಂ ಚಿಂತಾಗತಿ
ಯಾದಂ ವಿಮಳಪ್ರಭಂ ಮನೋಗತಿಯುಂ ತಾ
ನಾದಂ ಶ್ರುತಪ್ರಭಾಂಕನು
ವಿಾ ದುರಿತಾರಾತಿ ಚಪಳಗತಿ ತಾನಾದಂ ||೯||

ವ|| ಇದು ನಮ್ಮ ಮುತ್ತಮೂವರ ಭವಸಂಚಕ ಪ್ರಪಂಚಿತ ಪ್ರೀತಿ ನಿಮಿತ್ತ[3]ಮೊಂದು ಹಿತೋಪದೇಶಮಂ ಕೇ[4]ಳ್ದೊಡೆ[4]

ಇದಱಿಮೊಳನಿರುದ್ಧ ನವರಂ
ಧ್ರದೊಳಪಘನ ಘಟದೊಳ್[5]ಯ[5]ನ ಶೀಲನ[6]ದಿಂ[6] (?) ಪೋ
ಪುದು ಚೋದ್ಯಮೆ ಇರ್ದಪುದೆಂ
ಬುದೆ ಚೋದ್ಯಂ ಪ್ರಾಣಪವನನನುಚಿತ ಭವನಂ ||೧೦||

ಎಡೆಯಾಡುತಿರ್ಪ [7]ವೇ[7]ಣುವೆ
ಕೆಡೆವಂತಿರೆ ತಂತು ತೀರ್ವುದುಂ ಹತಕಾಯಂ
ಕೆಡೆವುದು ಕಾಣಲ್ಕಲ್ಲದೆ
[8]ಸ[8]ಡವು[9]ಡ[9]ನಱಿವನ್ನ[10]ನಾ[10]ವನಾಯುವ ತವಿಲಂ ||೧೧||

ವ|| ತಿಂಗಳಂತೆ ನಿನಗೊಂದೇ ತಿಂಗಳಾಯುಷ್ಯಮವಶ್ಯಂ ಪರವಶನಾ[11]ಗಿರದೆ[11] ಪರಲೋಕ ಹಿತಮನೆ ಮನದೆಗೊಳ್ಳೆಂಬುದುಮಪರಾಜಿತನಿಂತೆಂದಂ

ಇಂದುಗಮಿನಂಗ[12]ಮಂಬುದ[12]
ವೃಂದಕ್ಕಂ [13]ಫಳಿನ ಶಾಖಿಗಂ[13] ಮೇದಿನಿಗಂ
ಮಂದಾನಿಳಂಗಮಿ[14]ನ್ನಿ[14]
ಮ್ಮಂದಿಗರ್ಗಂ ಸಲೆ ಪರೋಪಕಾರಮೆ ಶೀಲಂ ||೧೨||

---

1 ರಂ (ಜ) 2 ಇತ್ತಾ (ಟ) 3 ತ್ತಂ ಮತ್ತ (ಜ) 4 ಳ್ (ಜ) 5 ಟ (ಚಟಣ) ವು (ಡ) 6 ದೆಂ (ಜ) 7 ವೆನ (ಚಟಡಣ) 8 ನ (ಟಡ) 9 ದ (ಚಜಟಡ) 10 ಗಾ (ಜ) 11 ಗಿ (ಚಟಡಣ) 12 ಮೆಂಬುಧ (ಕಗಚಡ) ಮೆಂಬುದ (ಟ) 13 ಫಳಿನ ಶೋಭೆಗಂ (ಣ) 14 ನ್ನಿ (ಜ)

ಗುಣದಿಂದಂ ಸಹಜಾತ[1]ವಿಶಾ[1]ಹದ ರಿಣಂ ಬಲ್ಲಿತ್ತು ನೀವಿಶಾ ಮಹಾ
ಗುಣ[2]ದಿಂ[2]ದಲ್ಲಮ[3]ರ[3]ತ್ವಮಂ ಬಿಸುಟೊಡಂ ತಾಂ ಬಿಟ್ಟುದಿಲ್ಲೆಮ್ಮ ಮೇ
ಗಣ ನಿಮ್ಮೊಂದು ಮಮತ್ವಮಿಂತುಟಟು ರಿಣಂ [4]ಕ್ಷೇತ್ರ[4]ವ್ಯಮೆಂದಂದು ಚಾ
ರಣಯುಗ್ಮಕ್ಕತಿ ಭಕ್ತಿಯಿಂದೆಱಗಿದಂ ವಿದ್ಯಾವಧೂವಲ್ಲಭಂ ||೧೩||

ವ|| ಎಱಗುವುದುಮವರಭ್ಯುದಯ ಪರಂಪರಾಪ್ರಾ[5]ಪ್ತ[5]ನಾಗೆಂದು ಪರಸಿ ಪೋದರಿತ್ತಲಪರಾಜಿತನುಂ ಮುನ್ನಿನಂತೆ ಸಿರೀಕ್ಷಣ [6]ವಿಕಾರಮು[6]ಮಹಂಕಾರಮುಮಿಲ್ಲದೆ ಪರಮಪ್ರತಿ ಪೊಟಲಂ ಪುಗುವಂತೆ ಪೈಬಲಂ ಪೊಕ್ಕು ನೆರೆಮನೆಗೆ [7]ಬಂದುಪಸರ್ಗ[7]ಕ್ಕೆ ಸಲ್ವ[8]ತ್ತಿ[8]ಗಿವಗಿ[8]ಲ್ಲದಿವು ಸಲ್ಲಿ[9]ವೆಂದು[9]ದ್ಯೋಗಿಸು[10]ತ್ತಂ ತ್ಯಾಗದಾನಂ[10]ಗಳೊಳಂ ಸಾಂಯುಗೀನ[11]ಜನಂ[11]ಗಳೊಳಂ ಕಾಲ್ಗುಡದ ಮೋಹಮಂ ಧರ್ಮಧವಳ ದ್ವಿರದನಮನೇಱಿಸಿ ಪವನಜವಸ[12]ತ್ವ[12]ತುರಂಗಮಂಗಳ ಮೇಗಣ ಮನಮನುಚ್ಚೈಶ್ರವಮಪ್ಪ ವೈರಾಗ್ಯವಾಜಿಯ ಜಂಗೆವರಿಸಿ ಮುಂದಲೆಯ ಕಸದಂತೆ ಮುಂತಿರ್ದ ಕಸವರಮಂ ಸತ್ಪಾತ್ರದ ಕಯ್ಗೆ ಮಣ್ಣಿಕ್ಕುವಂತಿಕ್ಕಿ

ಪರಿತಾಪಾತಪಮುಟ್ಟಿ ದತ್ತೊಗೆದುದುದ್ಬೋಧ ಪ್ರದೀಪಂ ದಮ
ದ್ವಿರದಾರೂಢ[13]ನಿ[13]ನಾದೆಸೇವೆನಿದನೆಂದಂದಾನ್ನಪಂ ಛತ್ರಚಾ
ಮರ ಸಿಂಹಾಸನಮೆಂಬಿವಂ ತ್ವರಿತದಿಂ ಪ್ರೀತಿಂಕರಂಗಿ[14]ತ್ತನೊ
ಲ್ದು[14]ರೆ ಮಿಕ್ಕಚ್ಯುತರಾಜ್ಯಮಂ ಪಡೆವವೊಲ್ ಸಾಮಾನ್ಯ ಸಾಮ್ರಾಜ್ಯಮಂ ||೧೪||

ವ|| ಅಲ್ಲಿಂ ಬಟಿಂಯ ಭಂಡಾರದ ಪೊನ್ನೆಲ್ಲಮಂ ತೆಗೆಸಿ ತ್ರಿಭುವನಾಭರಣಮೆಂಬ ಜಿನಮಂದಿರದ ಮುಂದೆ ಮಂದರಮಂ ಮಾಡಿಸಿ ಪಂಚರತ್ನ ಸಂಚಯದಿನದಕ್ಕೆ ಕಲ್ಪಕುಜಂಗಳಂ ಕಲ್ಪಿಸಿ ನಕ್ಷತ್ರಮಾಲೆಯೆಂಬ ಹಾರ[15]ಮಂ[15] ಚಂದ್ರಾದಿತ್ಯರೆಂಬ ಮಣಿದರ್ಪ[16]ಣಂಗಳುಮಂ[16] ಬಲವರಿಸಿ

ಅನಘಂ ತಾನೆ ಮಹೇಂದ್ರನಾಗಿ ಮಹನೀಯಾನರ್ಘ್ಯಮಾಣಿಕ್ಯಮಂ
ಡನಮಾಳಾಂಕು ಸಹಸ್ರನೇತ್ರತನುರಾಜೇಂದ್ರಂ ಜಿನೇಂದ್ರಂಗೆ ಮ
ಜ್ಜನಮಂ ಸಿರ್ಪಿಸಿ ನಿರ್ಮಳಾಧ್ವರಮನಂದಷ್ಟಾಹ್ನಿಕಂ ಮಾಡಿ ತ
ತ್ಕನಕಾದ್ರೀಂದ್ರಮನಿತ್ತನರ್ಥಿ[17]ನಿಕರಕ್ಕಾ ಧೈ[17]ರ್ಯ ವಿದ್ಯಾಧರಂ ||೧೫||

---

1 ಮೋ (ಜ) 2 ಕೆಂ (ಜ) 3 ತ (ಚಟಡಣ) 4 ಕ್ಷಂತ (ಜ) 5 ಪ್ತ (ಜ) 6 ಮು (ಚಟಡಣ) 7 ವರ್ಷಂತರ ಮನೆಗೆವಂದುಸಗ್ಗ (ಚಟಡಣ) 8 ಲ್ಲಿಗೆ ಇವ (ಚಟಡಣ) 9 ದು (ಜ) 10 ವಂತ್ಯಾಗನಾಗಂ (ಜ) 11 ಜಗಂ (ಚಣ) ಗಜಂ (ಜ) 12 ತ್ವರ (ಚಟಡಣ) 13 ಗೆ (ಜ) 14 ತ್ತನೊಲ್ದ (ಚಟಡ) ತ್ತನಾಳ್ದ (ಣ) 15 ಮುಂ (ಚಟಡ) 16 ಣಂಗಳು ಮುಂ (ಟಣ) ಣಮುಂ (ಜ) 17 ನಿಕರಂ ಸೌಂದ (ಚಟ) ನಿಕರಂ ಕಾಂಸೌಂದ (ಡ) ಕರಕ್ಕಾ ಧೈ (ಣ)

ರಮಣೀರಾಗ ವಿಕಾಸಕೋಶ[1]ಲಸನಾಂ[1]ಭೋಜಾತ ಲಾವಣ್ಯಮಂ
ದ ಮಧೂಚ್ಛಿಷ್ಟಮನುಂಡು ಬೆಂ[2]ಡು[2]ನೆಗೆದಷ್ಪೃಶ್ಯಂಗಳಾಗಿರ್ದ ತ
ನ್ನ ಮನೋನೇತ್ರಮನಾಳಿಗಳ್ಗೆ ಸಮಗಂಗಾಸ್ನಾನದಿಂ ಶುದ್ಧಿಯಂ
ಸಮೆದಾ ಸಂಯಮಬಾಜನಂ ಜಿನಪದಾಂಭೋಜಂಗಳೊಳ್ ಸಾರ್ಚಿದಂ ||೧೬||

ವ|| ಅನಂತರಂ ಬಾಂಧವಬಂಧನಮಂ ಪಱಿದು ಪಂಚಮುಷ್ಟಿಯಿಂ ಕೇಶಪಾ[3]ಶಮಂ[3] ಪಱಿಮುಟ[4]ದಿಪ್ಪ[4]ತ್ತೆರಡು ದಿವಸಮಂ ಪ್ರಾಯೋಪಯೋಗ ಸಂನ್ಯಸನದಿನಿಪ್ಪತ್ತೆರಡು ಸಾಗರೋಪಮಾಯುಷ್ಯಮಂ ಪಡೆದಂ[5]ದಚ್ಯುತಕಲ್ಪದ[5] ಸಾಂತಕರ ವಿಮಾನದೊಳಚ್ಯುತೇಂದ್ರನಾಗಿ

ಭೋಗಾಮೃತಮಂ ಪುಣ್ಯಾನಿ
ಯೋಗದಿನಿಂತೆತ್ತಮಿರೆಯು[6]ಮೌರ್ವ[6]ದ ತೃಷ್ಣಾ
[7]ಯೋ[7]ಗಮಿಪೇಂ ದ್ವಾವಿಂಶತಿ
ನಾಗರಜೀನಮುಸೀಂಟಿದತ್ತನಿಮಿಷನಾ ||೧೭||

ಇತರರ ಸಂಪತ್ತೀನ
ಚ್ಯುತಕಲ್ಪದಿನಾಯುರಬ್ಧಿಯವಸಾನದೊಳ
ಚ್ಯುತ[8]ನುಂ[8] ಚ್ಯುತನಾದಂ ಯಮ
ಹತಕಂ ಸುಸ್ಥಿ[9]ತರ[9]ನಾರುಮಂ ಸೈರಿಪನೇ ||೧೮||

ಎಂದುಂ ಕಾಲಕ್ಕೆ ಚಲಂ
ಸಂದುದು ಮೂಜಗದೊಳಚಲಮೆಂದೊಡೆ ನಗುತುಂ
ಬಂದು ತಳರ್ಚುಗುಮಚ್ಯುತ
ನೆಂದೊಡೆ ಕೆಡಪುಗುಮ[10]ಮ[10]ರನೆಂದೊಡೆ ಕೊಲ್ಗುಂ ||೧೯||

ನಿರುಪಮ ಜಂಬೂದ್ವೀಪದ
ಭರತಕ್ಷೇತ್ರಕ್ಕೆ ಸಸ್ಯಸಂಪದಮೆನಿಕುಂ
ಕುರುಜಾಂಗಣ ಜನಪದಮ
ಲ್ಲಿ ರಂಜಿಕುಂ ಹಸ್ತಿನಾಪುರಂ ಪೊಸದೆನೆವೋಲ್ ||೨೦||

---

1 ಫಲನಾಂ (ಚಣ) ಫಲನಂ (ಟಡ) 2 ದು (ಚಟದ) 3 ಶಂಗಳಂ (ಚಟಡಣ) 4 ದೆಪ್ಪಿ (ಚಟದಣ) 5 ತಚ್ಯುತ (ಚಟಡಣ) 6 ಪಾಱಿ (ಣ) 7 ಪೇ (ಚಟಡಣ) 8 ನು (ಚಡ) ನ (ಟಣ) 9 ರನ (ಟ) 10 ಘಮ (ಚಟಡಣ)

ಮೃಗಮೆತ್ತುನ್ಮೃಗ ಮುಗ್ಧವೀಕ್ಷಿತವ[1]ದೆತ್ತ ಜ್ವಾಲ[1]ವೆತ್ತೋಪ್ಪಲ
ಕ್ಷ್ಮಿಗೆ ನೋಂತಾಲದ ಪಣ್ಣದೆತ್ತ ಬಱಿಯಾ ಪುತ್ತೆತ್ತ ಕೇಶಾಸಿ[2]ತೋ
ರ[3]ಗವೆತ್ತಂ[3]ಕಮವೆ[3]ತ್ತ ಪೀರ್ವಮೃತಮೆತ್ತಂತಾ ಪುರಸ್ತ್ರೀ ಮುಖೇಂ
ದುಗಳಂ ಪೋಲಿಸಿ ಪೊಂಗುವರ್ಸಮ[4]ರತ ಶ್ರಾಂ[4]ತಂಗ[5]ಳಿಂ[6] ತಿಂಗಳಂ ||೨೦||

ನಡೆನೋಟ್ಪರ ಕಡೆಗಣ್ಣಿಂ
ಕಡುನಲ್ಲರ ಮನವುಮೊಡನೆ ಪೊತ್ತುವು ಪುರದೊಳ್
ಮಡದಿಯರ ನೊಳೆಯನಲ್ಲಮೊ
ಡುಡಿಯುವೆ ಬ[6]ಳ[6]ವಳಿಕೆವಡೆದ ಬಡನಡು ಭರದಿಂ ||೨೧||

ಆ ಪುರಮನಾಳ್ವನಮೃತಾ
ಳಾಸಂ ಯಮಕೋಸನತ್ಯುದಾರಂ ಧೀರಂ
ರೂಪೇಕ್ಷುಚಾಪನನ್ವಯ
ದೀ[7]ಪಂ[7] ಶ್ರೀಚಂದ್ರನನಸತಾರಿ ನರೇಂದ್ರಂ ||೨೨||

ದಯಿತೇಕ್ಷಣ ಮಗ್ನ ಮೃಗಂ
ವಿಯತ್ಪಮೋದ್ಭಾಸಿ ರುಧಿರಕರ್ದಮ ವಲ್ಮೀ
ಕಯುತಂ ಶ್ರೀಚಂದ್ರಮು[8]ಖ[8]
ಪ್ರಿಯಚಂದ್ರಂ ಕೀರ್ತಿಚಂದ್ರನೆಸೆವ[9]ಸಿ[9]ಚಂದ್ರಂ ||೨೩||

ಆ ಮಹಿಪತಿಯ ಮನಃಪ್ರಿ[10]ಯ[10]
ಕಾಮಿನಿ ಮಿಕ್ಕಗ್ರಮಹಿಷಿ ದಾನೆನಿಸಿರ್ದಳ್
ಶ್ರೀಮತಿಯೆಂಬಳ್ ದಾನ
ಶ್ರೀಮತಿಯಿಂ ಕಾಮಧೇನುವೆನಿಸಿದಳೆಳೆ[11]ಯಂ[11] ||೨೪||

ಅವಳಂಗಚ್ಛವಿಗೋತು ಪಚ್ಚೆ ಕುರುಳಂದ[12]ಕ್ಕೋತು[12] ನೀಳಂ ನಖ
ಚ್ಛವಿಗೋತುಜ್ವಳವಜ್ರಮೆಲ್ಲ ಸುಲಿಪಲ್ಗೋತಚ್ಛ ಮುಕ್ತಾಫಳಂ
ಪವಳಂ ಬಾಯ್ದೆಱೆಗೋತು ಬಂದು ಸಲೆ ಸೇವಾವೃತ್ತಿಗೆಯ್ವಂತೆ ರ
ತ್ನ ವಿಭೂಷಾವಳಿಯೊರ್ಮೆಯುಂ ತೊಲಗವಂತಾ ಶ್ರೀಮತೀದೇವಿ[13]ಯಂ[13] ||೨೫||

---

1 ದೆತ್ತ ಜ್ವಾಲ (ಙ) 2 ರೋವು (ಚಟಡಣ) 3 ಕವುದೆ (ಗಚಟ) ಕಮುವೆ (ಣ) ಕರ್ವು(ಡ) 4 ತನು ಶ್ರಾ (ಗ) ತರ ಶ್ರಾ (ಚಟಡ) ರತ ಶ್ರಾ (ಣ) 5 ಳಂ (ಜಟ) 6 ಳ (ಟಣ) 7 ಪಃ (ಜ) 8 ಖಂ (ಟ) 9 ಶ್ರೀ (ಡ) 10 ಯೆ (ಚಟಡಣ) 11 ಯಿಂ (ಚಟಡ) 12 ಕ್ಕೊಂದು (ಚಟಡ) 13 ಯಾ (ಜ)

ಆ ನೃಪತಿಗಮಾರಾಜ್ಞಿಗ
ಮಾ ನಾಕಜನೊಸಗೆ ಪುಟ್ಟೆ ಪುಟ್ಟೆ ಮಹಾಪು
ಣ್ಯಾ[1]ನೀಕಂ[1] ಪಡೆದಂ ಶಿಶು
ಭಾನುದ್ಯುತಿ ಸುಪ್ರತಿಷ್ಠನೆಂಬೊಳ್ಪೆಸರಂ ॥೨೭॥

ಆ ರಾಜಪ್ರಿಯಸೂನು ತನ್ನೆಳವೆಯಂದುದ್ದಾಮ ವಾಗ್ದೇವಿಯಂ
ಧೀರಂ ಯೌವನದಂದು ಸನ್ನುತ ಸುನಂದಾದೇವಿಯಂ ಕ್ಷತ್ರಿಯಾ
ಚಾರಖ್ಯಾತಿ ವಿಧೇಯ ನೀತಿಯಜೀಯಲ್ಕಲ್ತೆಂದು ಲೋಕಸ್ತುತಂ
ವೀರಶ್ರೀಯನಲಂಪಿನಿಂ ಮದುವೆ ನಿಂದುತ್ಸಾಹಮಂ ತಾಳ್ದಿದಂ ॥೨೮॥

ಬೇಡ ಕೊಲಲೆಂಬ ತೆಜಿದಿಂ
ಕ್ರೀಡಾರಸದಿಂದೆ ರಾಜತನಯಂ ಕೊಂಡಂ
ದಾಡೆಯುಮಂ ಕೆಚ್ಚೀನೊಡ
ನಾಡಿಸುವನೊ ಕಾಡ ಕರಿಗಳಂ ಹರಿಗಳುಮಂ ॥೨೯॥

ವ॥ ಅಂತಿಜೀವ ಮೆಜ[2]ವ[2] ಪ್ರಾಯದ ಪುತ್ರನಂ ಕಂಡು ಸಂಸಾರದ ಕಡೆಗಂಡಂತೆ
ಸಂತೋಷದಂತನೆಯ್ದಿ

ಚಂದ್ರಂ ಬುಧಂಗೆ ಕೊಡುವವೊ
ಲಿಂ[3]ದ್ರ[3]ಪ್ರತಿಮಂಗೆ ಸುಪ್ರತಿಷ್ಠಂಗಾ ಶ್ರೀ
ಚಂದ್ರಂ ರಾಜ್ಯಮನಪಗತ
[4]ತಂ[4]ದ್ರಂ ಕೊಟ್ಟೊಳ್ದಪಕ್ಕೆ ಕಚನುಂ ಕೊಟ್ಟಂ ॥೩೦॥

ಮಂದರಕುಧರ ಸಮಾನ ಸು
ಮಂದಿರ ಗುರುಪಾದ ಸೇವೆಗೆಯ್ದಾಚರಿಸು
ತ್ತಂದಂದಿಂಗಕಳಂಕಂ
ಕುಂದಿದನುತ್ತಮ ತಪಶ್ರೀ[5]ತ್[5] ಶ್ರೀಚಂದ್ರಂ ॥೩೧॥

ವಿಗತ ವಸನಾಂಶು[6]ವಿಸರಂ[6]
ಪ್ರಗಲ್ಭ ನಿಷ್ಕಪಟವೃತ್ತಿರಹಿತಂ ವಿಮಲ
ಪ್ರಗುಣನುಪಶಾಂತ ಕಾಮಂ
ಪೊಗಸಿನ ಚಂದ್ರಂಬೊಲಿರ್ದನು ಶ್ರೀಚಂದ್ರಂ ॥೩೨॥

---

1 ನಸ್ವಿತ (ಗಟ) ನನಿತ (ಚ) ನೀತಂ (ಜ) ನಸ್ವಿತಂ (ಡ) 2 ದ (ಜಟಡ) 3 ದ್ರಂ (ಜಟ) 4 ಜಂ (ಜ) 5 ತಂ (ಚಟಡಣ) 6 ವಿರಸಂ (ಚಡಣ)

ಇತ್ತ ಪಿತೃವಿತ್ತ ರಾಜ್ಯಮ
ನಿತ್ತು ಭುಜಕ್ಕಾಜ್ಞೆಯಂ ವಿರೋಧಿಗಳ ನೊಸ
ಲ್ಗಿತ್ತರಸುಗೆಯ್ದನಾತ್ಮಾ
ಯತ್ತಂ ಕಲಿ ಸುಪ್ರತಿಷ್ಠನಯನಯ[1]ನಿ[1]ಷ್ಠಂ ||೩೩||

ಧೃತಿವೆತ್ತು ತಪವಿಗ್ಜಯೋದ್ಯಮ ಭವದ್ವೈರೀ ಪ್ರಣಾದಕ್ಕೆ ಕಂ
ಪಿತಮಪ್ಪಾದಿಯ ಕೂರ್ಮನಂ ಫಣಿಪನಂ ದಿಗ್ದಂತಿಯಂ ಗೋತ್ರಪ
ರ್ವತಮಂ ಭೂಮಿ ಬಿಸುಟ್ಟು ಬಂದು ಪಿಡಿದುಂ ನಿಶ್ಚಿಂತದಿಂ ಸು
ಪ್ರತಿಷ್ಠಿತನಾಗಿರ್ಪುದು ಸುಪ್ರತಿ[2]ಷ್ಠನ ಪಟಿಷ್ಠೋ[2]ದ್ದಂಡ ದೋರ್ದಂಡದೊಳ್ ||೩೪||

ಮಾನಂ ಸದ್ಧೈರ್ಯ ದೀಕ್ಷಾಗುರು ಸುರಗಿರಿಗಂ ಕಲ್ಪವೃಕ್ಷಕ್ಕೆ ಹಸ್ತಂ
ದಾನೋಪಾಧ್ಯಾಯನಾತ್ಮಾಕೃತಿಯ ತನುಗೆ ಬಿಲ್ಲೋಜನೋಜಃ ಪ್ರಸಾದಾ
ಧೀನಂ ತನ್ನುಕ್ತಿ ವಾಗ್ನರ್ತಕಿಗಖಿಳ ಕ[3]ಳಾಲಾ[3]ಸ್ಯ ಶೈಲೂಷನಾಗ
ಲ್ತಾನಾಯ್ತೆಂಬನ್ನಮಾದಂ ಜಗಮನೆಱಗಿಸಲ್ ಸುಪ್ರತಿಷ್ಠಂ ಗರಿಷ್ಠಂ ||೩೫||

ಆದತ್ತು ಸುಪ್ರತಿಷ್ಠ ಧ
ರಾದಯಿತಂಗಧಿಕದೃಷ್ಟಿಯೆನೆ ಮೇದಿನಿ ಭಾ
ಗ್ಯೋದಯಮಂ ಪಡೆದ ಸುನಂ
ದಾದೇವಿ ಸುದೃಷ್ಟನೆಂಬ ಮಗನಂ [4]ಪಡೆ[4]ದಳ್ ||೩೬||

ಉಕ್ಕೆವದೆ[5]ಲೆ[5] ಮಾಯದ ಕೊಳ
[6]ರ್ವ[6]ಕ್ಕೆಯ ಗೆ[7]ಳೆ[7] ತಿಳಕಮಿಡುವ ಪೊಳೆ ಪುಸಿಯ ಪುಣಿಲ್
[8]ಟ[8]ಕ್ಕಿನ ಬಿಸಲತೆ ಮುತ್ತಂ
ಮುಕ್ಕುಳಿಸಿದ ಪವಳ[9]ಮವಳ[9] ಮುರುಳಿಸುವಂಗಂ ||೩೭||

ಊಡುವ ಪೊಸದಳಿರಲರಂ
ಸೂಡಿರ್ಪಳಿ ಕಂಪನಱಿವ ಸಂಪಗೆ ನಯದಿಂ
ನೋಡುವ ನಿಡುನೈದಿಲ್ಗಾ
ತಾಡುವ ತಾವರೆ ವಿರಾಜಿಕುಂ ನೃಪಸತಿಯಾ ||೩೮||

---

1 ವಿ (ಜ) 2 ಷ್ಠಿತ ಪಟಿಷ್ಠೊ (ಚ) ಸ್ಥಿತ ಪಟಿಷ್ಠೋ (ಟಡ) 3 ಳೋಲ್ಲಾ (ಟಡ)
4 ಪಿಡಿ (ಜ) 5 ಳೆ (ಚಜ) 6 ವ (ಜ) 7 ಡೆ (ಜ) 8 ಉ (ಜ) 9 ದಂತೆ (ಚಟಡಜ)

ಪ್ರಭೆ[1]ಯಿಂ[1] ಚಿಂತಾಮಣಿ ಕ
ಲ್ಪಭೂರುಹಂ ಪುಷ್ಪಮಂಜರಿಯಿನೆಸೆವವೊಲಾ
ತ್ರಿಭುವನ ಭೂಷಣನೆಸೆದಂ
ಶುಭನಂದನೆಯಿಂ ಸುನಂದೆಯಿಂದನವರತಂ ||೩೯||

ಪಡೆದು ಯಶೋಧರ ಯತಿಪತಿ
ಯಡಿದಳಿರ್ಗಳನೆಱಗಿ ಕಯ್ಯೊಳಿಕ್ಕಲ್ಪಡೆದಾ
ಗಡೆ ಪಂಚಾಶ್ಚರ್ಯಮುಮಂ
ಪಡೆದಂ ಸತ್ಪಾತ್ರದಾನಿ ಪಡೆಯದುದುಂಟೇ ||೪೦||

ಪಡೆಯಲಿ ಬರ್ಪುದಾ ಪರುಷವೇದಿಯನಿಂದ್ರನರೇಂದ್ರಲಕ್ಷ್ಮಿಯಂ
ಪಡೆಯಲಿ ಬರ್ಪುದಾರಯೆ ಸುಪಾತ್ರಮನೊಂದನೆ ಯೋಗ್ಯಕಾಲದೊಳ್
ಪಡೆಯ[2]ಲಿ[2] ಬಾರದಲ್ಲಿ[3]ದೆ[3]ಡೆಗೀವವನೇವ[4]ಡೆ[ವಂ][4] ಸುಪಾತ್ರಮಂ
ಪಡೆದನೆ ವಸ್ತುವಂ ಪಡೆದನಾತನ ಪುಣ್ಯಮೆ ಪುಣ್ಯಕಾರಣಂ ||೪೧||

ಪಡೆದುಂ ಪಣ[5]ಮಂ[5] ಪಾತ್ರಂ
ಬಡೆಯದೊಡದು ನಿಃಫಲಂ ಫಲಾರ್ಥಿಗೆ ಪಾತ್ರಂ
ಬಡೆವುದೆ ಪುಣ್ಯಂ ಪಣಮಂ
ಪಡೆವುದು ಪುಣ್ಯಮೆ ಪಣಂ ಮಹಾಹಿಗಮಿಲ್ಲಾ ||೪೨||

ತಡೆಯದೆ ಮುಗಿಲ್ಗೆ ಕುಡುವುದು
ಕಡಲಿತರ ಜನಕ್ಕೆ ಕೈಪೆಯಪ್ಪುದು ಕುಡಲು
ಕ್ಕೊಡೆ ಪಾತ್ರಮಱಿದು ಮಾಣದೆ
ಕುಡುವುದಪಾತ್ರಕ್ಕೆ ಕೊಟ್ಟೊಡೇಂ ಪುರುಳುಂಟೇ ||೪೩||

ಸ್ವಾತಿಯ ಮುಗಿಲ್ಗೆ ತಾನಿ
ತ್ತಾ ತೋಯಂ ರತ್ನಮಾಗೆ ರತ್ನಾಕರಮಾ
ಯ್ತಾ ತೋಯದಿನೆಡೆಯಱಿಯದೆ
ಪಾತಾಳಕ್ಕಿತ್ತ ತೋಯಮೇನಾಯ್ತಱಿ[6]ಯಾ[6] ||೪೪||

---

1 ಯಂ (ಚಟಡಃ) 2 ದೆ (ಟ) 3 ದೊ (ಜ) 4 ಡನೆಂ (ಚಟಡ) ಡೆದಂ (ಜಃ) 5 ವುಂ (ಚಟಡ) 6 ಯೆಂ (ಜ)

ದೇವರ್ಗಲ್ಲ[1]ದೆ[1] ಕಳೆಯಂ
ಜೈವಾತೃಕನೀಯದಂತಿರುತ್ತಮ ಪಾತ್ರ
ಕ್ಕೀವುದು ಧನಮಂ ಸೌಖ್ಯಮ
ನೀವುದದುಂ ತವೆಯದಾ ಯು[2]ಗಾಂ[2]ತಂಬರೆಗಂ ||೪೫||

ತರಳಜಳಬಿಂದು ಮೌಕ್ತಿಕ
ಭರಮಪ್ಪವೊಲುದಧಿ ಶುಕ್ತಿಪತಿತಂ ನೀರುಂ
ಪಿರಿದಪ್ಪ ಪುಣ್ಯಮಕ್ಕುಂ
ಪರಮ ತಪೋಧನರ ಪಾಣಿಸಂಪುಟ ಪತಿತಂ ||೪೬||

ಕುಡುವಾತನ[3]ರ್ಥಿ[3]ಯಪ್ಪಂ
ತೊಡರದೆ ಕೊಳ್ವಾತನುತ್ತಮ ಪ್ರಭುವಪ್ಪಂ
ಕಡೆಗಣಿಸಿ ಧರ್ಮಪಾತ್ರಂ
ಪಡೆದುನ್ನತಿಯಂ ಸುರಾದ್ರಿಯುಂ ಪಡೆದಪುದೇ ||೪೭||

ಓವಿ [4]ಫ[4]ಳತರುಗೆ ನೀರ್ಗಳ
ನೀವುದು[5]ಮಂ[5] ಬೈತು ಬಿತ್ತನೊಲವಿಂ ಬೆ[6]ಳಗೈ
ಗೀ[6]ವುದುಮಂ ಸತ್ಪಾತ್ರ
ಕ್ಕೀವುದುಮಂ ದಾನಮೆಂಬ ನಾ[7]ಣ್ಣೆ[7]ಕೆಯುಂಟೇ ||೪೮||

ಬಿಡುಮುತ್ತಂ ಮಾಣಿಕಮಂ
[8]ಪಿಡಿ[8]ದೊಡ್ಡಿದ ಯತಿಯ ಕಯ್ಯೊಳಿಕ್ಕಿದಪಳೆಯೊ
ರ್ಪಿಡಿಗೂಟನಿಕ್ಕಿ ಸಗ್ಗಂ
ಬಡೆಯದ ನರನೆಗ್ಗನಲ್ತೆ ಭುವನಾಭರಣಾ ||೪೯||

ವ|| ಎಂದು ಪೇೞ್ವ ಧರ್ಮೋಪಾಧ್ಯಾಯರ ವಚನಾಮೃತದಿಂ ಮೂಡಿ ಮಡಲ್ತೆ ದಾನಬುದ್ಧಿಕಲ್ಪಕುಜಂ ಸತ್ಪಾ[9]ತ್ರ[9] ಪೋಷಣಮಾಗೆ ಧರ್ಮವಿಜಯಿಯಾಗಿ ರಾಜ್ಯಂಗೆಯ್ಯುತ್ತುಮಿರೆ

1 ದ (ಚಟ) 2 ಗಾ (ಜ) 3 ಥಿ (ಜ) 4 ಫು (ಜ) 5 ವಾಂ (ಜ) 6 ಳಗೆಯ್ದೊ (ಚಡಣ) ಳಗೈದಿ (ಟ) 7 ಚಿ (ಚಟಡಣ) 8 ಬಿಡ (ಜ) ತ್ರಿ (ಚಜಟ) 9 ತ್ರಿಪೋಷ (ಡ) ತ್ರ (ಣ)

ಅತಿ ಸಂಗ್ರಾಹ್ಯಮೊ ಮಲ್ಲಿಕಾಪರಿಮಳಂ ಮಾಕಂದದಾಮೋದಮೊ
ಳ್ಳಿತೊ ವಾಸಂತಿಯ ಕಂಪು ಲೇಸೊ ಸುರಭಿ ಶ್ರೀಸೌರಭಂ ಯೋಗ್ಯಮೋ
ಸ್ತುತಮೋ ಪಾಟಳಗಂಧಮೆಂದು ಪಿಡಿಯಲ್ಬರ್ಪಂತೆ ಬಂದತ್ತು ಪಂ
ಡಿತಶೀಲಂ ಮಳಯಾನಿಳಂ ಮಲಯಜಾಮೋದೈಕ ಸಂಸಕ್ತ[1]ನೋ[1] ॥೫೦॥

ವ॥ ಆ ಬಂದ ಮಂ[2]ದಮಳಯಾ[2]ನಿಳನನಿದಿರ್ಗೊಳಲೆಂದೊಂದಿರುಳಾ ಮಾನವೇಂದ್ರನಿಂ[3]ದ್ರ[3] ವಿಮಾನವನೇಱುವುದನನುಕರಿಸುವಂತೆ ಕರುಮಾಡಮನೇಱಿ ಪಾಸಿನ ಪೊರೆಯೊ[4]ಳ್ಪ[4]ಟ್ಟಿರ್ಪುದನಭಿನಯಿಸುವಂತೆ ಪರಾಂಗಣದೊಳ್ ಪಚ್ಚವಡಿಸಿರ್ದಮೃತಾರ್ಣವ ತರಂಗ ಸ್ಥೂಲ ಹಂಸತೂಳತಳ್ಪ[5]ದೊಳ್[5] ಮಗ್ನಮೂರ್ತಿಯಾಗಿ ಕುಳ್ಳಿರ್ದ ಬಲೆಯ ಕಣ್ಣ[6]ಬೆ[6]ಳಗಿಂಗೆ ಬೆದಱಿ ಕಟ್ಟಿಲೆಯ ಮೊ[7]ಗ್ಗ[7]ರಂ [8]ಮುಗುಳ್ದು ಮೂ[8]ದಲಿಸಿ ಕವಿವಂತೆ ಕನಕಕೇತಕೀ ದೀರ್ಘದಳದಾಪಾನುಲೇಪನ ಕರ್ಪೂರ ತಾಂಬೂಲ ಬಹಳ ಪರಿಮಳಕ್ಕೆ ಪರಿತಂದು ಮುಸುಱಿ ಮುತ್ತುವ [9]ಮತ್ತ ಮ[9]ಧುಕರ ನಿಕರಮಂ ಲೀಲಾಕಮಲದಿಂ [10]ಸೋಂ[10]ದು [11]ಸೇದೆ[11]ವಡುವ ಸುನಂದಾದೇವಿಯ ಮುದ್ದುಮೊಗಮಂ ನಸುನಗೆವೆರಸು ನೋಡುತ್ತುಮಿರೆ

ಬಿರಿವನ್ನಂ ತಮಮೆಂಬ ನೀಳಗಿರಿಯಂ ತಾರಾಸಹಸ್ರಾಕ್ಷ[12]ನಂ[12]
ಬ[13]ರ[13] ಗೋತ್ರಾಂತಕನಿಟ್ಟ ವಜ್ರವೆನಸುಂ ಬೀೞ್ವಂತೆ ಕ[14]ಣ್ಣುಳ್ಳ[14] ಕ
ಣ್ಮರಲಂ ಪೆಣ್ಬಡೆ ಮುಚ್ಚೆ ಭೂಪ[15]ನರಸೆಂ[15]ಬೊಳ್ಪಲ್ಲಮೇಲೊಂದು ದ
ಳ್ಳುರಿ ಬೀೞ್ವಂತೆವೊಲಕ್ಕು ಬಿರ್ದುದು ನೃಪಂ ಬೆಂಬೀೞೆ ನಿರ್ವೇ[16]ಗ[16]ದಿಂ ॥೫೧॥

ಅದಟಲೆವ ಕೊಳ್ಳಿಯಂತು
[17]ಳ್ಕದ[17] ಕೊಳ್ಳಿ ಕನಲ್ದು ಬಿೞ್ದುದಂ ಕಂಡು ಕರಂ
ಬೆದಱಿ ಮಿಗೆ ಕೊಳ್ಳಿ[18]ಯಿಂ[18] ಕು
ತ್ತಿದವೊಲ್ಮಱುಗಿತ್ತು ಚಿತ್ತಮವನೀಪತಿಯಾ ॥೫೨॥

ವ॥ ಎಂದು ತನ್ನೊಳಿಂತೆಂದಂ

---

1 ನೇ (ಚಜಟಡ) 2 ದಾ (ಜ) 3 ದ್ರಂ (ಣ) 4 ಳ್ಪು (ಚಜಟಡ) 5 ತರದೊಳ್ (ಜ) 6 ಬೆಳಗಿಂ ಬೆ (ಜ) 7 ಗ (ಜ) 8 ಮೂ (ಜ) ಮುಗುಳ್ವಮೂ (ಟ) 9 ಮ (ಚಟ) 10 ಸೋ (ಜ) 11 ಸೆಡೆ (ಚಜಟಡ) ಸೆಡೆ (ಚಜಟಡ) 12 ನುಂ (ಣ) 13 ರೆ (ಚಟಡಣ) 14 ಣ್ಣುಕ್ಕೆ (ಚಟಡಣ) 15 ವರನೆಂ (ಚಣ) 16 ದ (ಜ) 17 (ಳ್ಕನಜ) 18 ಯಂ (ಚಟಡಣ)

ಏಕು[1]ಳ್ಕಂ[1] ಪೊಲ್ಲೆಂಬುದೊ
ಲೋಕಂ ಪೋಯ್ತೆನ್ನ ಮನದ ಮೋಹಧ್ವಾಂತಾ
ನೀಕಂ ಪ್ರಯೋಜನಾರ್ಥಾ
ಲೋಕನಮುಳ್ಳಪ್ರದೀಪದಿಂದಾಯ್ತಾಗಳ್ ||೫೩||

ತೇಜಂ ಬಾಡಿಸುತಿರ್ಪ ರೇಖೆಯೊ ಚಿರಂ ಬಾಟ್ವಾಸೆಯಿಂದೀ ಮಹಾ
ರಾಜನ್ನೋಡುವ ತೀವ್ರತೇಜದ ಮಹಾಸಪ್ತಾರ್ಚಿಗಂಡುಂ ಮಹಾ
ತೇಜಂ ಭಾಸ್ಕರನಸ್ತದೊಳ್ಕಿಡೆವು[2]ದಂ[2] ಕಂಡುಂ ಮಹೋ[3]ಳ್ಕಂ[3]ಜ್ವಳ
ತ್ತೇಜಂ ಬೀಟ್ವು[4]ದು[4]ಗಂಡುಮು[5]ದ್ಧ[5]ತ ಮಹಾ ಮೋಹಾಂಧಕಾರಾಂಧಕರ್ ||೫೪||

ಪುಟ್ಟುಂಗುರುಡಂ ಕಾಣ್ಬನೆ
ಬಟ್ಟೆಯನಮಳಾಕ್ಷನಂತೆ ಸದ್ದೃಷ್ಟಿಯೆ ಬಾ
ಯ್ಕುಟ್ಟದೆ [6]ಕಾಣ್ಗಂ[6] ಧರ್ಮದ
ಬಟ್ಟೆಯ ನೆಱೆ ಕಾಣಲಱಿವನಕ್ಕು ಮದಾಂಧಂ ||೫೫||

ವ|| ಆ ಪ್ರಸ್ತಾವದೊಳ್

ಕಂದಿಸೆ ಭಾಮಂಡಲರುಚಿ
ಸಂದೋಹಂ ಮೂಡುತಿರ್ಪ ರವಿಮಂಡಲಮೆನೆ
ಬಂದುದು ತನ್ನಗರಕ್ಕೆ ಸು
ಮಂದಿರ ಜಿನಪತಿಯ ಸಮವಸೃತಿ ಜಿತದುರಿತಂ ||೫೬||

ವ|| ಸುಪ್ರತಿ[7]ಷ್ಠಂ[7] ಚಾದಗೆಯ ಭಿನ್ನ[8]ಘನಧ್ವ[8]ನಿಯಿಂ ಪ್ರಾವೃಡಾಗಮ ನಮನಱಿವಂತೆ ದೇವದುಂದುಭಿಧ್ವನಿಯಿನಱಿದಱಿಲ್ಕೊಂಡನ ಮೇಲೆ [9]ತೊಱೆ ಬಂದತ್ತೆಂ[9]ದು ಸಂತಸಂಬಟ್ಟು ಪಾಪಪ್ರತಿವ್ಯೂಹಭೀತಿಯಿಂ ಸಮವಸರಣ ದುರ್ಗಮಂ ಶರಣ್ಬೊಕ್ಕಂ

ಎನಸುಂ ಭಿನ್ನಘಟಕ್ಕೆ ತೂಂತಿಡುವುವೇ ನದ್ಯಾದಿಗಳ್ ಭಿನ್ನಭಾ
ಜನ[10]ವಾ[10]ದಂದಱಿ[11]ಯೆಂ[11] ನಿಜಾಮೃತಮಯ ಶ್ರೀ ಧರ್ಮತೀರ್ಥಕ್ಕೆ ಬಂ
[12]ದಿನಿಸಂ[12] ಸದ್ಗುಣ ಭಾಜನಂ ಸುಲಭನುಂ ಪುಣ್ಯಾಂಬುವಂ ತನ್ನಕೊ
ಳ್ವನಿ[13]ತಂ[13] ಕೊಳ್ಳದೆ ಪೋದ ಕಾಲವೊಳವೇ ನಿರ್ಬಾಧ ಬೋಧಾಂಬುಧೀ ||೫೭||

1 ಳ್ಕಂ (ಜ) 2 ದುಂ (ಚಟ) 3 ಳ್ಕಂ (ಜ) 4 ದ (ಚಟಡಣ) 5 ಗ್ಧ (ಟಡ) ದ್ಧ (ಣ) 6 ಕಾಣ್ಬಂ (ಜ) 7 ಷ್ಠಾ (ಚಡ) ಷ್ಟಾ (ಟಣ) 8 ಧ್ವ (ಜ) 9 ತೊಱೆ ಬಂದು ತಾಯಿತೆಂ (ಜ) 10 ವೋ (ಚಟ) ದೊಂ (ಡ) ವೊಂ (ಣ) 11 ಯುಂ (ಚಟಣ) 12 ದಿನಿಸುಂ (ಚಟ) ದರಸಂ (ಜಡ) 13 ತುಂ (ಚಡ)

ವ|| ಎಂದು ದೇವಾದಿದೇವನಂ ಸ್ತುತಿಯಿಸಿ

ಆ ಜಿನನ ದಿವ್ಯಪಾದಪ
ಯೋಜಾಂತಿಕದಲ್ಲಿ ದೀಕ್ಷೆಗೊಂಡನಿಳೇಶಂ
ಬೀಜಂಗೊಳ್ವಂತಿರೆ ವಿ
ಭ್ರಾಜಿಸುವಾರ್ಹಂತ್ಯ ವಿಪುಳಫಳಮಂ ಪಡೆಯಲ್ ||೫೮||

ವ್ಯಾಲೋಲರಾಜ್ಯ ವಿಭವ ವಿ
ಶಾಲ ವಿಭೂಷಣ. ಕಳಾಪಮಂ ಕಳೆದೊಲವಿಂ
ದೋಲಾಡುತಿರ್ದನುಪಶಮ
ಲೀಲಾರಸದೊಳ್ ಸರಸ್ವತೀ ಶೃಂಗಾರಂ ||೫೯||

ವ|| ಆ ತಪೋಧನರ ತಪೋರಾಜ್ಯಯೋಗಕ್ಕೆ ಯೋಗಿಯಾಗಿ
ನಲಿದು ನವಿಲ್ [1]ಜಗ[1]ರ್ತುದು ಪಿಕಧ್ವನಿ ಪಣ್ತುದು ಮಿಂಚು ಕಣ್ಗಳೊಳ್
ಮೊಳೆತುದು ಶಕ್ರಚಾಪಲತೆ ಪೊಣ್ಮಿ ಪಸುರ್ತುದು ಮುಗ್ಧ ಚಾ[2]ತಕಂ[2]
ಗಳ [3]ಸಿತ[3]ಚಂಚುವುಳ್ಳಲರ್ದುದಂಬರಮೆಂಬ ತಮಾಳಮೀಗಳೀ
ಗಳೆ ಮುಗಿಲಂ ತಳರ್ತುದೆಲೆ ತೀಡಿದುದಕ್ಕುಮೆ ಪಶ್ಚಿಮಾನಿಳಂ ||೬೦||

ವ|| ಆ ಘನಾಗಮದೊಳ್

ಪಿಡಿಲ ಸರಿ ಮೊಬಗುಗಳ [4]ಮ[4]ಟಿತೆ
ಕುಡುಮಿಂಚಿನ ಸೋ[5]ನೆ[5]ಯಾಲಿಗಳ ಬೆ[6]ಳ್ಸ[6]ರಿಗಳ್
ಬಿಡದ [7]ರಜನಿ[7]ಗಳ ಮಟಿತಿಯೊಳ್
ಮಿಡುಕದೆ ಮರಮೊದಲೊಳಿರ್ದನಿರ್ಪವೊಲಚಳಂ ||೬೧||

ಶಾಳಿಯ ಕಂಪನೊಟ್ಟೆ ನಳಿನಂಗಳನಳ್ಕಿಸಿ ಬೆಳ್ಮುಗಿಲ್ಗಳಂ
ತೂಳಮನೆತ್ತುವಂ[8]ತ[8]ಳೆದು ಸೋಗೆಯ ಹೀಲಿಯ ಬೇರನೆತ್ತಿ ಹಂ
ಸಾಳಿಯ ತು[9]ಪ್ಪುಟಂ[9] ತುಟಿದು ಪಶ್ಚಿಮದಿಂ ಬಡವಾಗಿ ಬರ್ಪ [10]ಮೇ
ಘಾ[10]ಳಿಯನೊತ್ತಿ ತೀಡಿದುದು ಮೂಡಣ ಗಾಳಿ ಹಿಮಪ್ರ[[11]ವೇ[11]]ಶದೊಳ್ ||೬೨||

ವ|| ಆ ಹಿಮಾ[12]ಗಮ[12]ದೊಳ್

---

1 ಬಿಗು (ಜ) ಜಗು (ಡ) 2 ದಗಂ (ಜ) 3 ಚಳ (ಜ) 4 ಮೊ (ಚಟಡಣ) 5 ಲೆ (ಜ) 6 ಳ್ಸು (ಜ) 7 ಜನಿ (ಚಟಣ) ಜ್ಝುಗಿ (ಡ) 8 ತೆ (ಜ) 9 ಪ್ಪದಂ (ಡ) 10 ಮೆಯ್ಯಾ (ಜ) ಘೋಗಾ (ಚಟ) 11 ದೇ (ಚಜಟಡಣ) 12 ಗ (ಜ)

ರಂಗತ್ತರಂಗ ಸೀಕರ
ಮಂ ಗಾಳಿಗಳೊಟ್ಟೆ ಕರಗಿ ಸುರಿದಂತಿರೆ ಬೆ
ಳ್ದಿಂಗಳ[1]ಮೆಲ್ಪೆಕಿಲ್[1] ಬೆ
ಳ್ಗಂಗೆಡೆವಿರೆ ಯೋಗಿ ಬೆಳ್ಪವಾಸಮನಿರ್ದಂ ||೬೩||

ಪರಿ[2]ಮರಿ[2]ಯಾಡಿ ದಾವದುರಿಗಾಳಿಗ[3]ಳೊಳ್ಪಿಸಿಲೊಳ್ಕ[3]ನಲ್ವ ಕ
[4]ಲ್ಸ[4]ರಿಯುರಿಯುಯ್ಯಲಾಡಿ ಪುಡಿಯಾಟಮನಾಡಿ ಚರಾಚ[5]ರಂ[5]ಗಳಂ
ಕರಿಮುರಿಯಪ್ಪಿನಂ ಹುರಿವ ಹಂಚು[6]ವೊಲಿ[6]ರ್ದೆಳೆಯೊಳ್ ಕೃತಾಂತನೆ
ಚ್ಚುರಿ[7]ಗ[7]ಣೆಯಂತೆ ಬಂದುದು ಲಯಾ[8]ನಿ[8]ಳ ಕಲ್ಪನಿದಾಘಜಾನಿಳಂ (?) ||೬೪||

ವ|| ಆ ಸಮುಗ್ರೋಷ್ಮಗ್ರೀಷ್ಮಾಗಮದೊಳ್

ಕೆಳರ್ದುರಿವ ಬಿಸಿಲ ಕೇಸುರಿ
ಗ[9]ಳ[9] ಕಿಡಿಗಳುಮನುಗುಳ್ವ ಕಿಚ್ಚಿನ ಸರಿಯಂ
ತಳರ್ದು ತಳತಳಿಪ ತಪನೋ
ಪಳದೊಳ್ ಶಾಂತ್ಯಮೃತ ಜಳಧಿ ಕ[10]ಲ್ಲಿ[10]ಲೆ ನಿಂದಂ ||೬೫||

ವ|| ಅಂತು ತನ್ನ ತಪಂ ತ್ರಿಕಾಲಮಂ ಗೆಲೆ ತನ್ನ ಬೋಧಂ ತ್ರಿಭುವನಮನೊಳಗು ಮಾಡೆ ತನ್ನ ದರ್ಶನಂ ತ್ರಿದರ್ಶ[11]ನಮ[11]ನಧಃಕರಿಸೆ ಸುಪ್ರತಿಷ್ಠ[12]ಪ್ರ[12]ತಿಪನನುಕ್ರಮ ದಿನೇಕಾದಶಾಂ[13]ಗಧರ[13]ನಾಗಿ ಸಮ್ಯಕ್ತ್ವಾದಿ ಷೋಡಶ ಭಾವನೆಗಳಂ ಭಾವಿಸಿ ಸದ್ಗುಣಂಗಳಿಂ ತೀರ್ಥಕರ ಪುಣ್ಯಮಂ ಕಟ್ಟಿಕೊಂಡು ಒಡನಹಮಿಂದ್ರತ್ವಮಂ ಕುಡೆಂದು ಜಿನೇಂದ್ರಂಗೆ ಪಾಟಿಂಬಡುವಂತೆ[14]ತಿಂ[14]ಗಳ್ ಸನ್ಯಸನಮಿರ್ದೊಡಲನೀಡಾಡಿ ಯುತ್ತರ[15]ವೈಜಯಂತಿ ವಿ[15]ಮಾನದೊಳಹಮಿಂದ್ರನಾಗಿ ತ್ರಯ[16]ಸ್ತ್ರಿಂ[16]ಶತ್ಸಾಗರೋಪ ಮಾಯುಷ್ಯನುಮೇಕರ[17]ತ್ನಿ[17]ಪ್ರಮಾಣನುಂ ಶುಕ್ಲಲೇಶ್ಯಾ ಪರಿಣಾಮನುಂ ಸಾ[18]ರ್ಧ[18] ಷೋಡಶಮಾಸ ನಿಶ್ವಾಸನುಂ ತ್ರಯ[19]ಸ್ತ್ರಿಂ[19]ಶದ್ವರ್ಷಸಹಸ್ರಾಂತೋಪ ಭುಕ್ತಾಮೃತಾ ಹಾರನುಂ ನಿಃಪ್ರವೀಚಾರ ಸುಖನುಂ ಸಪ್ರವೀಚಾರಾಂತಗುಣನುಂ ಲೋಕ[20]ನಾಡಿ[20] ಕಾಭ್ಯಂತರ ಗತಾವಧಿಜ್ಞಾನನುಂ ಸ್ವಾವಧಿಕ್ಷೇತ್ರಬಳ ಪ್ರಕಾ[21]ಶ[21] ಶರೀರ ವಿ[22]ಕ್ರಿ[22] ಯಾದಿ ಗುಣಾಲಂಕೃತನುಮಾಗಿ ದಿವ್ಯಸುಖಮನಾಸ್ವಾದಿಸುತ್ತುಮಿರ್ದಂ

---

1 ವೊಲೆಯಲ್ಕಲು (ಚಟಡಣ) 2 ಮಾಙ್ರಿ (ಜ) 3 **ದೊಳ್ಪಿಸಿಲೊಳ್ಕ** (ಜ) ಳಲ್ಲಿಕ (ಟ) ಲೊಲ್ಲಳ್ಕ (ಡ) 4 ಬ್ಬ (ಚ) ಬ್ಬಬ (ಟ) 5 ಳಾ (ಚಟಡಣ) 6 ವಿವಿ (ಚಟಡಣ) 7 ಗೆ (ಜ) 8 ವಿ (ಜ) 9 ಳುಮಮಂ (ಜ) ಳ್ಪಂ (ಣ) 10 ಲ್ಲ (ಜ) 11 ನಂಗಳ (ಜ) 12 ಪ್ರ (ಜ) 13 ಗ (ಜ) 14 ಮೂಙು ತಿಂ (ಜ) 15 ಜಯಂತಿ ಮಿ (ಜ) 16 ತ್ರಿಂ (ಜ) 17 ಕ್ನ (ಜ) 18 ರ್ಧ್ರ (ಕ) ರ್ಧ್ವ (ಜ) 19 ತ್ರಿಂ (ಜ) 20 ನಾ (ಜ) 21 ರೆ (ಚಜಡ) 22 ಕ್ಯ (ಚಟಣ) ಕ್ರ (ಡ)

ನಱುಸುಯ್ಗುಂಪಿನಲಂಪಿಂ
ದಱುದಿಂಗಳ್ಗೊಮ್ಮೆ ಪೀರ್ದು ತಣಿದಿರ್ಪಳಿವೋಲ್
ಮಿಱುಗೆ ನಿಜನೀಲಭೂಷಣ
ಮಱುದಿಂಗಳ್ಗೊಮ್ಮೆ ಸುಯ್ವನೆಸೆವಹಮಿಂದ್ರಂ ||೬೬||

ಅಹಮಹಮಿಕೆಯೆಂತತಿಶಯ
ಸಹಜಾಳಂಕರಣಗಳಮಹಂ ಪೂರ್ವಿಕೆಯಿಂ
ಬಹು ಭೋಗಮುಹಂಕೃತಿಯಿಂ
ದಹಮಿಂದ್ರಂಗಪ್ಪ[1]ದ[1]ಪ್ರವೀಚಾರಸುಖಂ (?) ||೬೭||

ಮೇದಿನಿಯೊಳ್ ವಿನೂತ [2]ವನ[2]ವರ್ಣನಮಾಗೆ ವಸಂತವರ್ಣನಂ
ಸ್ವಾದಮೆನಿಕ್ಕುಮಲ್ತೆ ನೆಗಟ್ದೀ ಕೃತಿಯೊಳ್ ಕೃತಿನಾಧ ನೇಮಿನಾ
[3]ಥೋ[3]ದಯ ವಸ್ತುವರ್ಣನಮೆ ಮುಖ್ಯತೆವೆತ್ತೊಡಮಾದಿಯೊಳ್ ಪ್ರೊದ
ಬ್ದಾದರಣೀಯಮಾದುದೆನಗಾತನ ವಿ[4]ಶ್ರು[4]ತ ವಂಶವರ್ಣನಂ (?) ||೬೮||

ವ|| ಅದೆಂತೆಂದೊಡೆ ಪುಲ್ಲಶರನ ಶಸ್ತ್ರಶಾಲೆಯಂತಿರ್ಪ ಪುಷ್ಪವಾಟಿಗಳಿಂ ಮನೋಜರಾಜನ ರಾಣಿವಾಸದಂತಿರ್ಪೆಳಲತೆಯ ಬಳ್ಳಿಗಾವಣಂಗಳಿಂ ಅಂಗಜನ ರಾಜಗೃಹಂಗ[5]ಳಂ[5]ತಿರ್ಪ ನಾಗವಲ್ಲಿಗಳಿಂ ಶೃಂಗಾರ ಸೂ[6]ತಿ[6]ಯ ಶೃಂಗಾರಭವನದಂತಿರ್ಪ ಮಲ್ಲಿಕಾಭವನಂಗಳಿಂ ಲಕ್ಷ್ಮೀಸುತನ [7]ಸೂತಿಕಾಗಾರ[7]ದಂತಿರ್ಪ [8]ಕದಳಿಯ ಸುತ್ತಿನಿಂ ನನೆಗಣೆಯನ ಗರುಡಿಯಂತಿರ್ಪ ಪೂವಿನ ಪುಡಿಯ ಪುಟ[8]ಲ್ಗಳಿನಲರ್ಗೋಲನೋಲಗಸಾಲೆಯಂತಿರ್ಪ ಜಾ[8]ದಿಯ ಪಂದರಿಂ ಕಂತುವಿನ [9]ಕ್ರೀಡಕುಟ[9]ಯಂತಿರ್ಪ ಕ್ರೀಡಾರಸಂಗಳಿಂ ರತಿಯ ರತಿಗೃ[10]ಹಂಗಳಂ[10]ತಿರ್ಪ ಬಾಳ್ದೊಂಪಂಗಳಿಂ ರತಿಯ ನೃತ್ಯಮಂಡಪ[11]ಗಳಂ[11]ತಿರ್ಪ ನವಮಾಳಿಕಾ ಮಂಡಪಂಗಳಿಂ ಕಂತುಕಾಂತೆಯ ಕಳಕೂಜನದ ಗುಣಾಣಿಯಂತಿರ್ಪ ಸಾರಸ[12]ರಸಿತ[12]ಕಮಳಕುವಳಯ ಷಂಡಂಗಳಿಂ ಅನಂಗನ ವನಿತೆಯ ವಿನೋದದಳಿಯ ಗಿಳಿಯ ಕೋಗಿಲೆಯ ಕಾಪಿನಾಕೆಗಳಂತಿರ್ಪ ಚೂತಲತೆಗಳಿಂ ರತಿಪತಿಯ ಪಡಿಯಱತಿಯರಂತೆ [13]ತಳಿತ ತುಱುಗಲೊಳ್[13]ಮೆಯ್ಗರೆದು ಕರೆವ ಕೋಗಿಲೆಯ ದನಿಯಿಂ ಪು[14]ಗಿಲ್ಪುಗಿ[14]ಲೆಂಬ ಸಹಕಾರವಲ್ಲರಿಗಳಿಂ ಮನ್ಮಥನ ಮೆಯ್ಗಾಪಿನಾಕೆಗಳಂತೆ ಸುಕುಮಾರ ಶಾಖಾಭುಜಾಗ್ರ ಭೀಷಣ ಭುಜಂಗ[15]ಮ ಜಂಗಮ[15]ಲತೆಗಳಂ

---

1 ದೆ (ಜ) 2 ನದೆ (ಚಟಡ) ನದ (ಣ) 3 ವೋ (ಜ) 4 ಶೃ (ಚಜಟಡ) 5 ಳಿನಂ (ಗಚಟಡ) 6 ಕ್ತಿ (ಣ) 7 ಸುತಕಾರ (ಚಜಟಡ) 8 ಜಾ (ಜ) 9 ಖೇಡನಾಡಿ (ಚ) ಖೇಡಾಕುಳಿ (ಟಡಣ) 10 ಹದಂ (ಜ) 11 ದಂ (ಚಟಡಣ) 12 ಸರಸಿತ (ಚಟ) ರಸಿಕ (ಡಣ) 13 ತೆರಳಿ ತರುಗಳೊಳ್ (ಚಟಡ) ಕೆರಳಿ ತರುಗಳೊಳ್ (ಣ) 14 ಗಲ್ಪುಗ (ಜ) 15 ವಾ (ಜಡ)

ತಳೆದ ಚಂದನಲತೆಗಳಿಂ ದರ್ಪಕನ ದೀಪೋತ್ಸವದ ದೀಪಮಾಲೆಗಳಂತೆ ಪೂತು ಸೊಗಯಿಸುವ ಸಂಪಿಗೆಗಳಿಂ ಮನಸಿಜಂಗೆ ಮೀನಕೇತುವನೆತ್ತುವಂತೆ ನೀರ ಮೇಗೆ ನೆಗೆದ ನಿಡಿಯ ನಾಳದ ನಳಿ[1]ನದರಲೊಳ್[1] ಪೊಳೆದು ಪಾಱಿ ಬೀೞ್ವ ಬಾಳೆಮೀನಿಂ ತೊಳಪ ತಿಳಿಗೊಳಂಗಳಿಂ ನೀರ ಮೇಲೆ ಪರಿವ ರತಿವಲ್ಲಭನ ವಾಜಿಕುಳದಂತೆ ತೊಡಗಿ ಸುವ ಜಕ್ಕವಕ್ಕಿಗಳಿಂ ಚಿತ್ತಭವಚಕ್ರವರ್ತಿಯ ನಡುಪಟ್ಟ ಪಟ್ಟದಾನೆಯಂತೆ ಮಗ ಮಗಿಸುವ ಮದಮದದ [2]ಸೋ[2]ನೆಯಂ ಬಿಡುವ ಬಾಳರಸಾಳಂಗಳಿಂ ಕಾಮ ದೇವನ ದೀವದ ಪಿಂಡಿನಂತಿರ್ಪ ಕಳಹಂಸೆಗಳಿಂ ಸ್ಮರನ [3]ಸಿರಿ[3]ಗೆ ಸೀಗುರಿಯ [4]ನಿಕ್ಕು[4]ವಂತಿರ್ಪ ಸೋಗೆನವಿಲ್ಗಳಿಂ ಅವಳ್ಗೆ ಪೊನ್ನ ಬಟ್ಟಲೊಳ್ಕತ್ತುರಿಯುರುಳಿಯಂ ಪಿಡಿದಿರ್ಪಂತೆ ತುಂಬಿ ಪಾಯ್ವ ಕುಸುಮಂಗಳಿನೆಸೆವ ಕೊಸಗುಗಳಿನಾಕೆಗೆ ಕುಂಕುಮ ದುರುಳಿಯನವಟ್ಟೈಸುವ ಘಟ್ಟಿವಟ್ತಿಯರಂತೆ ಪಣ್ತ ನಾರಂಗವಲ್ಲಿಗಳಿನುದ್ಯಾನದೇಶ ಮನಾಳಲೆಂದು ಕಾಮನ ಕಯ್ಯೊಳ್ ತೊಳ್[5]ಗಿ[5]ದ ಪತ್ತಳೆಯಂ ಕೊಂಡು [6]ಜಾದಂ ತೊ[6]ಡೆ ದಂತೆ ತಳಿರ್ತ[7]ಸು[7]ಕೆಗಳಿಂ ಪಂಚಶರನ ಪಾ[8]ಯ್ದಾ[8]ಳನಂತೆ ಚಂಚರೀಕದ ಕುಂಚಮ ನೆತ್ತಿ ಕಿಂಜಲ್ಕದ ಕೆಂದೂಳಿಯೊಳ್ಪೊರೆದು ಮಕರಂದ ಬಿಂದುವೆಂಬ ಬೆಮರಂಪೋಱಿ [9]ಪರಿತರ್ಪ[9] ತಣ್ಣೆಲರಿಂ ಶಂಬರ ಹರನ [10]ಬಿರುದಂ ಪಾಡುವಂತೆ ಮೊರೆವ ಮಧುಕರ ವೃಂದಂಗಳಿಂ ಮಕರಧ್ವಜನ ಸಂಧಿವಿಗ್ರಹಿಗಳಂತಾತನಂಕಮಾಲೆಯನೋದುವರಗಿಳಿ ಗಳಿಂ ಕುಸುಮಶರ ಸಿರಿಕರಣದಂತಿರ*ಸ್ಥಿತಿಕರಣ ತರುಪತ್ರಂಗಳನನಿಳ*ಚಳಿತದೀರ್ಘ ದಳಾಂಗುಳಿ ಕಳಿತ[10] (?) ಕಂಗಳಿಂ ಬರೆವ ಕೇದಗೆಗಳಿಂ ವಸಂತಸಖನ ನಿಸೃಷ್ಟಾರ್ಥ ದೂತಿ [11]ಯಂತಿರ್ಪ ವಸಂತ ದೂತಿಯಿಂ ಮದನ ಮಹಾರಾಜನರಮನೆಯಂತಿರ್ಪರಮನೆ [11]ಯಿಂ ಮನಂಗೊಳಿಸಿ ಕಂದರ್ಪನಾದೇಶಂಗಳಂತಿರ್ಪ ದೇಶಂಗಳಿಂ ಭರಿತಮಾದ ಭರತಕ್ಷೇತ್ರದೊಳ್

ಉಂಟು ಕೃ[12]ತಾ[12]ರ್ಥಮೆಂಬ ವಿಷಯಂ [13]ವಿಷಯ ದ್ವಿಷ[13]ರಪ್ಪಿನಂತೆ ನಿ
ಷ್ಕಂಟಕಮಲ್ಲಿ ಶೌರ್ಯಪುರಮುಂಟು ಸುರೇಂದ್ರಪುರೋಪಮಂ ಪ್ರಭಾ
ಲುಂಟಿತ ಶೂರ ಸಾರ ಗುಣನಾಳ್ವನದಂ ಕಲಿ ಶೂರಸೇನನಾಂ
ತೆಂಟುಮಿಭಂಗಳಾಂತ ಧರೆಯಂ ದೃಢದಕ್ಷಿಣ ಬಾಹುದಂಡದಿಂ ||೬೯||

---

1 ನಾದರದೊಳ ಪೊಳೆ (ಡ) 2 ಸೊನೆ ಸೊ (ಚಟಡಣ) 3 ರಸಿ (ಣ) 4 ನೆಕ್ಕು (ಜ) 5 ಗಿಳ (ಕಗಟ) 6 ಜಾದಂ ಕು (ಚಟಣ) 7 ಪೋ (ಚಟಡಣ) 8 ಯಾ (ಜ) ಯ್ದು (ಡ) 9 ಪಿರಿದಪ್ಪ(ಜ) 10 ಗುಳಿಗಳಿಕ ಳಂಟ(ಚಟಡಣ) 11 ಯಂತಿರ್ಪಾರಮ (ಜ) 12 ಷಾ (ಜ) 13 ವಿಷಯು (ಚಟಣ) ವಿಷವಿಷಯ (ಡ) *ಸಂತಿ ಕರಣ ತರುಪತ್ರಂಗಳ ನಿಳ (ಚಟಡಣ)

ಸುರನಿಭ ಶೂರಸೇನನ ಸುತಂ ಸ್ಮರಸನ್ನಿಭ ಶೂರವೀರನಾ
ನರಪತಿಯಂ ಪತಿಂವರೆಗೆ ಧಾರಿಣಿಗಂಧಕವೃಷ್ಣಿಯೆಂಬನುಂ
ನರಪತಿವೃಷ್ಣಿಯೆಂಬನು[1]ಮುದಾತ್ತ[1]ರಸಾಢ್ಯ ಫಲಪ್ರದ[2]ತ್ವ[2]ಮುಂ
ಧರ ಸಹಸತ್ವಮುಂ ನೆಗಟ್ದ ಧಾರಿಣಿಗಾದವೊಲಾ ಧರಾತ್ಮಜರ್ ||೭೦||

ಆ ವಿಜಿಗೀಷುವಿಂಗೆ ವಧುವಂಧಕವೃಷ್ಣಿಗೆ ವಿಷ್ಣುವಿಂಗೆ ಲ
ಕ್ಷ್ಮೀವಧುವೋಲ್ ಸುಭದ್ರೆ [3]ಶುಭ[3]ಲಕ್ಷಣೆಯಾದಳುಮಾವರಂಗುಮಾ
ದೇವಿವೊಲಾ ನರಾಧಿಪತಿ ವೃಷ್ಣಿಗೆ ಪದ್ಮದಳಾಯತಾಕ್ಷಿ ಪ
ದ್ಮಾವತಿಯಾದಳಂತು ನೆಗಟ್ದಂಧಕವೃಷ್ಣಿಗಮಾ ಸುಭದ್ರೆಗಂ ||೭೧||

ನಾಭಿನಿಭಂ ಸಮುದ್ರವಿಜಯಂ ಮೊದಲಾಗೆ ಪದಿಂಬರಾಧರಾ
ಕ್ಷೋಭನುಮು[4]ತ್ಕನುಂ[4] ಸ್ತಿಮಿತ ಸಾಗರನುಂ ಹಿಮವಂತನುಂ ಧೃತೋ
ರ್ವೀಭರ[5]ರಾ[5]ಗಿ ಸಂದ ವಿಜಯಾಚಳಧಾರಣ ಪೂರಣರ್ಕಳುಂ
ಶ್ರೀಭವನಾಭಿ ನಂದನನುಮಾ ವಸುದೇವನುಮೆಂಬ ನಂದನರ್ ||೭೨||

ಕ್ರಮಮುಂ ವಿಕ್ರಮಮರ್ಥಮುಂ ವಿತರಣಂ ವಾಗ್ಮಿತ್ವಮುಂ ನನ್ನಿ ತೇ
ಜಮು[6]ವೈ[6]ಶ್ಯಂ ಪ್ರತಿಭಾಸಮುಂ ಸಕಲ ಶಾಸ್ತ್ರಾಭ್ಯಾಸಮಾ[7]ದಾ[7]ಭಿಜಾ
ತ್ಯಮುಮಾಚಾರಮಪಾರ ಸೌಂದರತೆಯುಂ ಸೌಭಾಗ್ಯಮೊಲ್ದಿರ್ದ್ದುದೆ ಮೆ
ಚ್ಚಿ ಮರುಳ್ಗೊಂಡವೊ[8]ಲಿರ್ಪು[8]ವೊಪ್ಪಿ ಶಿವದೇವೀಕಾಂತನೊಳ್ಸಂತತಂ ||೭೩||

ಅದ್ರಿಗಳಿರ್ಕಚೇತನೆಯೊಳೆಂದು ಧರಾಧರ ಕೂರ್ಮ ಕೇಪದಿ
ಗ್ಭದ್ರಗಜಂಗಳೈದೆ ದಶಭೂಭುಜರಾದರೆನಿಪ್ಪ ತತ್ಪ್ರತಾ
ಪದ್ರವಿಣರ್ಗೆ ನೇ[9]ಗಿ[9]ಜ[10]ಯ[10]ರಾ[10]ಗಿ ನೆಗಟ್ತಿಗೆ ನೋಂತ ಕೊಂತಿಯುಂ
ಮಾದ್ರಿಯುಮದ್ರಿರಾಜ ಸುತೆಗಂ ಸತಿಗಂ ಸರಿವಂದರೇಟಿಗೆಯೊಳ್ ||೭೪||

ದ್ಯುಮಣಿಪ್ರದ್ಯೋತದಿಂ ಪದ್ಮಿನಿಗೆ ನಗೆಯುಮಾನಂದಮುಂ ಲೀಲೆಯುಂ ಶ್ರೀ
ಯುಮನೂನಂ ಪುಟ್ಟುವಂತಾ ವರನರಪತಿ ವೃಷ್ಣೀಶ[11]ನಿಂ[11]ದುಗ್ರಸೇನೋ
ತ್ತಮನುಂ ಶ್ರೀದೇವಸೇನಾಖ್ಯನುಮೆಸೆವ ಮಹಾಸೇನ ಭೂಪಾಲನುಂ [12]ತ್ರ[12]
ತ್ಕ್ರಮದಿಂ ಗಾಂಧಾರಿಯುಂ ಪುಟ್ಟಿದರೆಸೆದಿರೆ ಪದ್ಮಾವತೀದೇವಿಗೊಳ್ಪಿಂ ||೭೫||

---

1 ಮುದಾಂತ (ಚಡ) ಮುದಾತ್ಮ (ಜ) ಮುದಾಂತ (ಟ) 2 ತ್ವ (ಚಟಡಣ) 3 ಗೆಪು (ಚಟಡ) 4 ತ್ಕಮ (ಜ) 5 ನಾ (ಚಟಡಣ) 6 ವೈ (ಚಟಡ) ನೈ (ಜ) 7 ದ್ದಾ (ಜ) 8 ಲಪ್ಪಿ (ಚಣ) 9 ಜಾ (ಚಟಡ) 10 ನಾ (ಚಟಡಣ) 11 ಗಿಂ (ಚಟಣ) ನೆಂ (ಡ) 12 ಸ (ಚಟಡಣ)

ವಸುದೇವಂ ಪೊಱಗಾಗೆ ಮಿಕ್ಕಿನರಮಕ್ಕಳ್ಗೊಪ್ಪಿದರ್ಕಾಮಕೇ
ಳಿ ಸುಖಾಸಕ್ತೆಯರಾಗಿ ಚಂದ್ರಕಳೆಯುಂ ಮಾ[1]ರಾಥ[1]ನುರ್ಲೇಖೆಯುಂ (?)
ಕುಸುಮಾಸ್ತ್ರಾವಳಿಯುಂ ಮನೋಜನ ವಸಂತ ಶ್ರೀಯುಮೋರಂದದಿಂ
ಮಿಸುಗಲ್ಮೀನ ಪತಾಕೆಯುಂ ಮದವತೀ ರೂಪಕ್ಕೆ ಪಕ್ಕಾದವೋಲ್ ||೭೬||

||ಪೃಥ್ವಿ|| ಸುಯುಕ್ತೆ ಶಿವದೇವಿಯುಂ [2]ನ[2]ವಧೃತೀಶ್ವರಾದೇವಿಯುಂ
ಸ್ವಯಂಪ್ರಭೆಯುಮು[3]ದ್ಭ[3]ವಾನ್ವಿತೆ ಸುನೀತೆಯುಂ [ಸೀತೆಯುಂ]
ಪ್ರಿಯಂವದೆಯುಮಾ ಪ್ರಭಾಪತಿಯುಮಂತೆ ಕಾಳಿಂದಿಯುಂ
ಕ್ರಿಯಾನಿಧಿಗಳಂತೆ ಸುಪ್ರಭೆಯುಮೆಂಬರಬ್ಜಾಕ್ಷಿಯರ್ ||೭೭||

ವ|| ಅಂತು ಶೂರಸೇನನನೆಡೆಗೊಂಡು ತನ್ನಿಂದಮೇ ಮೊಳೆವೋಗಿ ವೃಷ್ಣಿಯುಗಳದಿನೀರೆಲೆವೋಗಿ ಸಮುದ್ರ ವಿಜಯೋಗ್ರಸೇನಾದಿಗಳಿಂ ಮಡಲ್ತು ಹರಿವಂಶವಲ್ಲಳಿಗೆ ಮೊತ್ತಮೊದಲಾದ ತನ್ನ ಮಹಿಮೆ ಮಹೀತಳಮಹನೀಯಮಾಗೆ ಶೂರ ವೀರ ಮಹಾರಾಜಂ ರಾಜ್ಯಲತೆಗಡರ್ಪಾ[4]ಗಿರೆ[4] ಮತ್ತಮತ್ತಲ್

ಕುರುವಂಶ ಪ್ರಭುಶಕ್ತಿ[5]ಗಂ[5]ಸವಕೆ[6]ಗಂತಾ[6] ಪುಟ್ಟಿದಂ ಹಸ್ತಿನಾ
ಪುರದೊಳ್ ಸಂದ ಪರಾಶರಂ [7]ಸ[7]ರ ಶಿರಂ ಶೂಲಪ್ರತಾಪಂ ಪರಾ
ಶರನಿಂ ಸತ್ಯಪ[8]ರಾಖ್ಯೆ[8] ಸತ್ಯವತಿ[9]ಗಾ[9]ದಂ ಮತ್ಸ್ಯರಾಜಾನ್ವಯಾಂ
ಬುರುಹಶ್ರೀಗೆ ಸುತಂ ಜಿತವ್ಯಸನನಾ ವ್ಯಾಸಂ ಯಶೋವಲ್ಲಭಂ (?) ||೭೮||

ಸುತರಾದರಾ ಪರಾಶರ
ಸುತಂಗಮಾ ಸತಿ ಸುಭದ್ರೆಗಂ ಭದ್ರಮ[10]ನಂ[10]
ಧೃತರಾಷ್ಟ್ರಂ ಧೃತರಾಷ್ಟ್ರಂ
ವಿತತಯಶಃ ಪಾಂಡು ಪಾಂಡು ವಿದುರಂ ವಿದುರಂ ||೭೯||

ಅಂತು ಪೊಗೞ್ತೆವೆತ್ತವರೊಳಗ್ಗದ ಪಾಂಡುವಿನಂತರಂಗಮಂ
ಕೊಂತಿಯ ರೂಪು ವರ್ಣಸದ ಮಾತು ಜಗದ್ಗದಿತಂ ಬಟಿಕ್ಕಮಾ
ಕಂತುವ ಪುಷ್ಪಬಾಣನಿಕರಂ ಸುಖಲಬ್ಧಪಥಂ ಬಟಿಕ್ಕಮಾ
ಕಾಂತೆಯ ರೂಪಕಂ ಪೊಳೆದು ಪೊಕ್ಕುದು ಕೆಂಡದ ಬೊಂಬೆಯೆಂಬಿನಂ ||೮೦||

---

1 ರೋದ್ಧ (ಣ) 2 ನು (ಜಡ) 3 ಶ್ವ (ಜ) 4 ಗೆ (ಣ) 5 ಸಂ (ಣ) 6 ತಾಂ (ಚಟಡಣ) 7 ಪ (ಜ) 8 ತಾಕೆ (ಜ) 9 ಗೋ (ಜ) 10 ನ (ಚಜಟಡ)

ಕೆಂಡದ ನೀಳ್ದ ಕೇಸುರಿಯ ಬಣ್ಣದಶೋಕೆಯ ಪುಷ್ಪಪಲ್ಲವಂ
ಪಾಂಡುವಿನಂಗಮಂ ಸುಡುಗೆ ಪಾಸಿದ ಮಲ್ಲಿಗೆಯುಂ ಮೃಣಾಳಮುಂ
ಕೊಂಡುವು ಕಿಚ್ಚಿನಿಂದಣಕವಲ್ಲದೆ ಮೂಡಿದುದೆರ್ದೆ ಬೂದಿವೋಲ್
ಪಾಂಡುಗೆ ಕಾಮಪಾಂಡುರತೆ ಸಾ[1]ರ್ಥ[1]ಕ ನಾಮಮನುಂಟುಮಾಡ್ಪವೋಲ್ ||೮೧||

ಸುಡದೆ ಕನಲ್ವ ಕಿಚ್ಚಿನೊಡನಾಡಿದ ಕೆಂಬೆಲರಾತಪಂಗಳಂ
ಕುಡಿವ ಸರೋರುಹಂ ಸುಡವೆ ನುಂಗುವ ಪಾವಿನ ಪಲ್ಲ ನಂಜು ನಿ
ಚ್ಚಡೆ[2]ದ[2]ಮೃತಾಂಶು ಮಂಡಳಮದೇಂ ಸುಡದೇ ಹಿಮವುಂಡು ಬಾಳ್ವ ತ
ಣ್ಮಡುವಿನ ಪೂವೆ ಸುಟ್ಟಪುದು ಮಾಯ್ದ ವಿಯೋಗಿಯೊಳೆಂತು ಬರ್ದಪರ್ ||೮೨||

ಪರಿಕಿಸೆ ಪಾಂಚ[3]ಭೌ[3]ತಿಕಮಿದೆಂಬುದಸಂಗತಮೇಕ [4]ಭೌತಿ[4]ಕಂ
ವಿರಹಿ ಜನಾಳಿಗೀ ಭುವನಮೆಂತೆನೆ ಸೂಸುವ ಶೀತಳಂ [5]ಜ[5]ಳಂ
ಸುರಭಿ ಸಮೀರಣಂ ಸ್ಮಿತವನೋಲ್ಲಸಿತಂ ವಸುಧಾತಳಂ ಸುಧಾ
ಕರ ಕರಪಾತ ಪಾಂಡುನಭಮಾದುದು ಪಾಂಡುಗೆ ಪಾವಕೋಪಮಂ ||೮೩||

ಶರಶಲ್ಯಮಿನಿತು ಸಿಲ್ಕಿಯು
[6]ಮ[6]ರಿದಸುವಂ ಪಿಡಿಯಲೆರ್ದೆಯಿನಲ್ಲದೆ ನಡೆ ವಿ
ಸ್ಮರಶರತತಿ ಕಿಟಿಲರಿಯವು
ವಿರಹಿಯ [7]ನೋ[7]ವಿಂಗೆ ಸಾಯಲಿಲ್ಲದಱಿಂದಂ ||೮೪||

ವ|| ಅಂತು ಕಂತುರಾಜನ ಕೊಂತದಂತೆ ಕೊಂತಿಯ ರೂಪುಮೆರ್ದೆಯಂ [8]ನಡೆ ನಾ[8]ಡೆಯುಂ ನೊಂದು ಮದನವಾಹದಿಂ ದೇಹಂ ಕೊರ[9]ಗೆ[9] ಮಲ್ಕಲ ಮಱುಗಿ ಮನಮಂ [10]ನಿಲೆ[10]ಪಿಡಿಯಲಾಱದೆ ಪಾಂಡುರಾಜಂ ಪುಂಡರೀಕದಂತೆ ವನಮೆ ಭವನಮಾಗಿರ್ಪುದುಮೊಂದು ದಿವಸಮಾ ವಸಂತವಾಸವೆಂಬ [11]ಭವ[11]ನದ ಮನೋಹರ[12]ತೆ[12] ಮನಮೆಳದುವರಿಯೆ ಮನೋಹರಿಯೆಂಬ ಮನಃಪ್ರಿಯೆವೆರಸು ವಜ್ರಮಾಳಿಯೆಂಬ ವಿದ್ಯಾಧರಂ ಬಂದೊಂದು ಬಂಧುರಮಪ್ಪ ಮಾಧವೀಮಂಡಪದೊಳ್ ಮನೋಭವ ಸುಖಮುನನುಭವಿಸಿ ತನ್ನ ಬೆರಲುಂಗುರದ ಕೆಂಬರ[13]ಲುಗೆ ಕಣ್ಬೊತ್ತು[13] ದಾಡಿಂಬದ ಬಿ[14]ತ್ತು[14]ಗೆತ್ತು ಸೋವುವ ಶುಕಶಿಶುಗೆ [15]ಮಣಿ[15]ಮುದ್ರಿಕೆಯಂ ಕಳೆದು ನೀಡಿ ನೀಡಿ

I ರ್ದ್ಧ (ಜ) 2 ರ್ದ (ಜ) 3 ಭೂ (ಚಟಡಣ) 4 ಬೋಧಿ (ಚಟಡ) ಭೂತಿ (ಜ) 5 ಗ (ಜ) 6 ಮು (ಜ) 7 ನೊಲ (ಡ) 8 ನಾ (ಚಟಡಣ) 9 ಗಿ (ಜ) 10 ನಿಡಲ (ಚಟಡಣ) 11 ಮ (ಜ) 12 ಕೆ (ಜ) I3 ಲ್ಗೆ ಕಣ್ಬೊತು (ಚಜ) ಲುಗೆ ಕಾಣ್ಬೊತು (ಡ) I4 ತ್ತೈ (ಜ) I5 ಮಣಿಮಯ (ಜ)

ಮೆಲವಾಡಿ ಮಱಕಿದೀಡಾಡಿ ಪೋಪುದುಮಾ [1]ಪದ[1]ದೊಳ್ ಪಾಂಡುರಾಜಂ ಬಂದು ಮನೋ[2]ಜ[2]ಬಾಣಭಿನ್ನಮಪ್ಪ ಬಿರಯಿಯೆರ್ದೆಯಿನುದಿರ್ದ ವಿರಹಾಗ್ನಿಯಂತಿರ್ದುಂಗುರಮಂ ಕಂಡು ನೀಡುಂ ಭಾವಿಸಿ ನೋಡುತ್ತುಮಿರೆ

ಆ ವಜ್ರಮಾಳಿ [3]ಮಣಿ[3]ಮು
ದ್ರಾವಿಚಯನಚಳಿತ ನಯನನಾಕಾರ ಕಳಾ
ಕೋವಿದನಾತನ ಭಾ[4]ಗ್ಯದ
ದೇವತೆ[4] ಬರ್ಪಂತೆ ಬಂದನತಿ ಸಂಭ್ರಮದಿಂ ||೮೫||

ವ|| ಬರೆ ಕಂಡರಸಂ ದರ್ಶನೇಂಗಿತ[5]ದಿನೀತ[5]ನುಂಗುರಮೆಂದಱಿದು ಕುಡುವುದುಮಾ ವಿವೇಕಕ್ಕೆ ಮೆಚ್ಚಿ ವಿಯಚ್ಚರನಿದು ಕಾಮರೂಪ ಸಾಧನಮೆಂಬುದು ನೀನುಂ ದುರ್ಲಭದಯಿತಾನುರಾಗರಾಶಿಯಾದ [6]ಱಿದಿಂ ತೋಱಿದಪ್ಪೆ[6]ಯಿ[6]ಮದೀಯಮುದ್ರಿಕೆ ನಿನ್ನ ಕಯ್ಯೊಳೊಂದೆರಡು ದಿವಸಮಿರ್ದು ಸುರತಸಾರಥಿಯಕ್ಕೆಂದು ಕೊಟ್ಟು ಪೋದನಿತ್ತ ಪಾಂಡುರಾಜ[7]ನುಮಾ[7] ಪೊಟ್ಟೆ ಪೊಟ್ಟಾಗಿ ಕೊಂತಿಯಲ್ಲಿಗೆ ಕೂಟಂಬಡೆವಾಣತಿಗೆಂದು ಮದನಮುದ್ರಿಕೆಯಂ ಕೊಂಡು ಪೋಪಂತೆ ಮಣಿಮುದ್ರಿಕೆಯನಿಟ್ಟದೃಶ್ಯರೂಪನಾಗಿ ಹಸ್ತಿನಾಪುರ[8]ಕ್ಕೆ[8] ಪೋಗಿ ಕನ್ಯಾವ್ರತಭಂಗಭೀತಿ[9]ಯಿಂಗಂ[9]ಡುನೊಣಮಡ್ಡಂ ಪಾಱದಂತಾಗಿ ಸುತ್ತಲುಂ ಕಟ್ಟಿದ ಕಟ್ಟಾನೆಗಳಿಂ ಪ್ರತ್ಯಂತ ಪರ್ವತಂಗಳ ಬಳಸಿನಿಂ ಬಗೆಗೊಳಿಸುವ ಕನಕನಗದಂತಿರಭ್ರಂಕ[10]ಷ[10]ಮಾದ ಕೆಂಬೊನ್ನ ಕನ್ನೆಮಾಡದೇಲನೆಯ ನೆಲೆಯೊಳ್ ಸಮಾನವಯೋ ವಿಳಾಸವಿಭ್ರಮ ವಿಭವೆಯರಪ್ಪ ವಿಳಾಸಿನಿಯರ್ವೆರಸು ಕೆಮ್ಮುಗಿಲ ಪೊರೆಯೊಳ್ ಪೊಳೆವೆಳಮಿಂಚಿನ ಗೊಂಚಲಂತೆ ತಳತ್ತಳಿಸಿ ಕೇಳೀ ಕಲಹದಿಂ ಮುಳಿದ ಕಾಮನ ಕಾಲ್ವಿಡಿವ ರತಿಯಂತೆ ಕಾಮದೇವನಂ ಪೂಜಿಸಿ ಪೊಡೆವಡುತ್ತುಮಿರ್ದ ಕೊಂತಿಯಂ ಕಂಡು ಕೂಡಲ್ ಬಯಸಿ ತನ್ನೊಳಿಂತೆಂದಂ

ಗರಗರನಾಗಿ ಭೋಗಿಪೊಡೆ ಮೇಳಿಸಿ ಮುಗ್ಧೆಯನಾಗುಮಾಟ್ಟಿದೋ
ಗರದಧರಾಮೃತಂ ತುಳುಕಲಾಗದು ಬೀಸರವಾಗದಪ್ಪು ಕ
ಣ್ಬರಿಯಣಮಾಗ[11]ದಣ್ಣ[11]ಳಿಯ[12]ದೀ[12] ಪ[13]ರೆ[13]ಯಾಗದಲಂಪು ಮಾಸಲಂ
ತಿರೆ ಮನಮಿರ್ಪುದೇಱ[14]ಸಿದ[14] ಲಜ್ಜೆಯ ಲಚ್ಚಣವಂಗಜಾಜ್ಞೆಯಾ ||೮೬||

---

1 ಪುರ (ಚಟಡಙ) 2 ಜಮುಕ್ತ (ಜ) 3 ಯುಂ (ಚಟಡಙ) 4 ಗದ ದೇವಂ (ಚಟಡಙ) 5 ದಿಂದೀತ (ಚಡಙ) ದಿತ್ತ (ಟ) 6 ನೀ (ಜ) ಯಾ (ಙ) 7 ನಾ (ಜ) 8 ದಿಂ (ಜ) 9 ಯಂ ಗಂ (ಚ) ಯ ಕಂ (ಙ) 10 ಷ (ಚಟಡ) 11 ಪಣ್ಣ (ಟಙ) ದಂಗೊ (ಡ) 12 ದಿಂ (ಜ) 13 ಗೆ (ಚಟಡಙ) 14 ಸದು (ಚಟಡಙ)

ಸೈರಣೆಗುಂದದತ್ತ ಮೊಗಮಾದೊಡೆ ಬೆಚ್ಚಿ ಮನಕ್ಕೆ ಬೇಸಱಿಂ
ತಾರದೆ ಮಿಾಱಿ ಮೈದೆಗೆಯೆ ಮಾಣದೆ ಪೋದೊಡೆ ಪೋಗದಿಚ್ಛೆಯಿಂ
ಗೋರಿಗೆ ತಂದು ಮುಗ್ಧೆಯ ಮನೋಮೃಗಮಂ ನವಸಾಂಪ್ರಯೋಗ ಶೃಂ
ಗಾರಮನಾಳ್ದವಂ ಮದನರಾಜನ ರಾಜ್ಯಮನಾಳ್ದನಲ್ಲನೇ ||೮೭||

ವ|| ಅಂತುಮಲ್ಲದೆ

ವೆಣ್ಣೆ ಱಗ[1]ದೆ[1] ಕೂರ್ತೆಱಗಿದ
ಕಣ್ಣಱಿದುರದಂತೆ ಬಿಡುಗೊಡಂಬಡುಗೆ ನೋಣಂ
ಪುಣ್ಣಂ ಸಾರ್ವವೊಲೊಲ್ಲ[2]ದ[2]
ವೆಣ್ಣಂ ಸಾರ್ದಹಹ ! ಸಾಸಿಕೊಳ್ವದ ಕೇಳಂ (?) ||೮೮||

ವ|| ಎಂದು ನಿಜಸ್ವರೂಪಮನಾ ತರು[3]ಣಿಗೆ[3] ತೋಱಲೆಂದು ಬಗೆದು

ಉಂಗುರಮಂ ಕಳೆಯಲೊಡಂ
ಪಿಂಗಿದುದು ಶರೀರಮಾಯೆ ಕೊಂತಿಯ ಪೂಜಾ
ಸಂಗಕ್ಕೆ ಮೆಚ್ಚಿ ಮೆ[4]ಚ್ಚಿ[4]ದ
ನಂಗಂ ಪ್ರತ್ಯಕ್ಷಮಾದವೋಲ್ ನೃಪನೆಸೆದಂ ||೮೯||

ವ|| ಆಗಳ್

ಗೊಂಚ[5]ಲ್ಲಿ[5]ರೆ ಚಲ್ಲುವ ನಯ
ನಾಂಚಳಮಂ ನಾಣ್ಚಿ ತೆಗೆವ ಕರಿಯಸಿಯಳ್ ಚೆ
ಲ್ವಂ ಚಲ್ಲಿದಳಿನನಿದಿರೊಳ್
ಮಿಂಚುವ ನವಮೇಘಮಾಲೆವೊಲ್ಕಾರಿ[6]ರುಳೊ[6]ಳ್ ||೯೦||

ಚಕಿತಪ್ರಕ್ಷಿಪ್ತ ಪ[7]ಕ್ಷ್ಮಾಂ[7]ತರದೊಳೆಳವೆಯಂ ಮಿಾಱಿದಂತಿ[8]ರ್ಪ[8] ದೀರ್ಘಾಂ
ಬಕ ಶಸ್ತ್ರಾಲೇಖೆಯಂ ತತ್ಶ್ರವಣಕುವಳಯ ಶ್ರೇಣಿ[9]ಶಾ[9]ಖಾಗ್ರದೊಳ್ ದ
ರ್ಪಕದೇವಂ ದರ್ಪದಿಂ ಮಿಂಚಡರೆ ಮಸೆವವೋಲ್ ಚೆಲ್ವನಾ[10]ಯ್ತಾಕೆ[10]ಯತ್ಯು
[11]ತ್ಸು[11]ಕಯಾತಾಯಾತ ವಕ್ರೋತ್ತರಳ ತರುಣಿಮಾನೀತ ನೇತ್ರ ತ್ರಿಭಾಗಂ ||೯೧||

---

1 ದ (ಜ) 2 ದೆ (ಚಜಟಡ) 3 ಣಿ (ಚಟಡ) 4 ಚ್ಚ (ಚಟಡಣ) 5 ಲ್ತಿ (ಜ) 6 ದಿರೊ (ಜಡ) 7 ಕ್ಷಾಂ (ಜಡ) 8 ರ್ದ (ಜ) 9 ಶೋ (ಜ) 10 ಯ್ತುಕ್ಕೆ (ಚಟ) 11 ತ್ಯು (ಚ) ಕ್ಕ (ಟಡ)

ಮದನಂ ಮಧುವಯ ವರುಣಾ
ಸ್ಪದಿನೆಚ್ಚನೊ ಮದನಮೋಹರಸಮಂಗಜತಾ
ಪದಿನುಕ್ಕಿದತ್ತೊ ಪೇಟಿನೆ
ಸುದತಿ ಬೆಮರ್ತಳ್ ಕುಮಾರನಂ ಕಾಣಲೊಡಂ ||೯೨||

ವ|| ಅಂತು ಚಂದ್ರೋದಯದೊಳ್ ಬಿಂದುವಿಡುವ ಶಶಿಮಣಿಶಲಾಕೆಯಂತಿ ರ್ದಾಕೆಯಂ ಕಂಡು ಮನಂಗೊಂಡು

ಅಳಿ ಮುಗುಳಂ ತು[1]ಡುಂಕಿ ಮದಸೌರ[1]ಭಮಂ ಸವಿವಂತೆ ಗಂಡುಗೋ
ಗಿಲೆ ಪಡೆವಂತೆವೋಲ್ ಕಳಿಕೆಯೊಳ್ ರಸಮಂ ದಿವಸೇಂದ್ರನಬ್ಜಕು
ಟ್ಮಲಮನಲರ್ಚುವಂತೆ ಮಧುಮುಗ್ಧವನಾಂಗನೆಯೊಳ್ ವಿಕಾಸಮು
ಗ್ಗಳಿಸಿರೆ ಕೂಡುವಂತೆ ಗಡ ಕೂಡಿದನಾಗ[2]ಳ್[3] ಪಾಂಡು ಕೊಂತಿಯೊಳ್ ||೯೩||

ವ|| ಕೂಡಿ ಸು[3]ಖ[3]ಸ್ವಪ್ನದಂತದೃಶ್ಯಮಾಗಿ ಪ್ೋ[4]ಗೆ[4] ಕೆಲವಾನುಂ ದಿವಸದಿಂ

ಎಳವಸುಱಾಗೆ ಬಾಳಕಿಗೆ ಬೆಳ್ಪಡರ್ದಂಗಮೊಳಣ್ಪನಿಕ್ಕಿದರ್
ಮಳಯಜಪಂಕದಿಂ ಕಮಳಕುಟ್ಮಳದೊಳ್ ಮಱಿದುಂಬಿ ಪಾಯ್ದವೊಲ್
ತೊಳಪ ಕುಚಂಗಳೊ[5]ಳ್ಪ್ತುದಿಯ[5] ಕತ್ತುರಿಯಂ ತೊಡೆದರ್ವಿದಗ್ಧೆಯರ್
ಕೆಳದಿಯರೊನ್ಮೆಯುಂ ಮಱಿಸಲೆಂದು ಕುಮಾರಿಯ ಗರ್ಭಚಿಹ್ನಮಂ ||೯೪||

ಪಡೆಯೆ ಮಗನಂ ನಿದಾನಮ
ನಿಡುವಂತೆವೊಲಿಟ್ಟು ಪೊನ್ನ ಮಂದಸಿನೊಳಗಾ
ಗಡೆ ಗಡ ಬಿಟ್ಟರ್ಜಗುನೆಯ
ಮಡುವಿನೊಳೀ ಕೆಳದಿಯರ್ಗೆ ಕೊಂತಿಯೆ ನೋಂತಳ್ ||೯೫||

ವ|| ಅದನಾದಿತ್ಯನೆಂಬರಸನಾದಿತ್ಯನುದಯನಗಮನೇಱಿ ನಳಿನವನಮನಲ ರಿಸುವಂತಿ[6]ರು[6]ತ್ತುಂಗ ಪ್ರಾಸಾದಮನೇಱಿ ಸೌಂದರರಾಜಪುರದ ಸೌಂದರಿಯರ ನಳಿನವನಮನಲರಿಸುತ್ತುಂ ಯಮುನಾ ಮನೋಹರತೆಯಂ ನಿರೀಕ್ಷಿಸುತ್ತುಮಿರ್ದು ಪರಿವ ಕರಿಯ ನಿಱಿಮುಗಿಲ ಮೇಗೆ ಪರಿವ ರವಿಮಂಡಲದಂತೆ ತೆರೆಮಸಗಿ ಪರಿವ

1 ಳುಂಕಿ ನವಸಾರ (ಚಟಡಣ) 2 ಡೆ (ಜ) 3 ಫಲ (ಚಟಡಣ) 4 ಗಿ (ಚಟಡಣ) 5 ಳ್ಪುದಿಯ ಪೀರಿದ (ಜ) ಳ್ಪುದಿಯೆ ಪೀರಿದ (ಟಡಣ) 6 ದು (ಜ)

ಜಗುನೆಯ ಪೊನಲೊಳಿ ಪೊ಼ೞ[1]ಪ[1] ಪೊನ್ನಮಂದಸಂ ಕಂಡು ತರಿಸಿ ಕಮಳಕುಟ್ಮಳ ದಳಪುಟಮಂ ತೆಱಿವಂತೆ ತಾನೇ ತೆಱೆದು ನಲಿದು ನೋಡಿ ಕೆಲದೊಳ್ಕಪ್ಪೆಗೊಂಡ ಮಾಣಿಕಂಗಳ ಬೆಳಗಿನೊಡನೆ ಬಾಳಕನ ಮೆಯ್ವೆಳಗು ದಳವೇ[2]ಱೆ[3] ಮಿಳ್ಳಿಸಿ[3]ದೊಡ[3] ಳ್ಳಿ[4]ಱಿ[4]ದಾಡುತ್ತುಂ[4]

ಕನಕಸರಸೀರುಹದೊಳೆ ಸಿರಿ
ಮನಸಿಜನಂ ಪೆತ್ತು ಬಿಟ್ಟು ಪೋದಂತಿರೆ ಕಾಂ
ಚನ ಮಂಜೂ[5]ಷದೊ[5]ಳೊಪ್ಪುವ
ಜನಪತಿ ಸುತನಂ ನೃಪಾಳ ಕೃಷ್ಣಂ ಕಂಡಂ ||೯೬||

ವ|| ಕಂಡು ಮನಂಗೊಂಡು ಬಾಳಕಂ ನಿರ್ಮ್ಮಳಾರ ಕಯ್ಗೆ [6]ನಗುತ್ತುಂ[6] ಬಂದ ನವಳ್ಗೆ ಕುಡುವೆನೆಂಬುದುಮರಸಿಯರೆಲ್ಲಮೆಮಗೆ ತಮಗೆಂದು ಗೊಂದಳಿಸಿ ಕರಕಿಸಲಯಂಗಳನಡಸಿ ನೀಡುವುದುಂ ತಳಿರ ತುಱುಗಲಂ ತೊಱೆ[7]ದು ತಾಮರೆಗೆಱಗಲ್ಕೆಱಗುವ ಮಱಿದುಂಬಿಯಂತೆ ಮಂದಸಿನಿಂ ರಾಧೆಯೆಂಬರಸಿಯ ಪಾಣಿಪದ್ಮಕ್ಕೆ ಬಂದು ವಿಶಾಖೆಯಿಂದನೂರಾಧೆಗೆ ಬಂದ ಬಾಳೇಂದುವಿನಂತೆ [7]ಬಾ[7]ಳಕಂ ದರಹಸಿತ ಧವಳದೀಧಿತಿ[8]ಗಳಂ[8] ಪರಪೆ ಪುತ್ರವಿಶೇಷದಿಂದಾಕೆ [9]ಕೋ[9]ಟಿಹ್ಮಾಗಂಗೊಂಡು ಕೊಂಡಾಡಿ ನಡಪೆ

ಕಿವಿವಿಡಿದು ಪುಟ್ಟೆ ಕನ್ನೆಗೆ
ದಿವಾಕರಂ ರಾಧೆಗೀಯೆ ಮಗನಾದುದಱಿಂ
ದವೆ ಕರ್ಣಂ ಕಾನೀನಂ
ರವಿಜಂ ರಾಧೇಯನೆಂಬ ಪೆಸರಂ ಪಡೆದಂ ||೯೭||

ಅವಿಹಿತ ಕುಮತಕಥಾಂಬು
ಪ್ರವೇಶದಿಂ ಕರ್ಣಶೂಲಮಾರ್ಗಗದೊ ಪೇ
ಟ್ಕಿವಿಯೊಳ್ ಕರ್ಣಂ ಗಡ ಸಂ
ಭವಿಸಿದನಿಂತಪ್ಪ ಪುಸಿಯ ಪೊಟ್ಟಣಮೊಳವೇ ||೯೮||

---

1 ದ (ಚಟಡಣ) 2 ಱ(ಚಟಡಣ) 3 ದೊ (ಚಟಡ) 4 ಱಿದುನೋಡುತ್ತುಂ (ಚಣ) ರೇಱಿದೊಡತ್ತುಂ (ಟ) ಱಿದೋಡುತ್ತುಂ (ಡ) 5 ಷೆಯೊ (ಚಟಡಣ) 6 ನೆಗೆದು (ಚಟಣ) 7 ಹ (ಣ) 8 ಗಂ (ಚಟಡ) 9 ತೋ (ಜಡಣ)

ತನ್ನಂ ಪಾಂಡುಗೆ ಕೊಟ್ಟು ಕನ್ನೆ[1]ಯರೊಳಾರ್ಗೀ[1]ಸಾಹಸಂ ಕೂಡಿತೆಂ
ಬನ್ನಂ ಕೂಡಿದ ಕೊಂತಿ ಕಂತುಮನದೊಳ್ತಾಂ ರಚ್ಚೆಯೊಳ್ಪಟ್ಟ ಪೆ
[2]ತ್ತ್[2]ನ್ನಂ ತಾನೆನೆ ತಾ[3]ಗಿ[3]ದಾಗಿ ಸುಭಟಂ ಸೌಭಾಗಿನೇಯಂ ದಲೆಂ
ದೆನ್ನಂ ಕೀರ್ತಿಸಸಾರ್ತು ಕೂರ್ತು ಕೃತಭೂಲೋಕರ್ಣನಂ ಕರ್ಣನಂ ॥೯೯॥

ಧರೆಗಿತ್ತು[4]ದ[4]ಸ್ತ್ರನಾದನೆ
ಸಿರಿವಂತಂ ಕೀರ್ತಿಗಂಜುವನೆ ಕಲಿ ಪಿರಿದುಂ
ಪೊರೆದಾಳ್ದನ ಕಾರ್ಯಕ್ಕೋ
ಸರಿಸದೆ ಸತ್ತ್ವವನೆ ಬಟ್ಟನೆಂಬಂ ಕರ್ಣಂ ॥೧೦೦॥

ತೊಡರ್ದರಿಯಂ ಕೇಸರಿಯೊಳ್
ತೊಡರ್ದಿಭಮೆಂತಂತೆ ಮಾಡುವಂ ಭುಜಬಳದಿಂ
ಪಡೆದೊಡಮೆಯುಮಂ ಪೆಣ್ಣಂ
ಪಡೆದಂತಿರೆ ಬೇಡಿದವರ್ಗೆ ಕುಡುವಂ ಕರ್ಣಂ ॥೧೦೧॥

ವ॥ ಮ[5]ತ್ತ್ರಂ[5] ಕೊಂತಿಯ ಕನ್ನೆಸಾಹಸದಿನಾದ ಕನ್ನೆವೇಟದೊಳ್

ತರುಣಿಯ ಮೆಯ್ಯ ಬೆಂಕೆಯೊಳೆ ಬಿದ್ದಮೃತಾಂಶು ಮರೀಚಿ ಸುಟ್ಟ ಕ
ರ್ಪುರದವೊಲಾ[6]ಗೆ[6] ಸುಟ್ಟಪು[7]ದಿದ[7]ಲ್ಲದೊಡೆಲ್ಲಿಯದೆಲ್ಲಿಯ ತಾಪವೋ
ಸರಿಸದೆ ಪುಷ್ಪಬಾಣನಿಸೆ ನಾಂಟೆ ಮುರುಂಟದ ಪೂವೆ ಪುಳ್ಳಿಯಾ
ಗಿರೆ ಮನಮೆಯ್ದೆ [8]ಬೆಂ[8]ದಪುದದಿಲ್ಲದೊಡೆಲ್ಲಿಯದಂಗಜಾನಳಂ ॥೧೦೨॥

[9]ಕಡು[9]ದಣ್ಣೆಲರಲೆಯೆ ಬೆಮ
ರ್ತೊಡೆ ಬೀಸುವರಬ್ಜದಳದಿನಬಳೆಗೆ ಬೆಳ್ಳಂ
ಗೆಡೆದೆಳವೆಳ್ದಿಂಗಳೊಳಂ
ಕೊಡೆವಿಡಿ[10]ವ[10]ರ್ ಸ[11]ತಿ[11]ಯರಂಗತಾಪಮ[12]ದೆನಿ[12]ತೋ ॥೧೦೩॥

ವ॥ [13]ಅದನರಿದಭಿಮುಖ ಪ್ರಜಾತಪ್ರಜಾಪತ್ಯ ಸಂಬಂಧ ಬಂಧುರಮಪ್ಪ
ಬಂದುಭಾವಮೆಸೆಯೆ[13]

---

1 ಯೊಳಗಾಗೀ (ಚಟ) ಯೊಳಗಾದೀ (ಡಣ) 2 ಕ್ತ (ಜ) 3 ನೆ (ಜ) 4 ದು (ಜ) 5 ತ್ತಿತ್ತ (ಜ) 6 ಗಿ (ಜಡ) 7 ದದಿ (ಜ) ದತ್ತಿ (ಟ) 8 ಬಂ (ಜ) 9 ಕುಡ (ಚಟಡ) 10 ದ (ಜಟಡ) 11 ಖಿ (ಚಟಡಣ) 12 ದೆಂ (ಚಟಡಣ) 13—(ಜ)

ಸಿಂಧು ಸಿರಿ[1]ಯಂ[1] ವಿಭೂ[2]ತಿ[2]ಯು
ಮಂ ಧರಣಿಧರಂಗೆ ಕೊಟ್ಟವೊಲ್ ಪಾಂಡುನೃಪಂ
ಗಂಧಕವೃಷ್ಣಿನೃಪಂ ಕೊ
ಟ್ಟಂ ಧರೆ ಮಿಗೆ ಪೊಗೞೆ ಕೊಂತಿಯಂ ಮಾದ್ರಿಯುಮಂ ॥೧೦೪॥

ಅಳಿನೀ ಜ್ಯಾಲೇಖೆ[5]ಯುಂ[3] ಕಾಮ[4]ನ[4] ಕುಸುಮಧನುರ್ಲೇಖೆ[5]ಯುಂ[5] ಪುಷ್ಪ ಬಾಣಾ
ವಳಿಯಂ ಪೆತ್ತಂತೆ ಪಾಂಡುಕ್ಷಿತಿಪನ ಸತಿಯರ್ ಕೊಂತಿಯುಂ ಮಾದ್ರಿಯುಂ ಕೋ
ಮಳೆಯರ್ಕಾಮಾನುರಾಗಂಬಡೆದು ಪಡೆಯೆ ಧರ್ಮಾತ್ಮಜಂ ಭೀಮಸೇನಂ
ಚಳದೊಳ್ತಳ್ತರ್ಜುನಂ ಸಂದ ನಕುಳಸಹದೇವರ್ಕಳೆಂದಾದರೈವರ್ ॥೧೦೫॥

ಕಡುಗಲಿ ಧೃತರಾಷ್ಟ್ರಂಗಂ
ಕುಡೆ ನರಪತಿ ವೃಷ್ಣಿನೃಪತಿ ನೆಱೆ ನೂಱೆ[6]ಸಟಿಂ
ಪಡೆವಂತಿರೆ ಪದ್ಮಿನಿ ತಾಂ
ಪಡೆದಳ್ ಗಾಂಧಾರಿ ನೂರ್ವರಂ ನಂದನರಂ ॥೧೦೬॥

ಸುತರೊಳ್ ದುರ್ಯೋಧನನಧಿ
ಕತೆ ದುಶ್ಶಾಸನನ ದೃಢತೆ ದುರ್ಧರ್ಷಣನು
ದ್ಧತ ಧೃತಿ ದುರ್ಮರ್ಷಣನ
ಪ್ರತಿಮತೆ ಗಾಂಧಾರಿಗಿತ್ತುದತಿ ಸಮ್ಮದ[6]ಮಂ[6] ॥೧೦೭॥

ವ॥ ಅಂತು ಹರಿವಂಶಮುಂ ಕುರುವಂಶಮುಂ ಸಿಂಧುಯುಗಳ ಸಂಭೇದದಂತೆ [7]ಭೇದಿ[7]ಸಲ್ಬಾರದಂತು ಕೂಡಿ ಕೊರ್ವುವಡೆದು ಸುಕೃತಫಲಮಂ ಪಲಕಾಲಮನು ಭವಿಸುತ್ತುಮಿರೆ ಮತ್ತೊಂದು ದಿವಸಂ ಗಂಧಮಾಧನನೆಂಬುದಯಗಿರಿಯೊಳುದಯಿಸಿದ ಸುಪ್ರತಿಷ್ಠರೆಂಬ ಸೂರಿಸುಧಾಕರರ ಸಮೀಪದೊಳ್ ಸೂರವೀರಂ ಚಕೋರಂ ಪುತ್ರ ಪೌತ್ರಾದಿಗಳ್ವೆರಸು ನಿರ್ಮಳ ಧರ್ಮಾಮೃತಮನೀಂಟಿ ನಿಷ್ಠುರ ಸಂಸಾರ ಪರಿತಾಪ ತೃಷ್ಣೆಯಂ ತೂಳ್ದಿ ಸಂವೇಗಮಂ ಸಂವರಿಸಿಯಂಧಕವೃಷ್ಣಿ[8]ಯೆಂಬರಸು[8]

ಎತ್ತಿದನಧಿಕೋತ್ಸವದಿಂ
ದುತ್ತಮ ಪೌತ್ರಂ[9]ಗೆ ರಾಜ್ಯಭರಮಂ ಪ್ರೀತಿಯಿಂ
ಪೊತ್ತಿರ್ಪಂತಿರೆ ಗಾಂ[10]ಪರೆ[10]
ಮತ್ತಾಂಪವರುಳ್ಳೊಡಮಳ ಹರಿಕುಳ ತಿಳಕಂ ॥೧೦೮॥

1 ಯಾಂ (ಜಟ) 2 ಷೆ (ಜ) 3 ಯಂ (ಚಟಡ) 4 ದ (ಚಟಣ) 5 ಯಂ (ಚಟಡಣ) 6 ದಿಂ (ಜ) 7 ಬಿಡಿ (ಚಡ) ಪಿಡಿ (ಟಣ) 8 ಯಂಬರಿಸಿ (ಜ) 9 ಕ್ಯಂ (ಜ) 10 ಪರಿ (ಟ) ಪಂ (ಣ)

ವ॥ ನರಪತಿವೃಷ್ಣಿಗಂ ಯುವರಾ[1]ಜ್ಯ[1]ಪದವಮಂ ಕೊಟ್ಟು ತಪಂಬಟ್ಟನಲ್ಲಿಂ ಬೞಿಯಂ ಪನ್ನೆರಡು [2]ಬರಿಸಂ[2] ಪೋಗೆ

ಶತಪತ್ರಶ್ರೀಯನಿಂದುಪ್ರಭೆಯನಿಳಿಸೆ ವಕ್ತ್ರೇಂದು ಮೆಯ್ ಸೂರ್ಯಕಾಂತ
[3]ದ್ಯು[3]ತಿಯಂ ಚಂದ್ರೋಪಳಚ್ಛಾಯೆ[4]ಯ[4]ನೊಲಿಸೆ ಚಕೋರೌಘಮಂ ಚಕ್ರವಾಕೀ
ತತಿಯಂ ಪಂಚೇಂದ್ರಿಯಂಗಳ್ ಪಗಲುವಿರುಳುಮೋರಂದದಿಂ ಪೋಲೆ ಪೂತ
ಪ್ರತಿಮಾಯೋಗೈಕನಿಷ್ಠಂ ನೆಲಸಿದನಗವೆೞ್ ಸುಪ್ರತಿಷ್ಠಂ ವರಿಷ್ಠಂ ॥೧೦೯॥

ಆ ಮುನಿಗೆ ಗಜಜಿ೯ ಗರ್ಜಿಸಿ
ಜೀಮೂತಂ ಮೊೞಗಿ ಮುತ್ತುವಂತಿರೆ ಗಿರಿಯಂ
ಭೀಮೋಪಸರ್ಗಮಂ ಗದ
ತಾಮಸದಿಂ ಮಾಡಿದಂ ಸುದರ್ಶನ ದೇವಂ ॥೧೧೦॥

ಆ ರಿಪುವಿನುಪದ್ರವಮಂ
ಸೈರಿ[5]ಸಿ[5]ದಾ ಯತಿಗೆ ಪುಟ್ಟಿ[6]ದ[6]ತ್ತು[6] ತ[6]ಮಸ್ಸಂ[6]
ಹಾರಕಮಮೃತಂ ಮಥಿತಾಂ
ಭೋರಾಶಿಗೆ ಪುಟ್ಟುವಂತೆ ಕೇವಲಬೋಧಂ ॥೧೧೧॥

ವ॥ ಆಗಳಾ ಗಂಧಮಾದನ ಮೇದಿನೀಧರಕ್ಕೆ ಕೇವಳಿಪ್ರಾಜ್ಯ ಪೂಜಾಪರ ಮೋತ್ಸವಮಂ ಮಾಡಲ್ಬರ್ಪ ದೇವನಿಕಾಯ ದುಂದುಭಿಧ್ವಾನಾಹೂತನಾಗಿ ಪುರು ಹೂತನ ಪಿರಿಯರಸಿಪೆರಸಂಧಕವೃಷ್ಣಿಯುಂ ಬಂದು ಭುವನಬಂ[7]ಧುವೆಂದು[7] ದೇವ ದುಂದುಭಿ ದೇವಧ್ವನಿ ಪ್ರಭವ ವಿಭವ ವ್ಯಾಕೂಪ್ಯರತ್ನಾಕರ ಪ್ರರೋಹಣರೋಹಣ ನಗೇಂದ್ರ ಖಗೇಂದ್ರ ದೇವೇಂದ್ರ ಗಜೇಂದ್ರ ನಾಗೇಂದ್ರ ಸಮಸ್ತಕಪ್ರಕರ್ಷ[9]ಘರ್ಷಣ[9] ವಿಕೀರ್ಣ ಪಾದಪೀಠ ಪ್ರಕೀರ್ಣಮಣಿಗಣಾರುಣ ಕಿರಣರೇ[10]ಣು[10] ಕ್ರೀಡಾನು ರಂಜಿತ ರಾಜಕುಂಜರಸ್ಪಂದನಂ ಬಂದಿಸಿ ಮುಂದೆ ಕುಳ್ಳಿರ್ದು ಕಯ್ಗಳಂ ಮುಗಿದು

ಕೇವ[11]ಳಿ[11] ಬಿನ್ನಪಮಿಂತೀ
ದೇವರ್ಕಳ್ ನಿನ್ನನೊಸೆದು ಪೂಜಿಸಿದಪರಾ
ದೇವಂ ಮಾಡಿದನೇಕೆಯೊ
ದೈವಗುರೂ [12]ಪೇೞಿ ನಿನಗು[12] ರೂಪದ್ರವಮಂ ॥೧೧೨॥

---

1 ಜ (ಜ) 2 ವರ್ಷಂ (ಚಟಡ ) 3 ದ್ಯು (ಬ) 4 ಯಿ (ಣ) 5 ಸ (ಡಣ) 6 ತ್ತುಂ (ಚ) ದತ್ತುಂ (ಟ) 7 ವಾಃ ಸಂ (ಜ) 8 ಘ (ಜ) 9 ಪುರುಷಣ (ಚ) 10 ಣೂ (ಜ) 11 ಳ (ಟಣ) 12 ಪೇೞಿ ನಿನಗನು (ಕ) ಪ್ರೇರಣಂ ಗು (ಚಟಣ) ಪ್ರೇರಣಂ ನಿನಗು (ಡ)

ಎನೆ ಜಿನನೆಂದಂ ಕೇಳಾ
ತನೆ [1]ಕ[1]ರಮುಪಕಾರಿಯೆನಗೆ ಪೀಡಿಸಿ[2]ದೊಡೆ[2] ಕಾಂ
ಚನ ಪಾಷಾಣಕಮಂ ಪೊ
ನ್ನನೆ ಮಾಳ್ಪಿಂ ಪೊಲ್ಲಕೆಯ್ತನಪ್ಪನೆ ನೃಪತೀ ||೧೧೩||

ವ|| ಅದಂ ಪೇೞ್ವೆಮಿಾ ಜಂಬೂದ್ವೀಪದ ಭರತಕ್ಷೇತ್ರದ ಚಂಪಾಪುರದ ಪರದರ್ ಸೂರದತ್ತನುಂ ಸುದತ್ತನುಮೆಂಬರಿರ್ವರುಂ ಪರದು ಪೋಗಿ ಪಿರಿದಪ್ಪೊಡಮೆಯಂ ಪಡೆದು ಪೊೞಲಂ ಪುಗುವಲ್ಲಿ ಸುಂಕಿಗರ್ಕಾಣ್ಬರೆಂಬ ಶಂಕೆಯಿಂದುಸಿರಂ ಬಿಡಲಾಱದಸುವಂ ಬಿಡುವಂತಾಪುರದ ಪೇರಡವಿಯೊಳೊಂದು ಪೊ[3]ದ[3]ೞ್ದು ಪರ್ವಿದ ಪೊದಱ ಮೊದಲೊಳ್.

ಎರೆ[4]ದವ[4]ರ್ಗಮನುಗ್ರಹಿಸುವ
ಪರಮ ಕವೀಶ್ವರರ್ಗ[5]ಮಿಾವ ದಾನಿಗಳೇಂ[5] ಬಂ
ದೆರೆಯದ ನೆಲಕಂ ಪೀಡಿಸು
ವರಸಂಗಂ ಕುಡುವ ಕೃಪಣನಗ್ಗಳವಲ್ತೇ ||೧೧೪||

ವ|| ಎಂಬ ನೀತಿಯಂ [6][ಮಾ]ಣದೆ ಪೂಣ್ದು[6] ಪೋಪುದುಮೊರ್ವಂ ಕಳ್ಳಸಿಗಂ ಕಳ್ಳಂ ಕೊರ್ವಿಸುವ ಬೇರುಂ ಬಿಕ್ಕೆಯುಮಂ [7]ಬೆರಂ[7]ಟುತ್ತುಂ,ಬಂದಾ ಪೊದಱ ಮೊದಲನ ಗುೞ್ದು ನೆಗಪಿ ತನ್ನದೆನ್ನದೆಂದು ನಚ್ಚುವರಂ ನಗುವಂತು ಗಜಗಲಿಸುತ್ತುಮಿರ್ದ ಕಾಂಚನ ಪಂಚರತ್ನ ಸಂಚಯಮುಂ ಕಂಡು ಕೊಂಡು ಶೌಂಡಿಕಂ ಧನಶೌಂಡನಾಗಿ ಪೋದನಿತ್ತಲಾ ಪರದರಿರ್ವರುಮಡವಿಯೊಳ್ ಮಡಗಿದೊಡವೆಯಂ ಕಾಣದೆ ಕಾೞ್ಕೋಣಂಗಳಂತೆ ಕೆಕ್ಕಳಗೆಳರ್ದು ಕೆಚ್ಚನಾದ ಕ[8]ಣ್ಣಂ[8] ಬಿಚ್ಚನೆ ಬಿಟ್ಟು ಬಿೞ್ವಿನವೊದಱೊಯೊರ್ವರೊರ್ವರಂ ನಂಬದ ಬಗೆಯಿಂ ಕನಕಾಸ್ವಾದಮಿಲ್ಲದೆಯುಂ ಮರುಳ್ಮಸಗಿ ಪಸುಗೆಗೆಟ್ಟು ಪಸಿಯ ಬಡಿಗೆಗಳನೆತ್ತಿಕೊಂಡು

ಮಿದುಳ್ಗ[9]ಳು[9]ಗೆ ತಲೆಯ ಸಿರ್ಪುಗ
[10]ಳು[10]ದಿರೆ ದೃಢಕ್ರೋಧಲೋಭ[11]ಭರ[11]ದಿಂದಂ ಮೋ
[12]ದಿ[12]ದ ಸೂರದತ್ತನುಂ ಕಲಿ
ಸುದತ್ತನುಂ ಸತ್ತು ಮೊದಲ ನರಕಕ್ಕಿೞಿದರ್ ||೧೧೫||

---

1 ಪ (ಜ) 2 ದೈ (ಚಟಡ) ದೊಂ (ಣ) 3 ರ (ಜ) 4 ದ (ಣ) 5 ಮಿವುದಾನಿಗಳುಂ (ಕಗಚಟಡ) ಮಿಾವುದಾನಿಗಳ್ (ಣ) 6 ಪೂಣ್ದೆದೆ ಪೂಣಾ (ಗಚ) ಪೂಣದಪೂಳ್ದು (ಜ) ಪೂಣ್ದೆದೆ ಪೂಣ್ದು (ಟ) ಪೂಣದೆ ಪೂಣ್ದು (ಡಣ) 7 ಬರುಂ (ಜ) ಬೆರುಂ (ಡ) 8 ಣ್ಗಳಂ (ಜ) 9 ಳಿ (ಕಗಚಟಡ) 10 ಳ (ಜ) 11 ವಶ (ಜ) 12 ದ (ಚಟಡಣ)

ಆ ನರಕದಿಂದೆ ಬಿಂಜದ
ಕಾನನದೊಳ್ ಬಂದು ತಗರ್ಗಳಾದರ್ ಪರದರ್
ವಾನೇಯ ಮತ್ತವಾರಣ
ಪೀನಂಗಳ್ ಶೃಂಗಕುಲಿಶ ದಲಿತ ನ[1]ಗಂ[1]ಗಳ್ ||೧೧೬||

ಅಗಜಗಜಮದಿ[2]ರ[2] ಜಳಮುಗೆ
ಮಿಗೆ [3]ಮೇಗೆ ಸಡಿ[3]ಲ್ದೊಡುಣ್ಕಿ ಜಡೆಗೊಂಡುರಿನಾ
ಲಗೆವೊಲಿರೆ ದಹನನೇಱದ
ತಗರಂದದಿನಟ್ಟಿ ತಾಗಿ [[4]ತ[4]]ಗೆದುವು ತಗರ್ಗಳ್ ||೧೧೭||

ಮಲ[5]ಪ[5]ಲೆದು ತಾಗೆ ಕೊಂಬಿನ
ತಲೆಯೊಳ್ ಕೋಡೊಣಗಿ ಸಣಗ[6]ಳಾಗದ ಮಿಗ[6]ಗಳ್
ಗಲಗಲಕೆ ನಲುಗೆ ನಲಿ[7]ದು[7]ಲಿ
ವಲಿವಂ ಕಟ್ಟಿದವೊಲೆಸೆದುದಾ ಮೇಷಯುಗಂ ||೧೧೮||

ಕಣ್ಣುರಿ ಮುಟ್ಟೆ ನೆಟ್ಟನೆ ಮುರುಂಟಿದವೊಲ್ಮುರಿ[8]ಗೊಂಡ[8] ಕೋಪು ವ್ಯೆಯುಣ್ಣೆ ಕ[9]ಟಿ[9]ಲ್ವಿನಂ ಕುಡಿದು [10]ಕೆ[10]ತ್ತುವ ಕಂಡದ ಕೊರ್ವು [11]ಸಾ[11]ತೆಯೊಳ್ಪಣ್ಣವೊ[12]ಲು[12]ಬ್ಬರಂ ಬಿರಿಯೆ ರತ್ನಶಿಳಾಳಿ ನೆಟಲ್ಗೆ ಪಾಯ್ವ ಪೆರ್ವುಣ್ಣೊಡೆಯುತ್ತುಮಿರ್ಪ ಪಣೆಯದ್ಭುತಮಾದುದುರಭ್ರಯುಗ್ಮದಾ ||೧೧೯||

ಅವು [13]ತಾರ್ಮು[13]ಟ್ಟಿಸೊಳೊರ್ಮೆ ಕಂಪು ಕಿಡಿ[14]ಯಂ[14] ಕೆಂಡಂಗ[15]ಳಂ[15] ಸೂ[16]ಸಿ ತಾಗುವ[16]ವೊಲ್ ಬೆಟ್ಟಿನೊಳೊಂದು ಬೆಟ್ಟು ಭವಬದ್ಧಕ್ರೋಧದಿಂ ಕಾಯ್ದು ತಾಗುವುದುಂ ಕಂಠದೊಳಾಟಿಸಿ ತೋರದಲೆಗಳ್ ಸತ್ತಂದು [17]ಮೇ[17]ಷಂಗಳಾದುವು ಗಂಗಾತಟ ಗೋಕುಲಕ್ಕೆ ಜಿತದಿಂ ಜ್ಞಾನಾಳಿಳ್ಗೂಳಿಗಳ್ ||೧೨೦||

ತಳೆದತ್ತುದ್ವೃತ್ತಿಯಂ ತದ್ವೃಷಭಯುಗಳಮಾಲಂಬಿ[18]ಸಾ[18]ಸ್ನಾಸಟಂ ಪಾಟಳನೇತ್ರಂ ವೃದ್ಧವಂ[19]ಶಾಂಕುರ[19] ವಿಷಮ ವಿಷಾಣದ್ವಯಂ ಗೃಧ್ರಪಕ್ಷೋಚ್ಚಳಿತಾದಭ್ರಶ್ರವಂ ದುಂದುಭಿನಿಭನಿನದತ್ಕಂಧರಂ ದೀರ್ಘನೀಲೋತ್ಪಳನಾಳಾಲೋಲ ವಾಳಂ ವಿಪುಳ [20]ಶಫ[20]ಪರಿಸ್ಫೂಳಮಾಭೀಳಶೀಳಂ ||೧೨೧||

---

1 ಖಂ (ಚಟಡ) 2 ರ (ಜ) 3 ಮಿಗೆ ಸಿಡಿಲ (ಕಡ) ಮೋಗೆ ಸಿಡಿಲ (ಚ) ವೋಗೆ ಸಿಡಿ (ಙ) 4 ತೆ (ಚಜಟಡಙ) 5 ದೊ (ಜ) 6 ಲಾದ ಮಿನುಂ (ಜ) 7 ಸ (ಚಟಿಡಙ) 8 ದೊಂದು (ಜ) 9 ನ (ಜ) 10 ಕಿ (ಚಟಡಙ) 11 ಸೋ (ಚಟಡಙ) 12 ಒ (ಚಟಡಙ) 13 ತಾಂವು (ಜ) 14 ಯುಂ (ಜ) 15 ಳಂ (ಜ) 16 ಸೆ ಗಂಟುವ (ಚಟ) ಸೆ ಸಂಗಿದ (ಡ) ಸೆ ನಂಟುವ (ಙ) 17 ವೋ (ಜ) 18 ಸ (ಜ) 19 ಶಂಕುರು (ಚಟಡಙ) 20 ಶಫ (ಡ) ಪರಿ (ಙ)

ಪಣೆ ವರುಡಲ್ಕೆ ಪರ್ವಿದೆ[1]ರ್ದೆ[1]ಯೊಳ್ ಪೊರೆದಳ್ಗಿ ಸಱಿಂ ವೃಷಂಗಳೊಳ್
ಪೊಣರ್ದಿಱಿಯಲ್ಕೆ ಪತ್ತಿದರುಣಾಘದಿನಾ ವೃಷಶೃಂಗಯುಗ್ಮಮೊಂ
ದಣಿಯರವಾಯ್ತು ಸಾರ[2]ವಿಸಿ[2] ಸೆತ್ತರೊಳೊ[3]ಕ್ಕೆಱಿ[3]ದರ್ಚಿಸಿರ್ದ ಪೇ
ರ[4]ಣೆ[4]ಮಣಿಯೆಂಬ ಭೈರವನ ಲಿಂಗದ ಸೀಯದರಂಬೊಲದ್ಭುತಂ ॥೧೨೨॥

ಪ್ರತಿವೃಷಭ ಶೃಂಗ[5]ಸೀರ[5]
ಕ್ಷಿತಿಲೇಖಾಲಕ್ಷಿತಂ ತದೀಯಕ್ಷೇ[6]ತ್ರ[6]
ಕ್ಷಿತಿಯಾಯ್ತು ದರ್ಪಬೀಜಾ
ಕೃತಮೆನೆ ಬಸವಂಗಳುಕ್ಕದೇನುಬ್ಬಸಮೋ ॥೧೨೩॥

ವ॥ ಆ ಮದಕಳಕ್ರೂರ ಶೂರ ಸೌರ[7]ಭೇಯಂಗ[7]ಳೊಂದು ದಿವಸಮೊಂದೊಂದಱ ಕೆಲಸಂ ಕೇಳ್ದು ಕೆಳರ್ದು ಕೆಂಗಲ್ಮಸಗಿ ಮೂದಲಿಸಿದಂತೆ ಮಲೆತು ತಾಮಿರ್ದ ಮೊದಲ ನರ[8]ಕಮಂ[8] ತೆಱೆದು ತೋಱುವಂತೆ ಭೂತಳಮಂ ಕೊಳಗಿಂ ಸರಡುತ್ತುಂ ಮನಂ ವಾಯುಗೆ ಮಿದಿಲ್ದು ಕಯ್ಯಿಕ್ಕುವ ಸೊರ್ಕಾನೆಗಳಂತೆ ತಲೆಯಿಕ್ಕಿ ತೊಲಗದ ಮನದ ಕನಲ್ಕೆಯಿಂ ಕಾದಿ [9]ಕೊಂದು[9] ಬಿರ್ದು ಕಂದಂಗಳೊಳ್ ನಡುಕೋಡುವರಂ ನಟ್ಟಕೋಡುಗಳಿಂ ಮಿಳಿಯಂ ಕಟ್ಟಿ [10]ಗೋ[10]ಪಾಲಕರ್ ಕೀಱಿ ಸತ್ತು ಸಂಮೇದ ಗಿರಿಯ ಕಾಡೊಳ್ ಕೋಡಗಂಗಳಾಗಿ ಪುಟ್ಟಿದುವಿಂತು

ಅವರವಿವೇಕದಿಂ ಕುಱಿಯ ಪೋರಿಗಳಾದರವುಂ ಪರಸ್ಪರಾ
ಹವ ರಸಕಾಂಕ್ಷೆಯಿಂ ಕುಱಿಯ ಪೋರಿಗಳೆತ್ತುಗಳಾದುವೆತ್ತುಗಳ್
ತವದತಿ ಚಂಚಳ ಪ್ರಕೃತಿಪಾಕದಿನಕ್ಕಟ ಮರ್ಕಟಂಗಳಾ
ದುವು ಪಿರಿದುಂ ಶರೀ[11]ರಿ[11]ಗಳ ಪಾಪಮಿದೇಂ ಚರಿತಾನುರೂಪಮೋ ॥೧೨೪॥

ಪರಿಗತ ನಿರ್ಝರಿಣಿಯೊಳಾ
ಗಿರಿಯೊಳ್ ಕಿಸ[12]ಲಯಿತ[12] ಶಿಖರ ಕಾನನಕುಲದೊಳ್
ಶರನಿಧಿ ಸುತ್ತಿದ ಲಂಕೆಯ
ನುರುಪಿದ ಕಪಿಪತಿವೊಲಿರ್ಪುದಾ ಕಪಿಯುಗಳಂ ॥೧೨೫॥

---

1 ಡೆ (ಚಟಡಣ) 2 ವಿಸೆ (ಜ) ಬಿಸಿ (ಣ) 3 ಕ್ಕಿರೆ (ಚಟಡಣ) 4 ಣ (ಜಟ) 5 ಖರ (ಗಟ) ಶೀರಾ (ಣ) 6 ತ್ರಂ (ಣ) 7 ಭ್ಯಯಂಗಡೊ (ಗಡ) ಭೇಯಂಗಡೊ (ಜಟ) 8 ಕಂ (ಚಟಡಣ) 9 ಕೋಡು (ಜ) ಕೊಂಡು (ಡ) 10 ಗೋಕುಳ (ಜ) 11 ರ (ಚಜಟ) 12 ಲೈಕ (ಚಟಡಣ)

ವ॥ ಆ ವಿಪುಳ ಫ[1]ಲ[1] ಕುಸುಮ[2]ಕಿಸಲಯ ಕುಳಂ[2]ಗಳುಂ ಕಪಿಕೇಸಂಗಳು ಮಪ್ಪ ಕೇಶಂಗಳುಂ ಶಿಲಾಸಲಿ[3]ಲ[3] ನಿಮಿತ್ತಮುನ್ಮತ್ತ[4]ಪರ[4] ಪುರಾಣ ಪುರುಷ ವ್ಯಾಲೀಕೃತ ಬಾಲಿ ಸುಗ್ರೀವಂಗಳಂತೆ ಸುಗಿಯದಗಿಯದೆ ಸಂಗರಮಂ ಮಾಡಿ

ಒಂದಾಗಳೆ ಸತ್ತುದು ಮ<br>
ತ್ತೊಂದಿರ್ದುದು ಸಾಯಲದಱ ತ[5]ಮ[5]ಮಂ ಕಳೆಯಲ್<br>
ಬಂದುದು ಗಗನದಿನಿೞಿದ ರ<br>
ವೀಂದುಗಳವೊಲಾಗಳಂತೆ ಚಾರಣಯುಗಳಂ ||೧೨೬||

ವ॥ ಅಸುರಗುರುಗ[6]ಳುಂ[6] ದೇವಗುರುಗ[7]ಳುಮೆಂ[7]ಬ ಚಾರಣರಾ [8]ಮರಣಾಭಿ[8] ಮುಖನಪ್ಪ ಬಲೀಮ್ಮುಖನಂ ಕಂಡು ಕರುಣಾಜಳಮುಮಂ ಕಮಂಡುಲುಜಲಮುಮಂ ಮೊಗದೊಳ್ ತಳಿಯೆ ಕುಳಿರ್ಕೊಳ್ಳೆ ಕೋಡಗಂ ಕಣ್ಣಂ ತೆಱೆದು ತಲೆಯನೆತ್ತಿ ಪೊಡೆವಡೆ ಪರಸಿ [9]ಪದಿರ್[9]ದಿಂ (?) ಮಾತಲ್ಲದಿದಿರ ಮಾತಿನೊಳ್ ಧರ್ಮಮಂ ತಿಳಿಪೆ ಪಂಚನಮಸ್ಕಾರಮಂ ಪೇೞೆ ಕೇಳ್ದು ಶುಭಸಂಸ್ಕಾರದಿಂ ಸತ್ತಾ ಸಂಮೇದಗಿರಿತರು ಶಿಖರ ದಿನಾ[10]ಶಾಖಾಚರಂ[10] ಸೌಧರ್ಮಕಲ್ಪತರು ಶಿಖರಕ್ಕೆ ಪಾಯ್ದು ಚಿತ್ರಾಂಗದನೆಂಬ ದೇವ ನಾಗಿ ದಿವ್ಯಸುಖಫಲರಸಮನಾಸ್ವಾದಿಸಿ ಬಂದೀ ಜಂಬೂದ್ವೀಪದ ಭರತಕ್ಷೇತ್ರದ ಸುರಮ್ಯ ವಿಷಯದ ಪೌದನಪುರದರಸಂ ಸುಸ್ಥಿತಂಗಂ ಸುಲಕ್ಷಣಾದೇವಿಗಂ ಸುಪ್ರತಿಷ್ಠ ನೆಂಬೊಂ ಸುತನಾಗಿ ಭೋಗೋಪಭೋಗಂಗಳನುಪಭೋಗಿಸುತ್ತುಮಿರೆ

ಚಿತ್ರಲತಿಕೆ॥ ಕೇದಗೆವೂವಂ ಚಾದಗೆಬಾಯಂ ಬಿಡೆಬಿಡುತಿರೆ ಬಿಡುವನಿ ಕಡವಿಸಿಲಿಂ ಸೋದು ಬಿಸುರ್ಪಂ ಜಾದಿಯ ಕಂಪಂ ಕಡವಿನ ಕೊಡಸಿಗೆಯಲರ್ಗಳ ಸೊವಡಿಂ ಕೋದಿದಿರ್ಗೊಳ್ವಾಹ್ಲಾದಕರಂ ಸೋಗೆಯ ದನಿ ಪೊಱಮಡೆ ಪಡುವಣ ದೆಸೆಯಿಂ ದೂದೆ ಸಮುತ್ಸಹ ಮೋದಮೆಲರ್ಬಂದುದು ಮೊಳೆ [11]ಪಸರಿಸೆ[11] ಪೊಸಮೞೆಗಾಲಂ ||೧೨೭||

ವ॥ * ಅಂದು ಸಿತಗಿರಿಯೊಳಾ ಪ್ರಾವೃಷೇಣ್ಯಜಳಧರಧ್ವನಿಗೆ ಮಸಗಿ ಮುಸುಱಿ ಮುತ್ತಿ ಮೊತ್ತಂಗೊಂಡು ಕಾ[12]ಡು[12]ವ ಕೋಡಗಂಗಳಂ ಕಂಡು ಜಿತಸ್ಮಯನುಂ ಸಂಜಾತವಿಸ್ಮಯನುಂ ಜಾತಿಸ್ಮರನುಂ ವೈರಾಗ್ಯಪರನುಮಾಗಿ * ಪೋಗಿ ಸುಧರ್ಮಾ

---

1 ಲಕ (ಚಟಣ) 2 ಕಿಸಲಯ ಕೊಳಂ (ಗಚಟಡ) ಕೋಶಂ (ಜ) 3 ಲಮುಪ್ಪ (ಜ) 4 ಪರ (ಗಚಟ) 5 ಪ (ಚಟಡಣ) 6 ಳಂ (ಚಟಡಣ) 7 ಳಿಂ (ಚಟಡಣ) 8 ಭಿ (ಜ) 9 ಪ್ಪ (ಕಗಚಟಡ) ತಿಬ್ಬ (ಣ) 10 ಚರಂ (ಚಟಡಣ) 11 ಪೋಪರೆ (ಜ) 12 ದು (ಚಡ) * ಈ ಭಾಗ 'ಟ' ಪ್ರತಿಯುಲಿಲ್ಲ.

ಚಾರ್ಯರ ಚರಣೋಪಾಂತದೊಳ್ ತಪಶ್ಚರಣಮುಮಂ ಕೈಕೊಂಡನಾ ಸೂರದತ್ತ
ಚರರೆ[1]ವಾದೆವು ಇತ್ತ[1] ಸುಪತ್ತ[2]ಚರಾ[2]ಖಾಚರ[3]ನುವಿಾ[3] ಚರಾಚರ ಸ್ವರೂಪ
ಮಪ್ಪ ಸಂಸಾರ ಕಾಂತಾರದೊಳ್ ತಿರಿಪು ಬಂದು ಸಿಂಧುತೀರದ ರುಸಿಪಳ್ಳಿಯೊಳ್
ಮೃಗಾಯಣನೆಂಬ ಮುನಿಗಂ ವಿಶಾ[4]ಖೆ[4]ಯೆಂಬ ಗೊರತಿಗಂ ಗೌತಮನೆಂಬ ಮಗ
ನಾಗಿ ಪುಟ್ಟಿ ತಪಂಬಟ್ಟು ಬೇಸಗೆಯಾಗೆ

ಭಗ್ನಮನೋರಥಂ ರತಿಸುಖಾಸವ ಸೇವೆಗೆ ಪಂಚಬಾಣ ಪಂ
ಚಾಗ್ನಿತಪಕ್ಕೆ ನಿಲ್ವ ವಿರಹಾತುರನಂತಿರೆ [5]ಕುತ್ಸಿ[5]ತಾಗಮ
ತ್ವಗ್ನಿಳಯಂ ನಿಳಿಂಪ ಸುಖ ಲಂಪ[6]ಟ[6]ನಾಗಿಯೆ ನಿಂದನಂದು ಪಂ
ಚಾಗ್ನಿತಪಕ್ಕೆ ತಾಪಸ ಸಮೂಹ ಮಹೋತ್ತಮನಪ್ಪ ಗೌತಮಂ ||೧೨೮||

ಪಱುಗಟ್ಟಿದ ಪಾಸಮುಂ ಕೈ
ಗಟ್ಟಿದ ತಪ್ಪೇನಳನೆ ಸುಡುಗುಮೊಟ್ಟಿದ ಕಿಚ್ಚಿಂ
ತಱಿಪಱಿನೆ ಪುಳ್ಳಿಯೊಳಗಣ
ಪುಱು ಬೇಗಂ ಬೇಗುಮೆುಗ್ಗ ಬೇಗುಮೆ ದುರಿತಂ ||೧೨೯||

ವ|| ಆತನಾ ತಪಃಫಲದಿಂ ಜ್ಯೋತಿರ್ಗಣದೊಳಗೆ ಸುದರ್ಶನನೆಂಬ ದೇವನೀತ
ನಾಗಿ ಪೂರ್ವಜನ್ಮಜನಿತ [7]ಪ[7]ರುಷರೋಷಾವೇಶದಿನೆಮಗೀಯುಪಸರ್ಗಮಂ ಮಾಡಿದ
ನೆಂಬುದುಮುದೆಲ್ಲಮನಾ ಸುದರ್ಶನದೇವಂ ಕೇಳ್ದು [8]ಸದ್ದ[8]ರ್ಶನಮಂ ಕೈಕೊಂಡನಂಧಕ
ವೃಷ್ಣಿಯುಂ ವಿರಕ್ತನಾಗಿ ಸಮುದ್ರವಿಜಯಂಗೆ ಪಟ್ಟಂಗಟ್ಟಿ ತಪಂಬಟ್ಟು ಮೋಕ್ಷಕ್ಕೆ
ಪೋದನಿತ್ತಲ್

ಸೋದರ[9]ರೆಣ್ಬ[9]ರುಂ ಪಸುಗೆಯಂ ಪ್ರತಿಪಾಲಿಸಿ ಲೋಕಪಾಲರಂ
ತಾದರದಿಂ[10]ದೆ ಬೆಚ್ಚು[10] ಬೆಸಕೆಯ್ಯೆ ನಿಜಾ[11]ಜ್ಞೆ[11]ಗೆ ರತ್ನಗರ್ಭೆಯಂ
ಕಾದು ಸುವರ್ಣಯುಕ್ತಿಯೆನೆ ತನ್ನ ಕರಕ್ಕೆ ಸಮುದ್ರಮೇಖಲಾ
ಮೇದಿನಿಯಂ ಸಮುದ್ರವಿಜಯಂ ಮಣಿಮುದ್ರಿಕೆಯಾಗೆ ಮಾಡಿದಂ ||೧೩೦||

ಪೊಸದೇ[12]ಶಿ ಪೊಂಗು ಪೊಂ[12]ಗೆಸೆ
ವೆಸಕಂ ಕಡುಗಾಡಿ [13]ರೂಢಿ[13]ಯೆಂಬಿವಱಿಂದಂ
ವಸುಧೇಶನಣುಗದಮ್ಮಂ
ವಸುದೇವಂ ಧರೆಗೆ ಕ[14]ಣ್ಣು[14]ಮುಳ್ಳಾಗಿರ್ದಂ ||೧೩೧||

---

1 ಮಾದೆವು ಮತ್ತ (ಗ) ಮಾದೆವು ಮತ್ತೆ (ಚಟ) ಮಾವತ್ತ (ಜ) 2 ಶಾ (ಜ) 3 ನುಂಖ (ಜ) 4 ಳಿ (ಜಟಣ) 5 ಕುತ್ಸಿ (ಚಟಡ) ಪತ್ಸಿ (ಣ) 6 ಟ (ಣ) 7 ಪು (ಚಜಟ) 8 ಸುದ (ಜಡ) 9 ರಿಬ್ಬ (ಡ) 10 ದಬೆಚ್ಚ (ಚಟ) 11 ಗ್ನಿ (ಜ) 12 ಸೆ ಪೊಂಗು ಪಾಂ (ಜ) 13 ಗರುಡಿ (ಚಟಡಣ) 14 ಣ್ಣ (ಜ)

ಪಡೆದಡಿಯಿಟ್ಟವೊಲ್ ಕುಸುಮದೊಳ್ ಮದನಾಯುಧಲಕ್ಷ್ಮಿ ಬಾಳಚೂ
ತದೊಳೆ ವಸಂತಲಕ್ಷ್ಮಿಯತಿವರ್ತಿಯೊಳುನ್ಮದಲಕ್ಷ್ಮಿ ಚಂದ್ರಬಿಂ
ಬದೊಳತಿ ಪೂರ್ಣ[1]ಲಕ್ಷ್ಮಿ ನವಯೌವನಲಕ್ಷ್ಮಿ ವಿಳಾಸಲಕ್ಷ್ಮಿಯಂ
ದದಿನಡಿಯಿಟ್ಟುದಂದು ವಸುದೇವನ ಚೆಲ್ವಡರ್ದಂಗಯಷ್ಟಿಯೊಳ್ ||೧೩೨||

ವ|| ಅಂತು ಬಂದ ಯೌವನ ವಸಂತದೊಳ್ ವಸುದೇವಕುಮಾರಂ ತನ್ನೋರ ಗೆಯ ಚೆನ್ನಿಗರುಂ ಚದುರರುಮಪ್ಪ ರಾಜಕುಮಾರರುಮಂ ಮಂತ್ರಿಪುತ್ರರುಮಂ [2]ಕೂಡಿ ಕೊಂಡು ವನ[2]ಕ್ರೀಡೆಗೆ ವಿನೋದಜಳಕೇಳಿಗಳಂ ಮೊಗಸಲೊಡನೆ

ಅತನುವನತಿಶಯದಿಂ ಖತು
ತತಿಗಳ್ ಬಳಸುವವೊಲೆಳಸಿ ಬಳಸಿದರಂತಾ
ಕ್ಷಿತಿಪತಿಸುತನಂ ವಿಟಪಂ
ಡಿತ ನಟ ಪರಿಹಾಸಕಾದಿ ನರ್ಮಸಹಾಯರ್ ||೧೩೩||

ಪರಗುಣಗಣಮಂ ಸೈರಿಸು
ವರಮಗನಂ ಮನುಜರೊಲ್ವರಣಮೆಲ್ಲರ್ ಮ
ಚ್ಚರಿಪನನುಡುನಿಕರಂ ಖರ
ಕರನಂ ಬಿಸುಟಮೃತಕರನನೋಲಗಿಸುವವೊಲ್ ||೧೩೪||

ವ|| ಒಂದು ದಿವಸಂ ಬಂದ ನಂದನವನಮಂ ತಳರ್ದು ಬರ್ಪಂತೆ ತಳ್ತುಪಿಡಿದ ಪೀಲಿಯ ತಟಿ[3]ಯ ತುಱುಗಲೊಳಗೆ

ಬಳೆದಿರೆ ವೃತ್ತಪಾಠಕ ಶುಕಧ್ವನಿ ತಳ್ತಿರೆ ಮತ್ತಕಾಮಿನೀ
ಕಳಕಳ ಕೋಕಿಳಾವಿರುತಿ ಗರ್ಭಿಕ ಗಂಧಭರಕ್ಕೆ ತುಂಬಿಗಳ್
ಬಳಸಿರೆ ಪೂವಿನಂತೆ ಮುಗುಳಂತಿರೆ ಕೆಂದಳಿರಂತೆ ಮಾಣಿಕಂ
ಗಳ ತೊಡವೊಪ್ಪೆ ಬರ್ಪನೊಸೆದಾ ವಸುದೇವ ವಸಂತವಲ್ಲಭಂ ||೧೩೫||

ವ|| ಮತ್ತೊಂದು ದಿವಸಂ

ಕುಂಕುಮದಣ್ಪನೆಯ್ದೆ ಕಳೆದಾಗಳೆ ಚಂದನದಣ್ಪನಿಕ್ಕವಂ
ಸೋಂಕುವ ಬಾಳಕೇಳಿ ಮೃಗಮಂ ತೆಗೆದಪ್ಪುವನಂಗಕಾಂತಿಯಂ
ತಾಂ ಕುಡುಕಿಕ್ಕು[3]ವಂ[3] ಯುವತಿನೇತ್ರಚಕೋರದ ಮಕ್ಕೆ ಭೋಂಕನೇ
ಣಾಂಕನ [4]ಕೆ[4]ಯ್ತದಿಂ ಕೃತಕಶೈಲಮನೇಱಿ ಮರೆಂದ್ರಚಂದ್ರಮಂ ||೧೩೬||

---

1 ರ್ಣ (ಜ) 2 ಕೂಡಿಕೊಂಡು ನವ (ಚಟಣ) ಕ್ರೀಡಾವನ (ಜ) 3 ಕುಂ (ಚಜಣ) ಕಂ (ಡ) 4 ಕ (ಚಟಡಣ)

ವ॥ ಮತ್ತೊಂದು ದಿವಸಂ

ಕತ್ತುರಿಯಣ್ಕೆ ಕೆಂದಳಿರ ಕೆಯ್ಸೊಡೆ ಕೇವಗೆಯೊತ್ತೆ ಪೂವಿನಿಂ
ದೆತ್ತಿದ ವಿಾನಕೇತನಮಶೋಕೆಯ ಸೋರ್ಮುಡಿಕಟ್ಟು ಕೂಡೆ [1]ತೊ[1]
ಗುತ್ತರಲಂಬನಿಕ್ಷುಧನುವಂ ಗೊಲೆಗೆತ್ತಿ ತೊ[2]ಟಿಲ್ವ[3]ನಂಗನಾ
ಚಿತ್ತದೊಳಂ ಪುರಾಂತರದೊಳಂ ವಸುದೇವ ಕುಮಾರಮನ್ಮಥಂ ॥೧೩೭॥

ಪುಗುವನದೊರ್ವೆಯುಂ ನಗುವ ದೃಗ್ವನದಂತಿರೆ ತೊಟ್ಟ ಪೂವಿ[4]ನಂ[4]
ಗಿಗೆ ಪೊಳೆದೊಪ್ಪಿ ಕೆಂದಳದೊಳಂಕುಶವಜ್ರವಿಭಾದ್ರಿಭೇದಿ ಮು
ತ್ತುಗಳಗುಳಂ ತಳತ್ತಳಿಸುವೇಱಿದ ದಂತಿ ಸುರೇಂದ್ರದಂತಿಯಂ
ನಗೆ ಸುರರಂತೆ ನೋಡೆ ಜನಮಾ ಪೊಟಿಲಂ ವಸುದೇವ ವಾಸವಂ ॥೧೩೮॥

ವಿದಳಿತ ಪದ್ಮಲೋಚನ ನಮೋ ಗರುಡಧ್ವಜ ಕಾವುದೆಂದು ಲೋ
ಕದ ಜನಮೆಲ್ಲಮೊಲ್ದೆಱಗೆ ಕಟ್ಟಿದ ಚೌರಿಯೆಱಂಕೆ ಮೊ[4]ಗ[4]ರ
ನ್ನದ ಮೊಗಮು[5]ಟ್ಟ[5]ನಾಂತ ಮೊಗಮಾಗಿರೆ ತಾರ್ಕ್ಷ್ಯನನೇಱುವಂ ಕದ
ಕ್ಕದಿ[6]ಸೆ[6] ನಿರರ್ಗಳಂ ಪೊಳೆದು ಪಾಱುವಿನಂ ವಸುದೇವವಲ್ಲಭಂ (?) ॥೧೩೯॥

ಕಾಜಿನ ಬೀಣೆಯಂ ಕಳೆದುಕೊಂಡು ತಳಂಗಳನೆತ್ತಿಕೊಂಡು [7]ನು
ಣ್ಪೋ[7]ಜೆ ಬೆಡಂಗು ಬಣ್ಣ ಸರಮೊಪ್ಪೆ ಕರಂ ಯತಿ [8]ಧಾತು[8] ಮೂರ್ಛನಾ
[9]ಬ್ಯಾ[9]ಜದೊಳಾಡೆ ಕೂಡೆ ಕುಡುಪುಂ ಬೆಗಲುಂ ಕೃತಕಾದ್ರಿ ಕೂಟದೊಳ್
ಬಾಜಿಸುವಂ ಜಸಂಬಡೆಯೆ ಕಿನ್ನರನಂತೆ ನರೇಂದ್ರನಂದನಂ ॥೧೪೦॥

ವಾರಿಜಮನಿಟ್ಟು ಕಿವಿಯೊಳ್
ವಾರುವಮಂ ಪೀಲಿಯಿಂದೆ ಪಕ್ಕ[10]ರಿ[10]ಸಿ ಮನೋ
ಹಾರಿಯೆನೆ ಮೂಱುಮೊಗದ ಕು
ಮಾರನವೊಲ್ ನೃಪಕುಮಾರನೇಱುವನೊಲವಿಂ ॥೧೪೧॥

ಇಂತು ಕಡುಚೆಲ್ವ[11]ನಾ[11]ತನ
ನಿಂತಾಯ್ತಾದೆಸೆವ[12]ಪಸದ[12]ನಂ ವಸುಮತಿಯಂ
ಕಂ[illegible]ಗೆ ನನೆಗಣೆಯಲರ್ವಿ
ಲ್ಲಂ[illegible] ಸೋಲಿಸುವುದರ್ಕೆ ಸಂದೆಯಮುಂಟೇ ॥೧೪೨॥

---

1 ಕೊ (ಡಣ) 2 ದಳ್ದ (ಚ) ದಳ್ವ (ಟಡಣ) 3 ಸಿಂ (ಣ) 4 ಗು (ಜ) 5 ಟ್ಟು (ಚ) ಟ್ಟಿ (ಜ) 6 ಸಿ (ಜ) 7 ನೋಳ್ಪೋ (ಚಟಡಣ) 8 ದಾರು (ಜ) 9 ಪೋ (ಚಟಡಣ) 10 ರ (ಚಟಣ) ಲಿ (ಡ) 11 ನಾಂ (ಚಟಡಣ) 12 ಸದನ (ಚಟಡಣ)

ಆವೊಳ್ಗಾವುದು ಕೆಯ್ತ್ತಮಟ್ಟಿ ಮತಿಗೆಟ್ಟಾವಾಕ್ಕೆ ತೋ[1]ಳ[1]ಪ್ಪಳೊ (?)
ಲ್ದಾವೊಂದಾಕೃತಿಗಾವೊಳಾವೆಸೆವ ನೇಪಥ್ಯಕ್ಕೆ ಕಣ್ಸೋಲ್ವರಾ
ಭಾವಂ ಚೆಲ್ವೆವೊಲಂದ ಮಚ್ಚಿಱಿದವೊಲ್ ಶೃಂಗಾರಮೊಲ್ದಿರ್ದವೋಲ್
ತೀವಿರ್ದಾ ರತಿರತ್ನ ಮೇರುಗೆ ಮರುಳ್ಗೊಂಡಿರ್ದರಬ್ಜಾಕ್ಷಿಯರ್ ||೧೪೩||

ಅವಳನೆಸುವೆಂ ಕೆಡಪುವೆ
ನಾವಳನಿನ್ನಾವಳಂ ಪೊರಳ್ಚುವೆನೆನುತುಂ
ತೀವಿ ತೆಗೆದಿಕ್ಷುಧನುವಂ
ಕಾವಂ ಕಟಕಕ್ಕೆ ಸು[2]ರಿಗೆ[2]ಗಿಟ್ಟವೊಲಾದಂ ||೧೪೪||

ಅಲ[3]ರ್ಗಣ್ಗಂ[3] ಬಾಳವೆಂದಿಕ್ಷುವ ಧನುಲತೆಯಂ ತುಂಬಿಯಂ ಬಿಟ್ಟು ಪಂಕೇ
ಜಲತಾಜ್ಯಾಲೇಖೆಯಂ ಕೆಂದಳಿರ ತಳಮಿದೇಕೆಂದು ಹಸ್ತಾಗ್ರದೊಳ್ ಪ
ಚ್ಚೆಲೆಯಂ ಕೊಂಡಿಟ್ಟು ಕಟ್ಟುತ್ತೊರೆದು ಸಿಡಿವಿನಂ ಕಯ್ಬೆರಲ್ಪೊಂಗೆ ಮುಂಗೈ
ಸುಲಿವನ್ನಂ ಕಾಮನೆಚ್ಚಂ ಪಡಲಿಡುವಿನೆಗಂ ಪೌರನಾರೀನಿಕಾಯಂ (?) ||೧೪೫||

ಪುಸಿಯೆಂದಾದನದಿರ್ಪಿ ತಪ್ಪಿಸಿ [4]ಸ[4]ರಲ್ಮತ್ತೊಂದು ತಾಂ ಪೋಗೆ ನು
ಣ್ಬನೆಯಂ ಮುಟ್ಟದೆ ಮತ್ತಮೊಂದು ಕಣೆ ಕಲ್ಲಂ ತಾಗಿದಂತಾಗೆ ಕೊಂ
ಡಸಿಯಂಬೊಂದನೆ ದಡ್ಡವಿರ್ದ ಹೃದಯಂ ಜಾಳಾಂದರಂಬೋಪಿನಂ
ಬೆಸೆವೆಚ್ಚಂ ಕಡುವೇಸಿವೆಂಡಿರ[5]ನ[5]ದೇಂ ಕಾಮಂ ಛಲಗ್ರಾಹಿಯೋ (?) ||೧೪೬||

ಕಡುಗೆಚ್ಚುವಿರ್ದ ಮನಮಂ
ನಡವೊಡೆ ಬಿಸುಟರಲಸರಲನೀರದ ಸರಮಂ
ನಿಡುನನೆಯಂಬಿಂ ಕೆಡೆಕೆಡೆ
ಕೆಡೆಯೆಂದೆಚ್ಚಾರ್ದು ಕೆಡಪಿದಂ ಡಾಳಿಯರಂ ||೧೪೭||

ಕಂಟಣಿಪಿನಮಲರಿಸಿದಂ
ಕುಂಟಣಿಯರ ಕೊರಡುಗೊಂಡ ಮನಮಂ ಮದ[6]ನಂ[6]
ಗೆಂಟಾಗಿ ವಿಕಾಸಕ್ಕೆ ಮು
ರುಂಟಿದ ಮಲ್ಲಿಗೆಯನಲರಿಪಂತೆ ವಸಂತಂ ||೧೪೮||

---

1 ಳ್ತ (ಜ) 2 ರಗಿ (ಚಟಡಣ) 3 ರ್ವಲರ್ಗಳ್ (ಜ) ರ್ಗಣ್ಗಳ್ (ಟ) ಗರ್ವಲರ್ಗಳ್ (ಡ) 4 ಸಿ (ಚ) ಶ (ಟಣ) 5 ನಿ (ಚಟಡಣ) 6 ಮಂ (ಜ)

ಕಿಸುರಕಸಗಳೆದು[1]ಮೆ[1]ತ್ತಿಸಿ
[2]ಪೊಸಬಗೆ[2]ಯಂ ಪೂಸಿ ರಾಗರಸದಿಂ ಪೊಕ್ಕಂ
ಪುಸಿದಟಿ[ಂ]ವೆಂಡಿರ ಬೇಟಂ
ಬಿಸುಟಿರ್ದೆಯಂ ಸ್ಮರನೆ ಪುಗುನವೊಲ್ [3]ಪ್ರೊಸಮು[3]ನೆಯಂ ॥೧೪೯॥

ನಟ್ಟುದು ನೊಂದೆನೆಂದೆರ್ದೆಯನೊತ್ತಿಕೊಳುತ್ತುಮೆ ಬಂದೊಡೇನುಮಂ
ನಿಟ್ಟಿಸಿ ನೋಡಿ ಕಾಣದೆಲೆ ಸೋಡವೆ ಮಾಣದೆ ಕೇಟುಮಾರನಂ
ಪುಟ್ಟರೆ ಪೆಂಡಿರೆಂತೆನಗೆ ಹೂಹೆಯನೆಚ್ಚಪನೆನ್ನನೆಂದವಳ್
ಕುಟ್ಟನಿ ಕಯ್ಗಳಂ ಮುರಿದು ಬಯ್ದಳನಂಗನನಾ ಪ್ರಸಂಗದೊಳ್ ॥೧೫೦॥

ಅರಸಂಗೀತಂಗೆ ಕಣ್ಸೋಲ್ತುಬಳೆಯರವರೇನಿರ್ವರೋ ಮೂವರೋ ನಾ
ಲ್ವರೊ ಲೆಕ್ಕಂ ಲಕ್ಕೆಯುಂ ಕೋಟಿಯುಮೆನೆ ವಶವಾದಪ್ಪರೇಗೆಯ್ವೆನೊರ್ವಂ
ಸ್ಮರಕೋಟಾಕೋಟಿಯುಂ ಪೂಣ್ದಿಸಲೆ ಪಡೆವೆನೆಂದಂದು [4]ಪೆತ್ತಂ[4]ಕರಾಬ್ಜಾಂ
ಕುರ ಸತ್ಸಂದರ್ಭದರ್ಭಂ ಧೃತಸಕಲ ಕಲಾಗರ್ಭನಂಭೋಜಗರ್ಭಂ ॥೧೫೧॥

ವ॥ ಅಂತು ಪಡೆಯಲೊಡನೆ

ಜಿನನಂಘ್ರಿದ್ವಂದ್ವದೊಳ್ ಧೂರ್ಜಟಿಯ ಜಡೆಗಳೊಳ್ ಬ್ರಹ್ಮನುತ್ತಂಸದೊಳ್ ಕೃ
ಷ್ಣನ ಕೇ[5]ಶಾ[5]ದ್ದೇ[6]ಶಮೊಳ್ ಬಂದೆಱಗಿ ತುಱುಗಿ ಪುಷ್ಪೇಷುಚಾರಂ ನಭಂ ಪೂ
ವಿನ ಪಂದರ್ ಭೂತಲಂ ಪೂವಿನ ಪೊಸಪಸೆಗಳ್ ದೇ[5]ಸಿ[6]ವೆತ್ತಿರ್ಪಿನಂ ಪೂ
ವಿನ ತೇರಂತೆಚ್ಚುವಂತಾ ಪುರವರ ವನಿತಾಸೈನ್ಯಮಂ ಕಾಮಸೈನ್ಯಂ ॥೧೫೨॥

ಅಂತೆಸುವ ಮದನನಂ ಕಂ
ಡಂತೆಯ್ದಿಪೆನಿವರ್ಗೆ ಸರಲನೆನಿತುಂ ನನೆವೂ
ವಂ ತುಱುಗೆ ಪನಸ ಪಿಪ್ಪಲ
ಸಂತತಿಗಳೊಳಂ ವಸಂತರಾಜಂ ಪಡೆದಂ ॥೧೫೩॥

ನಿಕರಂ ತೆಂಕಣಗಾಳಿ ನಾಗರಿಕನಾಗಲ್ ದರ್ಪಕಂ ಪೀರಮ
ರ್ದಕನಾಗಲ್ ಮಧುಮಾಸನೊಲ್ದು ವಿಟನಾಗಲ್ ಚಂದ್ರಬಿಂಬಂ ವಿದೂ
ಷಕನಾಗಲ್ ಪರಿಹಾಸಕಂ ಕುಮುದಿನೀವೃಂದಕ್ಕೆ ಸೌಭಾಗ್ಯನಾ
ಯಕನಾದಂ ಶಠಧೃಷ್ಟ ದಕ್ಷಿಣ ಗುಣಂ ಶೃಂಗಾರ ಕಾರಾಗೃಹಂ ॥೧೫೪॥

---

1 ಮೊ (ಚಟದಣ) 2 ಪೊಸ ಬಸೆ (ಚಡ) ಪಸೆಬಸೆ (ಟಣ) 3 ಪಾಟ್ಟು (ಚಟಡಣ)
4 ಪದ್ಮಾ (ಚಟಡಣ) 5 ದೇ (ಚಟ) ಕೇ (ಡಣ) 6 ಸಿ (ಚಟ)

ಇದು ಮೃದುಪದಬಂಧುರ ಸರಸ್ವತೀ ಸೌಭಾಗ್ಯವ್ಯಂಗ್ಯ ಭಂಗಿ[1] ನಿಧಾನ ದೀಪವರ್ತಿ ಚತುರ್ಭಾಷಾ ಕವಿಚಕ್ರವರ್ತಿ ನೇಮಿಚಂದ್ರಕೃತಮುಂ ಶ್ರೀಮತ್ಪ್ರತಾಪ ಚಕ್ರವರ್ತಿ ವೀರಬಲ್ಲಾಳದೇವ ಪ್ರಸಾದಾಸಾದಿತ ಮಹಾಪ್ರಧಾನ ಸೆಜ್ಜೆವಳ್ಳ ಪದ್ಮನಾಭದೇವ ಕಾರಿತಮುಮಪ್ಪ ನೇಮಿನಾಥಪುರಾಣದೊಳ್ ವಸುದೇವ ಪ್ರತಾಪ ವರ್ಣನಂ

**ಚತುರ್ಥಾಶ್ವಾಸಂ**

ಸಮಾಪ್ತಂ

1 ಗಿನಿ (ಚಟಡ)

# ಪಂಚಮಾಶ್ವಾಸಂ

ಶ್ರೀಯಂ ಸರಸತಿಯಂ ಜಯ
ಜಾಯೆಯನಾ ವೀರಲಕ್ಷ್ಮಿಯಂ ಜಸವೆಣ್ಣಂ
ಜ್ಯಾಯನೆನಿಱಗಿಸಿದ ನೀಱಂ
ಸ್ತ್ರೀಯರನೆಱಗಿಸುವುದರಿದೆ ಮನುಜಮನೋಜಂ ||೧||

ಅರಸ[1]ನಱಿ[1]ದಾಳ್ವ[1] ನಗರದ
ತರುಣಿಯರುಡೆಯು[2]ಚ್ಚಿರ್ವೋ[2]ಗದೊರ್ವನೆ ಸುಮ[3]ನ
ಶ್ಯ[3]ರನೇಂ ಶೂರ[3]ನೆ ಚೇತಃ[4]
ಪುರಮಂ ನಿರ್ಧಾಮಧೂಮಮಾಗಿರೆ ಸುಟ್ಟಂ ||೨||

ವ|| ಎಂಬಿನಮಾ ಕುಮಾರಂ ಕಣ್ಗೆಕ್ಕಿದ ಠಕ್ಕುಂ ಮನಕೆಕ್ಕಿದ ಮೂರ್ಛೆಯುಂ ಸುಗತಿಯರ್ಗಿಕ್ಕಿದ ಸೊರ್ಕುಮೆನೆ ಬರ್ಪುದಂ ಕಂಡು ಸೌಭಾಗ್ಯಕಾರ್ತಿಯರ್[5] ಸೌ[5]ಭಾಗ್ಯಮಂ ಸೇಸಿಕ್ಕಿಯುಂ ಚಲ್ಲಕಾರ್ತಿಯ[6]ರ್ ಚಲ್ಲ[6]ದಿಂ ನಿವಾಳಿಸಿ ನಾಣಂಬಟ್ಟ[7]ದೀ(ಡಾ ದಿಯುಂ ಸೋಲಕಾರ್ತಿಯ[7]ರ್[7] ಕಣ್ಸೋಲಮಂ ಕಾಣ್ಕೆಗೊಟ್ಟು ಮನಮಂ ನೆಚ್ಚುಗುಡೆಯುಂ ರಾಗರಸದೊಳ್ಮುಳುಗುತ್ತಂ[8]ತೆ[8]ಸೆಕಾರ್ತಿ[8]ಯರ್ತೆಪ್ಪಂಬಿಡಿವಂತೆ ತಾಪದಿಂ ಮ್ರ್ಯಗಾಳನಾಳದ ಪ್ಪೊರಳಯುಂ ಪ್ಪೊರಳ್ದು ತರ್ಕಯಿಸಿಯುಂ [9]ತೀ[9]ಯಕಾರ್ತಿಯರ್ತಾಯಿಲ್ಲದ ಕೂಸಿನಂತೆ ಬಾಯುಂಬಿಡೆಯುಂ ಕ[10]ಟ್ಟೀ[10]ಯಕಾರ್ತಿಯರ್ಕಟ್ಟು ಮನಮನ ಸೞುವಂತೆ ಕಾಮಪಿಶಾಚದಿಂ ಪುಗದೆಡೆಯಂ ಪುಗೆಯುಂ ಪೊಸವೇಟಕಾರ್ತಿಯರ್ತಮ್ಮ ಕನ್ನೆವೇಟ[11]ಮ[11]ವನೊಳಾಗದೆ ಕೆಟ್ಟೆವೆಂದು ಕಟ್ಟುಗೆಡೆಯೆಯುಂ ಚೇಟಿಗನಿತು ಬೇಟಮಾಡೊಡಂ ಮನವಾವೆಡೆಗಮೆಯ್ದದೆಂದಲವರಿಸುವ ಕಡುವೇಟಗಾರ್ತಿಯ ಕಾತರಿಕೆಯಂ ಕಳೆಯಲ್ಪಡೆದೆವೆಮ್ಮ ಮಕ್ಕಳ [12]ಮಕ್ಕಳ್ಗಾವಗ[12]ಮೀ ಬೇಟಮೆ ಸಾಲ್ಗುಮೆಂದು ಪ[13]ಟ[13]ವೇಟಮಂ ಪೊಕ್ಕುಱಗೊಕ್ಕು ಪೆಡೆಗೆ ಹಾರಂ ಪೊಸವೇಟಮಂ ಪೊಯ್ದು [14]ಕೊಳ[14]ಲುಂ ಮತ್ತಿನ ಗಂಡರ್ಮೋಱಿಯಲ್ಲರೆಂದು ಮನದೊಳಗೆ ಬಟ್ಟೀನೀರ್ಗುಡಿದ

---

I ರೞಿದಾಳ್ವ (ಜ) ಡಾಳುವ (ಟಡ) 2 ಬ್ಬೆದೊಂ (ಗಚಟಡ) ಚ್ಚಿರ್ವೋ (ಙ) 3 ನೋಠ (ಚಟಡ) ನೇಠ (ಙ) 4 ನೊ ತೀತಃ (ಚಡ) ನೊ ವೀರನೊ (ಜ) 5 ಶ. ಸ್ತ್ರೀ ಮಂ ಸೌ (ಜ) 6 ರ್ಕಳ ಚೆಲ್ಲ (ಕಗಟಡ) ರ್ ಕಣ್ಣಾಳ (ಜ) 7 ರ್ಕಳ (ಕಗಟಡ) 8 ಸೆ(ಚಟಡಙ) 9 ಆತೀ (ಜ) 10 ಟ್ಟಾ (ಜ) ಟ್ಟ (ಡ) 11 ವಮಿ (ಚಡ) ಮಿ (ಜ) 12 ಮಕ್ಕಳವೆಗ್ಗ (ಚಟಡ) ಕಳ್ತಲಿಗ (ಜ) 13 ಳ (ಜ) 14 ಕೋಟಿ (ಚಟಙ)

ಬದ್ದೆಯರೀ ಭವಮಿಂತೆ ಪೋದುದು ಮಱುಭವದೊಳಾದೊಡಮಾತನೊಳೆ ಬೇಟಮ
ಕ್ಕೆಂದು ಪಱಿಸಿ ಪರಿಚ್ಛೇದಿಸಿ ಕಾಮಾಗ್ನಿ[1]ಯಂ ಪು[1]ಗೆಯುಂ ಸತಿಯರ್ ಪತಿವ್ರತಿಕೆಯಂ
ನಂಬಿಯ[2]ಗಲನಿಕ್ಕಿ ತೂ[2]ಱಿಯೆಯುಂ ಕುಂಟಣಿಯರ್ ಸೋಲ್ತು ಸವಿಗಂಡು ಬೇಟಕ್ಕೆ
ಕಂಟಕರಾದೆವೆಂದು [3]ನೀಕರಿಸ[3]ಯುಂ ಪೞವೆಂಡಿರೆಮ್ಮ ದಿವಸದೊಳೀತಂ ಪುಟ್ಟದೆ
ಪಱಿಜುಂ ಪ್ರಾಯಮುಂ ಸುಸಿಲುಂ ಬಸನಮುಂ ಬಱುದೊಱಿಯೋದುದೆನೆಯಂ ಸಿರಿ
ಯೊಡೆಯರ ಪೆಂಡಿರೆಲ್ಲಂ ಪರಿಚಾರಕಿಯರಂ ಕೂಡಿಕೊಂಡುಜ್ಜುಗಾಪಿನಜ್ವರಂ ಪಿಡಿದು
ರುಳ್ಚಿ ಚಿನ್ನಸಂಕಲೆಯಿಂ ಪೆಡಗೈಗಟ್ಟಿ ಪಲ್ಲಿಲಿವಾಯೊಳ್ ಕ್ರೀಡಾಕಂತುಕಮಂ ತೂಂತಿ
[4]ಕಾಲ್ದುಡು[4]ಗೆಯಂ ಕಳೆದೀಡಾಡಿ ಕಣ್ದೋಱಿ ಮಾಸಿದ ಸೀರೆಯಂ ಮುಸುಂಕಿ ತೊಟ್ಟಿ
ರೊಳಗಣ ತೊಟ್ಟಿರಾಗಿ ಬೀದಿವರಿಯೆಯುಂ ಜೈನೇಯರ್ಜಿನಪತಿಯೆ ದೈವಮೆಂಬ
ನಂಬುಗೆಯೆ ಸಾಲ್ವುದು ಪರಪುರುಷಪರಿತ್ಯಾಗವ್ರತಮಂ ಗುರುಗಳಂ ಬೇಡಿಕೊಂಡು
ಬಿಸುಡಿಕೊಂಡಪ್ಪೆವೆಂದು ಮನಂದ[5]ರೆ[5]ಯುಂ ಲೋಭಗುಂಟಣಿಯರ್ ಗಾಯಿಲೆಯಪ್ಪ
ಮಕ್ಕಳನೋವರಿಯೊಳ್ನೂಂಕಿ ಪಡಿಗೆತ್ತು ಪೊಡೆಕಟ್ಟಂಕಟ್ಟಿ ಮುಸುಂಕಿಟ್ಟು ಕುಳ್ಳಿರೆಯುಂ
ಆಕೆಗಳ ಕೊಯ್ದಿಕ್ಕಿದ ಕುರುಳ್ಗಳಿಂ ತುಂಬಿಯ ಬಣಂಬೆಯನೊಟ್ಟಿದಂತಾಗೆ
ಕಡಿದಿಕ್ಕಿದ ಬೆರಲ ಕಂಡಿಕೆಗಳಿಂ ಪಸಿಯರಸಿನದ ಕೊಂಬನುಡಿದು ಸುಣ್ಣಂದೊಡೆ
ದೀಡಾಡಿದಂತಾಗೆ ಕಿಟ್ಟಿಕ್ಕಿದ ಕೆಂಬಲ್ಗಳಿಂ ದಾಳಿಂಬದ ಬಿತ್ತಂ ರಾಸಿಗೆಯ್ದಂತಾಗೆ
ಕೆಱುವೆರಲ್ಗಳಿಂ ಕಚ್ಚುವ ಮುಖಮುಕುರಂಗಳ್ಚಂದ್ರಮಂಡಲಂ ಪಾವಿನ ಪೆಡೆಯಂ
ನುಂಗುವಂತಾಗೆ ಬಯಲ್ದೊಱೆ[6]ಯನೀಸು[6]ವ ಬಾಲೆಯರಿಂ ಸ್ತ್ರೀರಾಜ್ಯಮಂ ಸೂಱೆ
ಗೊಂಡುಟ್ಟುದಂ ಸುಲಿವಂತಾಗೆ ಸ್ಮರಪರಿತಾಪಕ್ಕೆ ಪಕ್ಕಾಗಿ ಪೊಕ್ಕು ಪೊರಳ್ವ ನರಳ್ವ
ನಾರಿಯರ ನೆರವಿಗಳಿಂ [7]ಬ[7]ನಂಗಳೆಲ್ಲಂ ಮದನ ವ್ಯಾಧನಾಱಿಡಿಗೊಂಡಡವಿಯಂತಾಗೆ
ಕಮಳಕೇಸರದ ಕಿಸುವುಡಿಯಿಂ ಕೆಚ್ಚನಿರ್ದ ನೀರೊಳ್ಬಿರ್ದ ನೀರರುಹನಾಳಂಗಳ
ನೊಟ್ಟಿಕೊಂಡು ಬೆಂಡುನೆಗೆದ ಬೆಡಂಗಿಯರಿಂ ತಣ್ಮಡುಗಳೆಲ್ಲಂ ನೆತ್ತರುಂ ಕರುಳುಂ
ಸುರಿಯೆ ಕಾಮಕಿರಾತಂ ಕೊಂದಿಕ್ಕಿದ ಮಡುಗಳಂತಾ[8]ಗೆ ತ[8] ಪಿಂಗೆ ಪಿಂಗಲಾಱಿದಂ
ಗನೆಯ ಪೂಟ್ದು ಕೊಂಡ ಪುಟ[9]ಲೆ[9]ಲ್ಲಂ ಚಿತ್ತಜಚೋರನರೆಯೆಱಗಿಱಿದು ದರಿಗೆಡಪಿ
ದಂತಾಗೆ ಕಾಪೞಿದು ಪೊೞಲೊಳುಳ್ಳ ಬೆಲೆವೆಂಡಿರುಂ ಕುಲವೆಂಡಿರುಂ* ಮರುಳ್ಗೊಂ
ಡುದಂ ಕಂಡು ಪಾರ್ವರೆಲ್ಲರುಂ ‘ ಗೃಹಿಣೀಗೃಹಮುಚ್ಯತೇ ’ ಎಂಬುದು ಗರತಿಯಿಲ್ಲದೆ
ಗೃಹಮೆಲ್ಲಿತ್ತೆಂದು ಗಾರ್ಹಸ್ಥ್ಯಕ್ಕೆಳ್ಳನೀರೆಱೆದು ಪರದರೆಲ್ಲಂ ಪೆಂಡಿರ್ಜೋಡಾ[10]ಗ[10]
ಪರದಾಡುವುದರಿದೆಂದಂಗಡಿಯ ಪಡಿಯಂ ಕೆತ್ತು* ತಳವರ್ಗಮೆಲ್ಲಂ ತಲೆಯಂ ಪೆಂಡತಿ

---

1 ಯಂ ಪೊ (ಗಚಟಡ) ಯಿಂ ಪೊ (ಣ) 2 ಲಗಸಿಕ್ಕಿತೊ (ಜ) 3 ನಿರಾಕರಿಸಿ (ಚಟಡಣ) 4 ಕೆಟ್ಟತುಡು (ಜಣ) ಕಾಲ್ದೊಡಿ (ಡ) ಕಾಲ್ಬುದಿ (ಣ) 5 ರಿಯೆ (ಣ) 6 ನೀಗು (ಕ) ಯೆನಿಸು (ಗ) 7 ಜ (ಜ) 8 ಗಿರೆತ್ತಂ (ಚಡಣ) ಸಿರೆತ್ತಂ (ಟ) 9 ಲ್ಗಳೆ (ಚಟಡಣ) 10 ಡೆ (ಕಚಟ) * ಕೆಟ್ಟಿತ್ತು (ಜ)

ಯುಮಂ ಕಂಡುಪೋಲ[1]ವಿದೇಕೆಂ[1]ದು ಕೈದು[2]ವನಿಂಬಿ[2]ಟ್ಟು ಪುರಜನಮುಮಂ ನೆರಪಿ
ಕೊಂಡು ಬಂದು ಸಮುದ್ರವಿಜಯಂಗೆ ಪುಯ್ಯ[3]ಲ್ಚಿ[3] ಮೆಯ್ಯನಿಕ್ಕಿ ತಂತಮ್ಮ ಮಕ್ಕಳಂ
ಮುಂದಿಡುವುದುಂ ಆ ನೃಪಂ ನೋಡಿ ವಸುದೇವನ ದೇಹಮನಗೆವೊಯ್ದಂತೆಯುಂ
ಪಱಿದು ಪತ್ತಿಸಿದಂತೆಯುಂ ಪೊಕ್ಕಳವಿಾ ಮಕ್ಕಳೇಕಾದುವೆಂದು ಬೆಕ್ಕಸಂಬಟ್ಟು
ನೋಡೆ ನುಡಿಯಲವಸರಂಬಡೆದು ಬಳಸಿದ ವಂದಿವೃಂದಮುಂ ಸೇವಕಸಮೂಹ
ಮುಂ ಎನ್ನೆಮ್ಮ ಪುತ್ರಪೌತ್ರಾದಿಗಳುಮಿನ್ನರೆಂದಱಿವುದೀಪುರದ ಪುಣ್ಯಾಂಗನೆಯರುಂ
ಮನಸಿಜನಂತೆ ಮನದೊಳಿರ್ಪ ವಸುದೇವನ ರೂಪು ಗರ್ಭದೊಳ್ಬಿಂಬಿಸಿ ಬಿತ್ತಾದಂ
ತೆಯುಮಚ್ಚೊತ್ತಿದಂತೆಯುಮಾತನಂತಪ್ಪ ಪುತ್ರರಂ ಪಡೆವರೊತ್ತೆಯ ಗೂಂಟಂ
ಸೊಡರಿಟ್ಟೇಱುವಂತೆರವಿನ ಸಿರಿಯನಱಿದು ಪೊಟಲೊಳಂ ಪೊಱವೊಟಲೊಳಂ ಬೀದಿ
ಯೊಳಂ ಅಂಗಡಿಯೊಳಂ ಕೇರಿಯೋಳಂ ಸೂಳೆಗೇರಿಯೊಳಮೆಲ್ಲಿ ನೋಟಪ್ಪೊಡಂ ಕಾಮ
ದೇವನೆ ಬ[4]ವಣಿ[4]ಗೆ ಬಂದಂತೆ ಬರ್ಪ ವಸುವೇವನನೆ ಕಾಣಲಕ್ಕುಮಿಲ್ಲಿಂ ಪೇಟೆ ದೇವರ
ಱವಿರೆಂದುಸಿರದಿರ್ಪುದುಮರ[5]ಸನವರಂ[5] ಸಂ[6]ತಸಂ[6]ಬಡೆ ನುಡಿದು ವಿಸರ್ಜಿಸಿ ವಸು
ದೇವಂಗಾಗಳೆ ಬಱಿಯಟ್ಟಿ ಬರಿಸಿ ಊರುಬ್ಬೆಯಾದ ತಮ್ಮನಗುರ್ವಿನುರ್ವಿಂಗುಬ್ಬೆ
ಗಂಬಟ್ಟು[7]ಬ್ಬರ[7]ವರಿದ ಸೊಬಗಿಂಗೆ ಸಂತೋಷಂಬಟ್ಟು ತೆಗೆದು ತಟ್ಟಿಯಿಸಿ ತೂಪಿಱಿದು
ಕೆಲದೊಳ್ಕುಳ್ಳಿರಿಸಿ ಬಾಯ್ವಾಯೊಳ್ ತಂಬುಲಮನಿಕ್ಕಿ ಮೆಲ್ಲನಿಂತೆಂದಂ

ಪೃಥ್ವೀವೃತ್ತಂ॥ ಇದೇಕೆ ಮುಖಚಂದ್ರನೀಪಗಲ ಚಂದ್ರನೊಂದಂದಮಾ
ಯ್ತಿದೇಕಧರಪಲ್ಲವಂ ವಿಧುರಪಲ್ಲವಚ್ಛಾಯಮಾ
ಯ್ತಿದೇಕನುಜ ನಿನ್ನ ಮೆಯ್ ಪೊಸೆದ ಪೂವಿನಂತಾದುದಾ
ನಿದಂ ಬಗೆದೆನಾಡುವೋ ಬಿಸಿಲೊಳೀಗಳಬ್ಜೇಕ್ಷಣಾ ॥೩॥

ಇಂತು ತೊಟಿಲ್ದಲ್ಲವೆ ನಿನ
ಗೆಂತಿರದೇ[8]ನೆ[8]ಮ್ಮ ನೀರೊಳಂ ನೆಟಲೊಳಮೊ
ಲ್ದಂತೆವೊಲುಟ್ಟುಂ ತೊಟ್ಟುಂ
ಸಂತಸದಿಂ ಪೂವಿನಂತೆ ಸುಖಮಿರಲಾಗಾ ॥೪॥

ವ॥ ದೇವಕುಮಾರರುಂ ರಾಜಕುಮಾರರುಮಾರ್ಕಂಡರಾರ್ಕೇಳ್ದರೆಂಬತಿರ
ವೇಟ್ಕಿಂ ತಿಟ್ಟನೆ ತಿರಿದು ಬಟ್ಟಸರಿವಂದೊಡೆ ಮೆಯ್ಯಬಣ್ಣಮುಂ[9]ಪುಣ್ಣ[9]ಮುಮರಿಸಿನದ
ಪಿಂಜಿಯಂತೆ ಪಾಱಿಪೋಕುಂ ಲೋಕದ ಕಿಸುರುಂ ಕಣ್ಣಿಂಜಲುಂ ಪತ್ತುಗು

---

1 ಪೆಂ (ಚಟಡಣ) 2 ವಂ ಬಿಸು (ಜ) 3 ಲ್ಚೆ (ಚಟಡಣ) 4 ಣ್ಣಿ (ಚಟಡಣ) 5 ಸಂ ಅವರ (ಚಟಡ) 6 ತೋಷಂ (ಚಟಡಣ) 7 ಬೇರು (ಜ) ಬರ (ಡ) 8 ಕ (ಚಜಡ) 9 ಬೊಲ್ ಮರಿ (ಗಚಟಡ) ರೊಲ್ವರ (ಣ)

ಮಿನ್ನೆಂದುಂ ಮನೆಯ ಪೊಸಂತಿ[1]ಲಂ[1] ಪೋಱಮಡಲಾಗದು ನೀನೆತ್ತಲಾನುಮಲಸಿಕೆ
ಯಾದೊಡೆ

ಹರಿಯದೊಳಾಡುವಮಾಡರೆ ಗೃಹಾಂಗಣದೀರ್ಘಿಕೆಯಲ್ಲಿ ಹಂಸನಂ
ತಿರೆ ಗೃಹವೇಣಿಕಾಕುಟಿಲ ನಿಃಕುಟದಲ್ಲಿ ವಸಂತರಾಜನಂ
ತಿರೆ ತೊಳಪೀ ಸುವರ್ಣಕೃತಕಾಚಳ [2]ಮೇರುವಿನಲ್ಲಿ[2] ದೇವನಂ
ತಿರೆ ವಸುದೇವ ನೀನೆಸಗು ನಿನ್ನ ವಿಹಾರವಿನೋದಮಂ ಗಡಾ ||೫||

ವ|| ಎಂದು ಸಾ[3]ಭ್ರಾತ್ರ[3]ಸುಭಗ ಸಹಜಸ್ನೇಹದಿಂ ನಿಜಹೃದಯಮುಮಂ ಮಱಸಿ ತಮ್ಮ[4]ನುಮ[4]ಱದೊಡೆ ನೋಗುವೆಂದಾರುಮಱಿಯದಂ[5]ತೆ ಸಕಳ[5]ಸುಖ ಪರಿಕರಂಗಳಂ ಸಲಿಸಿ ಮನಮಂ ಸೆಱಗೆಯ್ವಂತೆ ಸುಖದೊಳ್ ಸೆಱ[5]ಗೆಯ್ದನಾತನು ಮಣ್ಣಾನಿಕ್ಕಿದುಗುಱುಮಂ ದಾಂಟದೆ

ಮನೆಯೊಳಗಿ[6]ರ್ದು[6] ಪು[6]ರಸ್ತ್ರೀ
ಜನಮುಮನಾತ್ಮ ಪ್ರಭಾವದಿಂದಲರಿಸಿದಂ
ಘನಪಟಲದ ಪೊರೆಯೊಳಗಿ
ರ್ದಿನನಲರಿಸುವಂತೆ ಕಮಳಿನೀ ಕಾನನಮಂ ||೬||

ವ|| ಅಂತಿರ್ಪು[7]ದುನೊಂದು ದಿವಸಂ[7]

ಈಳಿಯ [8]ಸಾಂ[8]ದುಮಂ ಪಸಿಯ ಕತ್ತುರಿ ತೀವಿದ ಪೊನ್ನ ಸಿರ್ಪುಮಂ
ಗಾಳಿಯು ಮಣ್ಣದುತಡರೆ ಕೆಂದಳದಿಂದಮೆ ಮುಚ್ಚಿಕೊಂಡು ಮಾ
ಚಾಳಿಕೆಯೆಂದು ನಕ್ಕು ನಡೆಗೊಳ್ವಪೊಲಂತಪುರಕ್ಕೆ ಸ್ಪೋಪವಾ
ಚಾಳಿಯನೊರ್ವಳಂ ಚಟುಳ ಚೇಟಿಕೆಯಂ ವಸುದೇವವಲ್ಲಭಂ ||೭||

ವ|| ಹಿಡಿದು ಹಿಟಕಪಾಡೆ ಚೇಟಿಕೆಯೆಂದಳ್ ನೆಱಯೊಳಿರ್ದುಂ [9]ವಿ[9]ಕಾರ ತನವನೊಂದಂ ಕೋಡಗಂಗಳೊಳ್ಕಂಡೆನೊಂದಂ ನಿನ್ನೊಳ್ಕಂಡೆನೆನೆ ಕುತ್ತುವಡೆದಂತೆ ನೊಂದು ಪೇೞಾದೇನೆಂಬುದುಂ ನಂಬಿಸಿ ಬೆಸಗೊಳು[10]ತ್ತುಮಿ[10] [illegible] ಪೇೞದಿರೆ ಪೊಣ ರ್ವಕ್ಕಿಯುಂ ಪದ್ಮದಲರುವನಟಲಿಸಲೆಂದು ಕಟ್ಟಿಲೆಯಂ [11] [illegible] ಡ[11]ವಂತೆ ಕಯ್ಯ

---

1 ಲಿಂ (ಜ) 2 ದಲ್ಲಿ (ಚಟಡಣ) 3 ಚ್ಛಾತ್ರ (ಚಟಡ) ಭ್ರಾತ್ರ (ಣ) 4 ನನುನವು ([illegible]) [illegible] (ಣ) 5 [illegible] 6 [illegible] ಪು (ಚಡಗ) ದ್ರಪ (ಟ) 7 [illegible] 8 ಸಾ (ಚಟಡಣ) 9 ನಿಃ ವಿ (ಚಟಡ) ನಿಸ್ಸ್ನೇಪ ([illegible]) 10 [illegible] 11 [illegible]

ಕತ್ತುರಿಯಂ [1]ಕೊಂಡವಳ[1] ಮೊಲೆ[2]ಯಂ[2] ಮೊಗಮುಮಂ ತೊಡೆದು [3]ನೀಮ[3]ರ ಸಿಗಟ್ಟಿದ ಕತ್ತುರಿಯನಿವ[4]ಳ್[4] ತೋಳ್ತೊಡೆಯೊಳ್ತೊಡೆದಳೆಂದರಸರ್ಗೆ ಪೇೞ್ವೆಸೆನೆ ಭಯಮುತ್ತು ತೊಟ್ಟು ಮಲಹಾರಿಯದ (?) ತೊಟ್ಟಿನಂತೆ ನೀರಾಗಿ ಕಾಲ್ವಿಡಿದಾ ಸೆಂದುದಂ ಪೇ[5]ೞ್ವೆ ನೀಸಿ[5] ಪ್ರೋಟಿಲ ಪೆಂಡಿರೆ[6]ಲ್ಲರಂ ಮಱಿದು[6] ಮಱುಗಿಸಿ (?) ಮರುಳ್ಗೊಳಿಸಿ ನಿಚ್ಚಲ್ಮ[7]ಚ್ಚುಗೊಳಿಸಿದುದಂ ಕಂಡು[7] ಪೊಲಿಚರೆಲ್ಲರುಮೊಲ್ಲನುಲಿದು ಮೊರೆಯಿಟ್ಟು ಸಿನ್ನ ಮೊಱಗೆಟ್ಟ ನಡೆವಳಿಯ[8][ನಾಕ್ಷೇಪಿಸೆ][8] ನಿಮ್ಮಣ್ಣಂ ಮುನಿದು ನಿನ್ನನೀನೆವದಿಂ ಸೆಱೆಯಿಕ್ಕಿದನೆಂದು ಮತ್ತಮಿಂತೆಂದಳ್

ನಿಸ್ತ್ರಿಂಶ ಸಿನ್ನ [9]ಕತದ[9]ಸ  
ಮಾಸ್ತ್ರ[10]ಗ್ನಿ[10]ಯೊಳ[11]ಗ್ಗಿ[11] ವಿರಹಪಾಂಡುರಿತಪ್ರಾ  
ಷಸ್ತ್ರೀಯರಗ್ನಿ[12]ಶೋಭ[12]ದ  
ವಸ್ತ್ರದವೋಲ್ ಜಲಕನಾದರೇನಿದನಱಿಯಾ ||೮||

ವೆ ಎಂಬುದುಮೆರ್ದೆ ಕವ್ವನೆ ಪಾಱಿ ಬೆಱಗಾಗಿ ನೋೞ್ಪೆನೆಂದರಮನೆಯಂ ಪ್ರೊಱಮಡಲಡಿಯಿಡುವುದುಂ ಮಿಡುಕ[13]ಲೀಯೆಮೆಂ[13]ದು ಮೊಗ[14]ಮುಮಂ[14] ಕಟ್ಟಗೆಯುಮನಡ್ಡಲಿಟ್ಟು ದೌವಾರಿಕರ್ ನಿವಾರಿಸೆ ಸಿಗ್ಗಾಗಿ ಸುಗ್ಗಿಯಂತೆ [15]ನುಸು[15]ಳ್ದು ಬನಕೆ ಬಂದು ತನ್ನೊಳಿಂತೆಂದಂ

ಇರು ಮಟ್ಟಿಮೆಂಪು ತಾಂ ಚ  
ಪ್ಪರಿಸಿದೊಡಾನಿರೆನೆ ಮುಚ್ಚುಮಱಿಯೇಕೆಯೊ ರ  
ರ್ಕರೆ ನಾಲಗೆ ನೃಪರೆರ್ದೆ ಕ  
[16]ರ್ತ[16]ರಿಯೆಂಬುದು ಜಳಕಸಾದುದೆಮ್ಮಗ್ರಜ[17]ನಿಂ[17] ||೯||

ತಾಂಗಡಮಿಕ್ಕುವಂ ನೆಱಿಯೊಳಾಂ ಗಡಮಿರ್ಪೆನಿದಕ್ಕು[18]ಮಕ್ಕುವೆ[18]  
ನ್ನಂಗಡ ಕಂಡ[19]ನೀ[19] ನೆಗಟ್ಟಿ ತಪ್ಪದನುಳ್ಳೊಡೆ ತಪ್ಪೆ ಕಲ್ಪಿಸ  
ಲ್ತಾಂ ಗುರುವಲ್ಲನೇ ಮುನಿದನೀ ಪುರುಳಿಲ್ಲದ ಪೌರರೊಳ್ದೊಡ  
ಣ್ಣಂಗಡ ಮುಂತೆ ತಪ್ಪನಿತುಮೆಮ್ಮದು ಸೈರಣೆ ತಮ್ಮದಲ್ಲದೇ ||೧೦||

---

1 ಕಂಡವಳ್ (ಕಗ) ಕಂಡವಳ (ಚಟಡ) 2 ಯುಂ (ಕಗಚಟಡ) 3 ನಿವ್ಮ (ಚಟಡಣ) 4 ಳ (ಗಚಟಡ) 5 ಟ್ಟಿಂ ಈ (ಚಟಣ) ಳ್ಪೀ (ಡ) 6 ಲ್ಲಂವುರೆವಳು (ಚಟಡಣ) (ಮುಱಿವಾಳ್ದು ?) 7 ಚ್ಚಿಗಂಗೊಂಡು (ಚಟಡಣ) 8 ನಪೇಕ್ಷಿಸಿ (ಚಟಡಣ) ನಪಕ್ಷೆಸಿ (ಜ) 9 ಕಂಡ (ಜ) ಕೆದನದ (ಡ) 10 ಜ್ಞಿ (ಚಟಡಣ) 11 ವರ್ಗೆ (ಚಟಡಣ) 12 ಶಾಚ (ಜ) 13 ಲಿಲ್ಲವೆಂ (ಚಟಡಣ) 14 ಮುಂ (ಚ) ಮಂ (ಟಡಣ) 15 ಮುಗು (ಜ) ನುಗು (ಟ) 16 ತ್ತ (ಚ) ತ್ತು (ಜ) 17 ನಂ (ಕಗಚಟಡ) ನೊಳ್ (ಣ) 18 ಮೆನ್ನತ (ಚಟಡಣ) 19 ನಾ (ಜ) ನೀಂ (ಡ)

ಕೂರ್ಮೆಯನೊಕ್ಕು ನಿರ್ಮಳ[1]ರೊ[1]ಳಿಲ್ಲದ ದೋಷಮನಿಟ್ಟು ಕಟ್ಟೆ ಸೌ
ಧರ್ಮಿಕೆಗೆಟ್ಟು ದೂಱೆ [2]ಪೆಱರೆಂದು[2]ದುಗೇಳ್ವುದುಮುಗ್ರಜಂಗಿದೇಂ
ಧರ್ಮಮೆ [3]ಕೆ[3]ಮ್ಮಗೆಂದನಿದನಾತ್ಮ ಮಹೋದಯದೊಳ್ಪಹೋದರಂ
ಘರ್ಮಮರೀಚಿಯುಂ [4]ಬೆಳಗ[4]ಲಿತ್ತನೆ ಬಾಳಸುಧಾಮರೀಚಿಯಂ ||೧೧||

ತಮ್ಮರಸೆಂಬುದಂಬುಧಿ ಪರೀತಮೆ ಮಾಣೆಮ ತಮ್ಮಿದೊಂದು ದೇ
ಶಮ್ಮಹಿಗುಳ್ಳನಾದುದೆ ವಿದೇಶ ವಿಹಾರಮನೆಯ್ದೆ ಮಾಡುವೆಂ
ಸಮ್ಮದದಿಂ ಸ್ವದೇಶ ಪರದೇಶ ವಿಶೇಷಣಮುಂಟೆ ಮನ್ಮಥಂ
ಗಮ್ಮಳಯಾನಿಳಂಗಮೆನಗಂ ಮಧುಗಂ ಧರಣೀತಳಾಗ್ರದೊಳ್ ||೧೨||

ದೂಸಕರ ದೂಱುಗೇ[5]ಳ್ದಂ
ಸಾಸಿ[5]ಗನೆನ್ನಳವನಱಿದುಮಱಿಯದೆ ಪಿರಿದುಂ
ದೋಸಿಗನಾದೊಡೆ ಕೊಲ್ಗುಂ
ಪೇಸುವನಲ್ಲಂ ಸಮುದ್ರವಿಜಯನಜೇಯಂ ||೧೩||

ವ|| ಸಾವಂತಪ್ಪ ಕನಸುಗಂಡೊಡೆರ್ದು ಕುಳ್ಳಿರ್ದುದುಂ ಕಂಪ್ರಮನೆನ್ನುಮಂ ನೆಱಗೆಯ್ವನಾವನೆಂದು ಬೇರ್ನೆಲಕ್ಕೆವೋಪ್ಪದನೆ ನಿಶ್ಚೈಸಿ ವಸುದೇವನಿರ್ದನನ್ನೆಗಂ

ಪೂಡುವ ಕುದುರೆ ಬೆಸಂಗೊಂ
ಡೋಡುವ ತೇಗೊಂಡೆ ಗಾಲಿ ಪೂಡೆವಂ ಪೆಱವಂ
ಕೇಡಿಂಗಲಸಿದೂಡಕ್ಕುಮೆ
ನೋಡಿರೆ ರವಿ ಕೆಡೆದನಸ್ತಗಿರಿ ಮಸ್ತಕದೊಳ್ ||೧೪||

ಪುಟ್ಟು[6]ವ[6]ನಂದಗಿ ಬಸವಿಯ
ಬೆಟ್ಟುಗಳೊಳ್ಕೊಬಿಗೆ ಸಂಜೆವೇಳೆಯ ಪಱಿಗಳ್
ತೊಟ್ಟನೆ ತೀವಿದ ಗಟಿಗೆಯ
ಬಟ್ಟಲಪ್ರೋಲ್ ದಿನಪನಟ್ಟಿನಪರಾಂಬುಧಿಯೊಳ್ ||೧೫||

ವ|| ಮತ್ತಮಿನಿಸಱಿಂ

1 ದೊ (ಜಟಡಞ) 2 ಪರರಂದು (ಎ) ಪರರೆಂದಾ (ಓ) ಪರೆಂದು (ಐ) 3 ಗೆ (ಜಟಡಞ) 4 ಬಳಿಗ (ಟ) ಬಳಸ (ಜಡಞ) 5 ಳ್ದಂ ಸಾಸಿಂ (ಗಟ) ಳ್ದಂ ಸಾಸಿ (ಜ) ಳ್ದರಿ ಸಾಸಿ (ಐ) 6 ವ (ಡ)

ಸಾವಿತ್ರದ್ಯುತಿ ದಾವ ಶಿ
ಖಾವಳಿ ಪರಿದಳ್ಗಿ ಪಜಿಗೆ ಕರಿಕೆರ್ದವೊಲೇಂ
ತೀವಿದುದೊ ಭುವನತಳಮಂ
ಗೋವಳಗಟ್ಟಲೆ ಸಮಸ್ತ[1]ಭುವನಾ[1]ತ್ಮಕಮಂ ॥೧೬॥

ವ॥ ಅಂತುಮಲ್ಲದೆ

ಪಸರಿಸಿದುದು ಕಟ್ಟಲೆ ದೆಸೆ
ದೆಸೆಗಂ ವ್ಯೋಕಾರ[2]ನಂ[3]ತೆ ಕಾಲಂ ಕಡಲೊಳ್
ಬಿಸುಪಡರ್ದ ತಪನತಪ್ತಾ
ಯಸ ಪಿಂಡಮನರ್ದೆ ನೆಗೆವ ಪೊಗೆಯೆಂಬಿನೆಗಂ ॥೧೭॥

ಚಳಚಕ್ರಾಂಕಮರಾಳ ಮೇಘಪಟಳ [3]ಶ್ರೀ[3]ವೃದ್ಧವೇಶ್ಯಾಂಗನಾ
ಪಲಿತಕ್ಕೆಕ್ಕಿದ ಕರ್ಪುರ ಸಾರಸರಸೀ ನೀಳಾಬ್ಜ ದೃಗ್ಜಾಳಕ
ಜ್ಜಳ[4]ಪಂಕಂ[4] ಪಟುಭೃಂಗಯಾಚಕ ಚಮೂ ಮೂರ್ತ್ಯಾಂಬುಜಾಮೋದದಾ
ನಳಯೋತ್ಪಾದಕರ ಪ್ರದೋಷದ ಯಶಂ ಪರ್ಚಿತ್ತು ಭೀಮಂ ತಮಂ ॥೧೮॥

ವ॥ ಅಂತು ಪುಡಿಗತ್ತುರಿಯೆಂದು ಪಿಡಿಕ್ಕೈಸಿ ಪೂಸಲುಂ ಪಾಸಿ ಮೊಟ್ಟೆಗಟ್ಟಲುಂ ಮಿಹಿರಂಗಮಿಂದುಗಂ ಗುದ್ದಲಿಗೊಂಡಗುಟ್ಟಿ ಪ್ರೊಜ[5]ಗ[5]ಗಲುಮುಪ್ಪ ಕಾಳದ ಕಟ್ಟಲೆಯೊಳ್ ವಸುದೇವನರಮನೆಯ ಸುದಿಲಂ ವಿದ್ಯಾಧರಕರಣದಿಂ ಪೊಸಂತಿಲಂ ದಾಂಟುವಂತೆ ದಾಂಟಿ ಪೊಜಲಂ ಪೊಜಮಟ್ಟು ಪೊಜವೊಟಲೊಳ್[6]ಗನೆ[6] ಕಿಱಿದೆಡೆಯಂ ಪೋಗೆಪೋಗೆ

ಶಿಖರಿಣಿ॥ ನಿಶಾಚರ್ಯಾದಾನಂ ಶಬರ [7]ಶಿರ[7]ಮಾಕ್ರೋಶಮುಖರಂ
ಕೃಶಾನುರ್ವೀಪಾಹಸ್ರಮ [8]ಶಬಮಯೋ[8]ದ್ರೇಕ ಪಿಶುನಂ
ಪಿಶಾಚಪ್ರೌಢಸ್ತ್ರೀ ರಸವತಿ ಸುಸಿ[9]ಷ್ವಾ[9]ದ್ಯಸದನಂ
ಶ್ಮಶಾನಂ ದೃಷ್ಟವ್ಯಂ ನೃಪಸುತನ ಕಣ್ಗಾದುದಿದಿರೊಳ್ ॥೧೯॥

---

1 ಭೂತಾ (ಜ) 2 ದಂ (ಚಜಟಡ) 3 ಸ್ತ್ರೀ (ಜ) 4 ಪ್ರಗ್ಯಂ (ಚಟಣ) ಪ್ರಜ್ಞಂ (ಡ) 5 ಗು (ಜಡ) 6 ನೇಳ (ಚಟ) ಗೆ (ಡ) 7 ಶಿಬಿರ (ಚಜಟಡ) 8 ಸಭಯಮಹೋ (ಜ) ಶಬಮಯಮೋ (ಟ) ಸಬಮಯ್ಯಸೋ (ಡ) 9 ಖಾ (ಚಜಟಡ)

ವಿಚಳದ್ವೇತಾಳ [1]ರಾ[1]ಳಿಂ ಶಬರಭರವೃತಂ ಧೂಮವಲ್ಲೀವಿಕೀರ್ಣಂ
ಶುಚಿರಕ್ತಾಶೋಕ[2]ಸ[2]ಕ್ತಂ [3]ಶ್ವ[3]ಗಣಮೃಗಮಯಂ ಮುಗ್ಧಸೈರಾಚಕೇ[4]ಶ[4]
ಪ್ರಚಯಂ [5]ದೀಪ್ತಾಗ್ನಿ[5] ಭಾಗೋನ್ಮುಖ ಮಣಿಫಣಿಭೂತೋಗ್ರ ಮಾತಂಗಮುತ್ತುಂ
ಗಚಿತೋದ್ಧೃತ್ಯಾಕಪ್ಪ[6]ಮಾಯ್ತಾ[6] ಪಿತೃವನವನಮಾಯ್ತುಸ್ತಮತ್ಯಂತ ಭೀಷ್ಮಂ ||೨೦||

ತೆರೆತೆರೆಗೊಂಡು ಬಾನ್ಗಡರ್ವ ಕರ್ವೊಗೆ ಕರ್ಗಿವ ಸೀ[7][ರ್][7] ಕೊರ್ವುವಂ
ತಿರೆ ವಿಚಳಚ್ಚಿತಾನಳ ಶಿಖಾವಳಿ ವಿದ್ರುಮವಲ್ಲಿ ಪರ್ವುವಂ
ತಿರೆ ತಲೆಯೋಡಿನೊಳ್ಪೊಳೆವ ಪಲ್ಗಳೆ ಸಿಪ್ಪಿನ ಮುತ್ತು ತೋಱುವಂ
ತಿರೆ ಪರೆದಾ ಪರೇತವನಮಂಬುಧಿಯಂತಿರೆ ಭೀಕರಂ ಕರಂ ||೨೧||

ಅಲರ್ವರಲೊಕ್ಕ ಪಲ್ಪರೆಯದಿರ್ದಳಿಯಿರ್ದಿಲ ರಾಸಿ ಮೂಗುಗೋ
ಗಿಲೆ ಕರಿಕೊಳ್ಳ ಕೆಂದಳಿರೆ ಕೇಸುರಿ ಕಾಮಶರಾಗ್ನಿಯೊ[8]ಳ್ಪೊರ
ಳ್ದ[8] ಲಸ ವಿಯೋಗಿಯುಂ ಪೊಡರ್ದು ಬೇವ ಶಬಾವಳಿಯಾ[9]ದವಸ್ಥೆ[9]ಯೊಳ್
ಕಲಸಿ ಸಿಡಿಲ್ದು ಬಳ್ಳಿಡಿಗಳಿರ್ದ ಪರೇತವನಾಂತರಾಳದೊಳ್ (?) ||೨೨||

ಪೊಗೆವ ಚಿತಾಗ್ನಿ ಪೊತ್ತುವ ಚಿತಾಗ್ನಿ [10]ಸ್ಪೊದಟ್ವ[10]ಚಿತಾಗ್ನಿ ಬಾಂಬರಂ
ನೆಗೆವ ಚಿತಾಗ್ನಿ ನಂದುವ ಚಿತಾಗ್ನಿ ಕನಲ್ವ ಚಿತಾಗ್ನಿ ಗಾಳಿಯಿಂ
ಮಗುಟ್ವ ಚಿತಾಗ್ನಿ ಮಗ್ಗುವ ಚಿತಾಗ್ನಿ ಕಟಿಲ್ವ ಚಿತಾಗ್ನಿಯಲ್ಲಿಗ
ಲ್ಲಿಗೆ ಪುದಿದಿರ್ದುವಾ ಮಸಣಮೊಳ್ ವಿಳಯಾಗ್ನಿಯೆ ಬಿಟ್ಟ ಬೀಡುವೊಲ್ ||೨೩||

ತಾಪಸ ಭವ್ಯವಾಂಬುಧಿಯೆನುಣ್ಬುರಿ ಬಾ[11]ಡವ[11] ವಹ್ನಿ ಬೇಗ[12]ಮಿ[12]
ಲ್ವಾಪೆಯ ಬೇಗೆ ಪತ್ತಿ ನೆಲನಂ ಸುಡುವಗ್ನಿ ದವಾಗ್ನಿ ಕೊಳ್ಳಿಗಳ್
ಪೋಪ ಮರುಳ್ಗಳಿಂ ಪಿಡಿದು ಪಾ[13]ಯ್ವ[13] ಸಿಡಿಲ್ಪಲಿವಾಗೆ ವಹ್ನಿ ಸ್ಪೇ
ಳಾಪಕವಾದವೊಲ್ ಪ್ರತಿಭಯಂ ಪ್ರತಿವಾಸರಮಾ ಶಬಾಲಯಂ ||೨೪||

ಉರಿದುದು ಚಿತಾಗ್ನಿ ನೆಲದಡಿ
ವರೆಗಂ ಬಾಂಬರೆಗಮವರ ಸೆಣಸ[14]ಯ್ದುವ[14]ವೋಲ್
ನರಕಂಬೊಕ್ಕರುಮಂ ಸುರ
ಶರಣಂಬೊಕ್ಕರುಮನಳುರಲವ್ವಳಿಸುವವೋಲ್ ||೨೫||

1 ತಾ (ಜ[illegible]ಡ) 2 ರ (ಜ) 3 ಸ್ವ (ಜಜಟಡ) 4 ತ (ಬ) 5 ದೀಪ್ತಾಗ್ರ (ಜ) 6 ಸಂತಾ (ಗ) 7 ರ (ಜಜಟಡಣ) 8 ಳ್ದ (ಚಟಡಣ) 9 ದವಸ್ಥೆ (ಣ) 10 ಯುಳುವರ್ (ಜ) 11 ಡುಸ (ಜ) 12 ಪ (ಜ) 13 ಯ್ಬ (ಜ) 14 ಯ್ದಿದ (ಜಡ)

ನೆಗೆದುರಿ[1]ಪಿದೆ[1]ಗೆಯ ತಲೆಯಂ
ಮೊಗ[2]ವಿಡೆ[2] ಮರುಳಲ್ಲಿ ಮೊಬಗೆ ಪೆಣವಜಿತಿ ಭೇತಾ
ಳಗಣಮುಗಿದಾಡೆ ರಕ್ಕಸ
ವಗರಣವಾಡಿದುದು ನೋಡೆ ಸೂಲದ ಪೆಣಗಳ್ ||೨೬||

ನಾಲಗೆ[3]ಯಾಡಿಸಿತುಂ ಕೀ
ಲಾ[3]ಲಮನುಗುಬುತ್ತೆ ಶುಷ್ಕತನುಬೇತಾಳಂ
ಸ್ಥೂಲಶಿರನಾರ್ದು ಕುಣಿದಂ
ಸೂಲದ ತಲೆ ಕುಣಿವ ತೆಱದೆ ಕುಣಪಾಲಯದೊಳ್ ||೨೭||

ಪಿಡಿದಡಸಿ ನುಂಗಿ ಪಸಿದಡ
ಹಡಿಸುವ ಬೇತಾಳನುರಿವ ಪೆರ್ವೆಣನಂ ತ
ನ್ನೊಡಲಸ್ಥಿಕಾಷ್ಠದಿಂ ಪೆಣ
ತೊಡವೆಂದುದು ಬಸಿಱನೊಱಸಿ ಹಾಹಾಯೆನುತುಂ ||೨೮||

'ಇ'ಡಿದು ಕೊರಲ್ವರೆ[4]ಗಂ[4] ಪೂ
[5]ಚಿಪ್ಪೊ[5]ಡಮಸುವಂ ಕಳೆಯದಿರ್ಪ ಕಡುಗಳ್ಳರನೇಂ
ಪಿಡಿದುರ್ಚಿಕೊಂಡರೋ ಕೂ
ಗಿಡೆಯಿಡೆ ನರಕಕ್ಕೆ ಸಾರಕರ್ ಪಿತೃವನದೊಳ್ ||೨೯||

ಅಸುವಿರ್ದಂತಿರೆ ಸೂಲಂ
ಬಸಿ[6]ದಸುವಂ[6] ಪಿಡಿದು ತೆಗೆದ ಕಲಿಗಳುಮಂ ಪ
ಲ್ಕಸೆದು ತಿನಲ್ಕಸಗುವ ರ
ಕ್ಕಸರುಮನುಗ್ಗಡಿಸಿ ತಸ್ಕರರ್ ಪಿಡಿದುಯ್ವರ್ ||೩೦||

ಅರೆಮುಗಿದಿರ್ದ ಕಣ್ ಮುರಿದ ಮೀಸೆ ತುಱುಂಬಿದ ಜಾಜಿಪತ್ತೆ ಕ
ತ್ತರಿಸಿದ ಗಡ್ಡಮಿಟ್ಟ ತಿಲಕಂ ಬಳಸಂದೊಡೆದೋಲೆ ದೇಸೆಯಂ
ತಿರೆ ಸುಲಿಪಲ್ ತಳತ್ತಳಿಸಿ ತಂಬುಲಮಂ ಪೊಳಕುತ್ತೆ ರಾಗ[7]ದಿಂ
ಪ[7]ರಕೆಗೆ ಕೊಟ್ಟ ಪಂದಲೆಯಗುಂದಲೆಯಾದುದು ಬೀರನಣ್ಮಿನಾ ||೩೧||

---

1 ಸಿದ (ಜ) 2 ಮಿರೆ (ಜ) 3 ಬಾಯೊಡಿಸುತುಂ ಲಾ (ಚಟಡಣ) 4 ಯಡಿಗಿ (ಚಟಡ) ಅಡಿಗಿ (ಣ) 5 ಗ (ಚಟಡಣ) 6 ಪೊ (ಚಟಡಣ) 6 ದಗುವಂ (ಚಟಣ) ದನುಮಂ (ಜ) 7 ವಿಲ (ಚಟಡಣ)

ತೊಡೆದು ಸುಗಂಧಮಂ ನನೆಯ ಜಾದಿಯನೆತ್ತಿ ತುಱುಂಬಿ ಪಾಲ್ಗಳಂ
ಕುಡಿಯಿಸಿ ಕೊಡೆ ಕಾಸಿ ಬಿಸುಸುಯ್ಯೊಳೆ ತನ್ನನೆ ನೋಡಿ ಜೀವಮಂ
ಪಿಡಿದಿನಿಸಿರ್ಪ ಶೂಲದವನಂ ನಡೆನೋಡಿಯೆ ಮಿಾಸೆದಿರ್ದುತುಂ
ಮಡಿದೆಲೆಯಂ ನಖಾಗ್ರದೊಳೆ ಕಣ್ಬನಿಯಂ ಪಿಡಿಯುತ್ತೆ ನೀಡಿದಳ್ ||೩೨||

ಕಿವಿಗಿನಿದಾಗೆ ತಮ್ಮ ಕಳವಂ ಕ[1]ತೆ[1]ಮಾಡಿ ಮರುಳ್ಗೆ ಪೇೞ್ದು ಪೊಂ
ಗುವ ರಸಮಗ್ಗಳಂ ಬಸಿಯೆ ತಂಬುಲಮಂ ಪಿಡಿದಿಕ್ಕಿ ಪಿಂಡಿ ತೋ
ಱುವ ತಿನಲೆಂದು ಸಾ[2]ರ್ದು‌ಸಿ[2]ರನಾಲಿಸೆ ಸೋಲ್ವಿನಮಿಂಪು ಸೂಸೆ ಪಾ
ಡುವ ಪಿಶಿತಾಶರಂ ಪಿಡಿದು ಕಾಡುವ ಸೂಲದ ಬೀರರೊಪ್ಪಿದರ್ ||೩೩||

ಅಂಗಡಿಯಾನೆಯೆ ಬೀದಿಯ
[3]ಸಿಂಗಮೆ[3] ಲಲನೆಯರ ಕಣ್ಣ ಪುಣ್ಯಮೆ [4]ನಿನ್ನಂ[4]
ಜಂಗಮ ವಿಷಮಂ ಪಿಡಿದಾ
ವಂಗಡ ಪಿತೃವನಕೆ ತಂದು ತುಡಿಸಿದ ಬಂಟಂ ||೩೪||

ಊಡಿದೆನೋದಲಿಟ್ಟೆನುಡಕಲ್ವುದುಮಣ್ಣನ ಕೂಸುದಂದೆನಾಂ
ಬೇಡೆನೆ ಮಿಾಱಿ ಕಳ್ಳರೊಡನಾಡಿಯೆ ಪೆತ್ತ ಬಸಿರ್ಗೆ ಸಂತಸಂ
ಮಾಡಿದೆಯಿಂದಿದೇಂ ಮಗನೆ [5]ಪ[5]ಣ್ಣನೆ ನುಣ್ಮೊಗದಲ್ಲಿ ಮಿಾಸೆಗಳ್
ಮೂಡದ ಮುನ್ನ ನಿನ್ನ ಪೆಗಲೊಳ್ ಪೊಸಸೂಲಮಿದೆಂತು ಮೂಡಿತೋ ||೩೫||

ವ|| ಎಂದು ಬಾಯಂ ಬಡಿದು ಬಸಿಱಂ ಬಡಿದುಕೊಳ್ವ ತಾಯ್ಗೆ ತರಳನಿಂತೆಂದಂ

ಪಣವುಂಡೆಂ [6]ಬಂ[6]ದಿಯೊಳ್ಪಾಲಕಸೆ [7]ಸಲಗೆ[7] ಜೂಜಾಡಿದೆಂ ಸೂಳೆಗೆಯ್ದೆಂ
ಪಣಿದಂಬೊಯ್ದೆಂ ತೊಟಲ್ದೆಂ ಪಿರಿಯ ಕಳವುಮಂ ಕಳ್ದೆನಿಂದಣ್ಮಿ ಸಾಯ
[8]ಲ್ಕ[8]ಣಿದೆಂ ಪೊತ್ತತ್ತು ಸೂಲಂ ಬಲದ ಪೆಗಲೊಳಾಂ ಬೀರನಾದೆಂ ಮರುಳ್ನಾ
ಯ್ಗುಣಿಸಾದೆಂ ಮೆಚ್ಚಿದಂತುಳ್ಳವರನೆ ಪಿಡಿದುಂಡಪ್ಪೆನೆಂದುರ್ವುತಿರ್ದಂ ||೩೬||

ವ|| ಇಂತಿರ್ಪ ಮಗನ ನೆತ್ತರ್ಗೆ ಸಾರ್ವ ನಾಯುಂ ನರಿಯುಮಂ ಸೋವುತುಂ ರಕ್ಕಸರ್ಗೆ ಕೆಯ್ಮುಗಿಯುತ್ತುಂ ರಕ್ಕಸಿತಾಯ್ ಕಾದುಕೊಂಡಿರ್ಪುದಂ ನೋಡುತ್ತುಂ ಪೋಗೆವೋಗೆ

---

1 ಡೆ (ಚ) ಡಿ (ಟ) ಥೆ (ಡ) 2 ಸುಸಿ (ಚಟ) ರ್ದ‌ಸು (ಜ) ಸಸಿ (ಡ) 3 ಜಂಗಮ (ಚಟಡಣ) 4 ನಿಲನಂ (ಚಟಡಣ) 5 ಸು (ಚಜಟಡ) 6 ಬಾ (ಚಟ) 7 ನಲಸಿ (ಚಟ) 8 ಲ್ಯು (ಜ)

ತಲೆಕೆಳಗಾಗಿ ನೇ[1]ಲ್ವುದು[1] ಶಬಾವಳಿ [2]ಬಲ್ವ[2]ಲ ಪಿಂಡು ಬಲ್ಗರುಳ್
ನುಲಿಗಳೆಟಲ್ಕೆ ಬೀಟಲ ಬಟಲ್ಕೆ ಕರಂ ಕುಱಿತೊಕ್ಕುತಿರ್ಪ ಪಂ
ದಲೆಗಳೆ ಜೇನಪುಟ್ಟಿಯೆನೆ ಕೊರ್ವಿದ ಕೊಂಬುಗಳಲ್ಲಿ ಪಕ್ಕಿವೋಲ್
ಚಿಲಿಮಿಲಿಯೆಂದುವೆರ್ದ ಕೊಲೆಗಳ್ಕುಣಪಾಲಯದಾಲದೋಳಿಯೊಳ್ ||೩೭||

ಸೂಲಮನೆತ್ತಿ ಹೂಂಕರಿಪ ಭೈರವಿ ಕತ್ತಿಗೆಗೊಂಡು ಬರ್ಪ ಮಾ
ಕಾಳಿ ಕುಕಿಲ್ವ ಶಾಕಿನಿ ಶಬಾಳಿಗೆ ನಾಲಗೆಗಿಟ್ಟುಕೊಳ್ವ ಬೇ
ತಾಳರಬಲ್ದು ಪಲ್ಮೊರೆವ ಪೂತನಿ ಪೂತ್ಕರಿಸುತ್ತೆ ಪೊತ್ತುಕಂ
ಕಾಳಮನತ್ತಲಿತ್ತ ಪರಿದಾಡುವ [3]ಖಂ[3]ಡ ಕಪಾಳಿ ಕಾಡಿನೊಳ್ ||೩೮||

ಬಾಯ್ದೆಱಿಯುತ್ತೆ ತೂಂಕಡಿಪ ಕಿಂಕಿಣಿ ಬೇವ[4]ವ[4]ರಂಕಜಾಳಮಂ
ಪೊಯ್ದು ತಳಂಗಳಿಂ ಪೊಸೆದು ಮುಕ್ಕುವ ರಕ್ಕಸ[5]ರಿರ್ದ ಕೋ[5]ಱಿನ
ತ್ತಿಯ್ದುವ ಕಾಳ ರಕ್ಕಸಿ ಶುಭಂಕರಿ ಕತ್ತಿಗೆಯಿಂದೆ ಗಂಟಲಂ
ಕೊಯ್ದು ಕಪಾಳದಿಂ ರುಧಿರಮಂ ಪಿಡಿದೀಂಟುವ ಭೂತಮದ್ಭುತಂ ||೩೯||

ಮರುಳೆತ್ತಿತ್ತೊಂದು ಬಿಕ್ಕಂ ಮುಱಿದು ಮರುಳ ಮುಂಗೆಯ್ಯುಮಂ ಬಿಕ್ಕುಮಂ ನಿ
ಬ್ಬರಿಬಾಯೊಳ್ಪೊ[6]ಕ್ಕೊಡಂ ಕಂಡಿಸುವ ಪಿಡಿದ[6] ಬೇತಾಳನಂ ಮಚ್ಚದಿಂ ಚಿ
ಚ್ಚರದಿಂದಂ ಕಿಟ್ಟಿ ಬೇತಾಳನ ತಲೆಯನೆ ನಕ್ತಂಚರಂ ತಿಂದ ನಕ್ತಂ
ಚರನಂ ನುಂಗಿತ್ತು ಭೂತಂ ಬಹುವಿಶಸನನೇಕಾ[7]ರ್ಥ[7]ಲೋಲಾತಿರೇಕಂ ||೪೦||

ಕಬಳಿತವಲ್ಲೂರಂ ಗಿಳಿ
ತಬುಕ್ಕನಾ ಪೀತರಕ್ತಮೇಂ ತಿಂದುದೊ ಹ
ಸ್ತಬೃಹನ್ಮಸ್ತಿಷ್ಕಂ ತಾ
ಯ ಬಾಯ ಮಾಂಸವನೆ ತೋಡಿ ರಾಕ್ಷಸಲೋಕಂ ||೪೧||

ವ|| ಅಲ್ಲಿಂ ನೀರ್ಗುಂದಿ ಕುಮುದಕೊಂಡದಂ[8]ತಿರ್ಪ[8] ನೆತ್ತರ ಕೊಳಂಗಳೊಳ್ ಜಲಕ್ರೀಡೆಯಾಡುವ ಶಾಕಿನಿಯರುಮಂ ಪ್ರಸ್ತಾವಕ್ಕೊಂದು ಪೆಣಂ ಪಕ್ಕೆಗೆರಡು ಪೆಣನೆಂದು ರಕ್ಕಸಬೋಜಗರ ಶುಭಂಕರಿ ಕತ್ತಿಯನೊತ್ತೆಗೊಳ್ವ ರಕ್ಕಸಿ ಸೂಳೆಯರುಮಂ ಬೇವ ಪೆಣದ ಬಿಸಿಯಡಗಂ ತುತ್ತಿ ಬಾಯ್ ಬೇಯೆಯುಮುಗುಬಿದೆ ಮಾನಂತೆ ಮಿಡುಕಿ ಬೆರಲಂ ಮಿಡಿದು ಬಿರ್ದಟ್ಟಿ ತಮ್ಮ ಕೂಸುಗಳ ಬಾಯ ಬಿಸಿಯಡಗಂ ತೋಡಿ ಕಳೆದು ತಮ್ಮ ತಿಂಬಡಗಂ ಬಾಯ್ವಾಯೊಳಿಕ್ಕಿ ನಂಬಿಸುವ ನಿಶಾಚರಿಯರುಮಂ

1 ಲ್ವರು (ಜ) ಲ್ವುರು (ಟಡ) 2 ಬಾವ (ಜ) 3 ಕಂ (ಚಟಡಣ) 4 ಕ (ಜಡ) 5 ರೆರ್ದಕೋ (ಜ) ರಿರ್ದಕೋ (ಡ) 6 ಯ್ದುಕೊಂಡಂ ಕಡಿದುವಸಿದ (ಜ) 7 ತ್ಥ (ಚಟಡಣ) 8 ತೆಸೆದಿರ್ಪ (ಣ)

ಎನಿತಡಗನೂಡೆಯುಂ ಬಾಯಾಡಿ ನಲಿಯದೆ ತಿಂಬಡಗಂ ತೋಡಿಕೊಂಡು ಕಾಡುವ ಕೂಸಂ ದಸಿಯೊಳಸೆಯಿಱಿದು ಬಿಸಿಯಡಗಂ ಬಾಯೊಳ್ಗಿಡಿದು ತಿನ್ನುತಿನ್ನೆಂದವುಡಂ ತಿಂಬ ತಾಯಿ ರಕ್ಕಸಿಯರುಮಂ [[1]ಸಱುಸ್ಸೈತ[1]]ನೆ [2]ನೀಡಿದ ಸಿಡು[2]ಗಾಲಮೇಲೆ ಪಟ್ಟಿರಿಸಿ ಪೊಸಮಿದುಳಂ ಬೆಣ್ಣೆಯಿಕ್ಕಿ ತಲೆಯ ಸಿರ್ಪಿನಿಂ ನೆತ್ತರನೆಱಿದು ಬಾಯಂ ತೊಡೆದು ಕೆಯ್ಯಂ ನೀವಿ ತೂಪಿಱಿದೆತ್ತಿಕೊಳ್ವ ಮರುಳ್ವಾಣತಿಯರುಮಂ ಬೇವ ಪೆಣದುರಿವ ಬಾಯ್ಗೊಂಡದೊಳ್ ತಮ್ಮ ತನುವಂ ಪಿಡಿಖಂಡಂಗೊಯ್ದು ಬೀಟ್ವ ಸಾಧಕರುಮಂ ಬಲಗೆಯ್ಯ ಬಾಳ್ವೀಗಮುಮುಮೆಡದ ಕೆಯ್ಯಡಗುಂ ಬೆರಸು ಮಹಾಮಾಂಸಮುಮಂ ಭೂತಬಲಿಗೊಡಲೆಂದು ತೊಟಿಲ್ವ ಧೀರಸಾಧಕರುಮಂ ತಿನಲಾಸೆಗೆಯ್ದು ತಮ ಸೂಲದತ್ತ ಸಾರಲಮ್ಮದೆ ಸುತ್ತಿಸುಟಿವ ಬೂತಕ್ಕಂ ಪ್ರೇತಕ್ಕಂ ಮೆಯ್ಯ ಮಾಂಸಮಂ ಕೊಯ್ದಿಡಾಡುವ ಕಲಿಗಳುಮಂ ಘಟೋತ್ಕಚನ ತಲೆಯಂತೆ ಮರುಳ ಕಾಳಿಗಕ್ಕಾರ್ವ ಸೂಲದ ತಲೆಗಳಂ ತಮ್ಮಟ್ಟೆಯಾಟಕ್ಕೆ ಬಾ[3]ಯ್ದಿ[3]ಱಿಗುಟ್ಟುವ ಸಿಡಿದಲೆಗಳುಮಂ ಪೊರೆಯೊಳ್ಬೇವ ಪೆಣದ ಪೊಗೆ ಕಣ್ಣೊಳ್ ಪುಗೆ ಸಮಪಾಯುಂ ಕಂಬನಿಗಳೊಳ್ [4]ಪಾಯ್ದೊ[4]ಡೆ ಪಿಡಿಯೆಂಗುಮೆಂದು ಕಾಲಡಗಂ ಕಾಯ್ಗಾಲಿಗೊಟ್ಟು ರಕ್ಕಸರಂ ಕರೆದು ತಮ್ಮ ನೆತ್ತರಿಂ ನಂದೆವೊಯ್ವುವತಿ ಪ್ರತ್ಯಗ್ರ ವಿಶಾಲ ಶೂಲಭಿನ್ನರಪ್ಪ ಸುಭಟರು ಮನಡಿಗಡಿಗೆ ನಿಂದು ನೋಡುತ್ತುಂ ಬಂದು ಮುಂದೊಂದೆಡೆಯೊಳ್ ಸೂಲದ ಪೆಣದ ಸೆರಗಂ ಸೀಟ್ಟುಕೊಂಡದಱ ಬಾಯಿಂ ಬಸಿವ ನೆತ್ತರೊಳ್ಮರುಳ ಕರುಳಂ ಕಿತ್ತು ಪೊಸೆದು ತೂಳಿಕೆಯೊಳರ್ದಿಕೊಂಡು ಮರುಳ ಕಯ್ಯ ಕೊಳ್ಳಿಯ ಬೆಳಗಿನೊಳ್ ಬರೆದ [5]ಬಳ[5]ಯ ಪಟಮಂ ಪೊರೆಯ ಮರದ ಕೊಂಬಿನೊಳ್ಕಟ್ಟಿಯುರಿವ [6]ಸಿದ್ದಿ[6]ಗೆಯ ಕೆಲದೊಳ್ ತನ್ನ ತೊಟ್ಟ ತೊಡವಂ ಕಳೆದಿಕ್ಕಿ [7]ಪಾಯ್ದು ಪೋದುದ[7]ಕ್ಕಂ ಮೆಟ್ಟ ಕಿಚ್ಚಿನೊಳೆ ಪಾಯ್ದ ಪಜ್ಜೆಯಂ [8]ಮಾ[8]ಡಿ ಕಿಂಕಿಣಿಯ ಬೇತಾಳನನಿತ್ತ ಬಾಯೆಂದು ಕೆಲಕ್ಕೆ ಕಯ್ಯಂ ನೀಡೆಂದು ನೀಡಿದ ಕಯ್ಯ ನಡುವಂ ಪಿಡಿದಡದರ್ಱ ಪೆಗಲನೇಱಿ ಪರೇತವನದಿಂ ಪೊಱಮಟ್ಟು ತನ್ನ [9]ಪಜ್ಜೆ[9]ಯಂ ಪಜ್ಜೆಕಾಱರಱಿಯದಂತು ವಸುದೇವಕುಮಾರಂ ಪಾಯ್ದು ಪೋದಂ ಇತ್ತಲ್ನೇಸಱು ಮೂಡಲೊಡನಾಡಿಗಳುಂ ಕಾಪಿನವರುಂ ಕಾಪಿನೋವರಿಯೊಳ್ ವಸುದೇವನಂ ಕಾಣದೆಲ್ಲೆಡೆಯೊಳಮಱಿಸಿ ಸಮುದ್ರವಿಜಯಂಗೆ ಬಿನ್ನವಿಸುವ ಸಮಯದೊಳ್ ಬಂದು ಪಡಿಯಱಂ ಪೊಡೆವಟ್ಟು ಪರೇತವನದೊಳಗೆ ಪೊಸದೂವೆಯ ಕೆಲದೊಳ್ ಕಳೆದೊಟ್ಟಿದ ತೊಡವುಗಳುಮಂ ಮರದ ಕೊಂಬಿನೊಳ್ ಬರೆದು ಕಟ್ಟಿದ ಕಪ್ಪಡಮುಮಿರ್ದಪ್ಪುದೆಂದು ಪಿತೃವನಪಾಳಕಂ ಕಪಾಳಕುಂಡಳಂ ಪಾರವಟ್ಟಕ್ಕೆ ಬಂದು ಬಿನ್ನವಿಸಿ ಮುಟ್ಟಿದನೆಂಬುದುಮರಸ[10]ನ[10]ಱಿದಂತ[11]ರಗಿ[11]ದು

---

1 ಸಱುಸಯ್ಯ (ಜ) ಸರುಸಯ್ಯ (ಡ) 2 ಗಿಡಿದು ಸಿಡಿ (ಚ) ಗಿಡಿದು ಸಿಡು (ಡ) ಪಿಡಿದು ಸಿಡಿ (ಙ) 3 ಯ್ದು (ಜ) 4 ಪೋದೊ (ಚಟಡಙ) 5 ಬಳಿ (ಡ) ಬಟೀ (ಙ) 6 ಸೆದ (ಜ) 7 ತ (ಜ) 8 ಗೂ (ಙ) 9 ಪ್ರಭೆ (ಚಟಡ) 10 ನಿ (ಜಡ) 11 ಱನಿ (ಡಙ)

ಪಾಱಿ ಪೋಗಿಮೆಂದು ಕಿಂಕರರಂ ಕಳಿಪುವುದುಮವರ್ಗೆರಿತಂದವಂ ಮುಂದಿಡಲೊಡನೆ ತನ್ನ ತಮ್ಮನ ಮಣಿಮಂಡನವೆಂದಱಿದು ಸಂದರಾಗನಾಗಿಯುಂ ಧೃತಿಯಿಂ ಮಂದ ರಾಗನಾಗಿ ಪಟದ ಬರೆಪಮಂ ಬಾ[1]ಜಿ[1]ಸೆಂದು ಸಂಧಿವಿಗ್ರಹಿಗೆ ಬೆಸಸಲೊಡನೆ

ಪಾದರಿಗನೆಂದು [2]ಪ[2]ರಪರ
ವಾದ[3]ಭವ[3]ಪ್ರಭುಗೆ ದೂಱಿದರ್ಗಡ ತಮಗಾಂ
ಸೋದರನಲ್ಲೆಂ ಬಸದಿಯೊ
ಳೋಪೆಂ ಪರವೆಣ್ಗೆ ಪುಱಿದುಮೆಱಗಿದ ದಿವಸಂ ॥೪೨॥

ಆಯಸಮಿದು ತೊಡೆವೊಡಖಿಲೋ
ರ್ವಿಯಿಂದಮಾಯ್ತಾಯ್ತೆ ಕೆಲಬರಿಂ ಬರ್ಕುಂ [4]ಕೆರೆಯ[4] (?)
ಬಾಯಂ ಮುಚ್ಚಲ್ ಕೆರಸಿಯ
ಬಾಯಂ ತಾಂ ಮುಚ್ಚಲಾರ್ಗುಮೇಂ ಬಂದಪುದೇ ॥೪೩॥

ದೂಱಪು ತಮ್ಮಯ ಚಿತ್ತ
ಕ್ಕೇಱಿದ ದಿವಸದೊಳೆ ಪೊಲ್ಲಕೆಯ್ದಿಂ ಸೋಲೆಮೇ
ಲೇಱಾಗಿ ಬದುಕಲಕ್ಕುಂ
ದೂಱಿಂ ದುರ್ಯಶಮುಮಾಗೆ ಬಾಳ್ವಂ ಭಟನೇ ॥೪೪॥

ಪಿಪಿಪೆಂ ತಮ್ಮಡಿಗಳ ಕೇ
ಸರಿಯಂ ಸ್ಥಾಪಿಸುವುದಲ್ಪಿಪೆಂ ಪುಳಕಂಗಳ್
ನಡುವಿನೆಗಂ ತಂಬುಲನುಂ
ಕುಡದೊಡಮುಲ್ತೆಱಿದುಕೊಂಡೆನಾಂ ಬಾಯ್ವಾಯೊಳ್ ॥೪೫॥

ಪ್ರಾಯಶ್ಚಿತ್ತಂ ಗಡ ತ
ಪ್ರಾಯಸಪುತ್ರಿಕೆಯನಂಜದಪ್ಪುವುದು ಪರ
ಸ್ತ್ರೀಯರ ನಲ್ಲರ್ಗೆ[5]ಸಗಿ[5]ದ
ನೀಯರ್ತಾಮೆಂದು ಮಸಣದುರಿಯೊಳ್ ಪೊಕ್ಕೆಂ ॥೪೬॥

ಇದು ತಮ್ಮಿಂದಾದುದೆ ಮ
ನ್ಮಥನ ಮದಾವೇಶದಿಂದಮಾಯ್ತೆನ್ನಯ ತು
ಪ್ಪದೊಳಾನೆ ಬೆಂದೆನೆನಗಟಿ
ಲ[6]ದಿರಿಂದ[6]ಡಪುಱಿಯದಟಿದನೇ ವಸುದೇವಂ ॥೪೭॥

---

1 ರಿ (ಜ) ಚಿ (ಣ) 2 ವ (ಣ) 3 ಪರೆ (ಜ) 4 ಕೆಲಯೆ (ಜ) ಕೆರಯ (ಟ) ಕೆಲಯ (ಡ) ಕೆರೆಯೆ (ಣ) 5 ನಗಿ (ಜಟ) ನಗ (ಜ) ಸಗ (ಡ) 6 ದಱಿಂ (ಣ)

ಎನೆ ಮುನ್ನಂ ನೃಪತಿ ಸಭಾ
ಜನಮನಿತುಂ ಬಳಿಕ ಮೂರ್ಛೆವೋದುದು ಕಡುಸಂ
ಜಿನ ಗಾಳಿಯೊ ಮೇಣ್ಣಂವೋ
ಹನಾಸ್ತ್ರವೋ ನೃಪಕುಮಾರ ಪಾತಶ್ರವಣಂ ||೪೮||

ಬಂದರನಿಮಿತ್ತಮು[1]ಲ್ಲಿಗ[1]
[2]ರಿಂ[2]ದಮರಂಗತಿ ವಿ[3]ರುದ್ಧ[3]ಮಹಿಪತಿಸಭೆಗಾ
ರ್ತಂದರೊ ಮುಕುಳಿತ ಕಮಲಾ
ನಂದಾರ್ಥಂ ಸುಪ್ರಭಾತದೊಳ್ ಭಾಸ್ಕರನಂ ||೪೯||

ಆ ಸಕಳರ್ಧಿಸಮೇತಂ
ವಾಸನೆಯಂ ಪೊತ್ತುಕೊಂ[4]ಡು ಪಾವ[4]ನ ಪವನಂ
ಬೀಸೆ ಬಸವಳಿ[5]ದು ಸೋಂ[5]ಕೆ ಸ
ಭಾ[6]ಸಹಿತಂ ಲಬ್ಧಸಂಜ್ಞನಾಗಿ ನೃಪಾಳಂ ||೫೦||

ಹಾ ವಸುದೇವ ಹಾ ಹರಿಕುಲಾಂತಕ ಹಾ ಚಿರಜೀವ ನಿನ್ನನಿ
ನ್ನಾವೆಡೆಯಲ್ಲಿ ಕಾಣ್ಬೆನನುಜಂ ಪಡೆದಂತುಟನಗ್ರಜಂಗೆ ಮು
ನ್ನೀವುದು ಪಂಥಮಿಂತು ವಿನಯಂಗಿಡಲಕ್ಕುಮೆ ಪತ್ತ್ರ ಪೊಕ್ಕು ಮುಂ
ಪಾವಕನೊಳ್ ಬಳಿಕ್ಕೆನಗೆ [6]ಕೊಟ್ಟೆಯಿದೇ[6]ಕೆಯೊ ಶೋಕವಹ್ನಿಯಂ ||೫೧||

ಮನಸಿಜನಂದು ಬೆಂದನೆ ಹರಾನಳನಿಂ ಪುಸಿಯಿಂದು ಬೆಂದನೇ
ವೆನೊ ವನಮಿಂದು ಶೂನ್ಯಮೆಳವೆಂಡಿರ [7]ಗಾವಣ[7]ಮಿಂದು ಶೂನ್ಯಮಂ
ಗನೆಯ[8]ರುಮಿಂದು ಶೂನ್ಯ ಮೆ[8]ರುವನ್ಮೃಗಲಕ್ಷ್ಮನುಮಿಂದು ಶೂನ್ಯ[9]ಪಿಂ (?)
ಪಿ[9]ನ ಪೆಸರಿಂದು ಶೂನ್ಯಮುರಿದೆನ್ನಯ ರಾಜ್ಯಮುಮಿಂದು ಶೂನ್ಯಮೇ ||೫೨||

ಜೀವು[10]ದವಂ[10] ಪುಸಿ ಕಾಣಿರೆ
ಪಾವಕನುಂ ಕಂಡೊಡವನನೊಳಕೊಳ್ಗುಂ ಸ್ವಾ
ಹಾವಧು ತನ್ನಿನಿಯಳ್ ವಸು
ದೇವನ ರೂಪಿಂಗೆ ಸೋಲ್ಗುಮೆಂಬೀ ಭಯದಿಂ ||೫೩||

---

1 ಲ್ಲನ (ಣ) 2 ಲೆಂ (ಚಟಣ) ಲ್ಲಿಂ (ಡ) 3 ವುಂಗ್ಧ (ಜ) 4 ಡಪಾರ (ಚಟಡಣ) 5 ಕಿಸಲಾ (ಚಟಣ) ಕೆಸಲಾ (ಣ) 6 ತೋಱಿಪೆಯೋ (ಣ) 7 ಗೋವರ(ಜ) 8 ರುಮಿಂದು ಶೂನ್ಯಂ ಪೋ (ಚಟ) ರುಶೂನ್ಯವೋ (ಡ) ರೆಪೂನ್ಯ ವೋ (ಣ) 9 ಹಿಂಪ (ಜ) 10 ದುಪುಂ (ಜ)

ವ|| ಎಂದು ಶೋಕಿಸುವುದುಂ ನೀನೆಂದಂತೆ ವಸುದೇವನಂ ವಸುದೇವನೊಳ ಕೊಳ್ವನಲ್ಲಂ ಕೆಲವಾನುಂ ದಿ[1]ವಸ[1]ಕ್ಕೆ ನಿನ್ನ ತಮ್ಮಂ ಬಂದಪನಱಲುಂ ಬೞಲುಂ ಬೇಡೆಂದ[2]ರಿಂದಮ[2][ರ]ರಸನಂ ಸಂತೈಸಿ ಪೋಗೆ

ಆನಿಯಮೆ ನಿಜಾಗತ ವಾ
ರ್ತೇನದಿ ತೀವದೊಡೆ ತನ್ನೊಳೇನುಱ[3]ವುದೆ ಯೋ
ಗ್ಯಾನುಜ ವಿಯೋಗ ಶೋಕಾ
ರ್ವಾನಳನಿಂದಾ ಸಮುದ್ರವಿಜಯ ಸಮುದ್ರಂ ||೫೪||

ಅತ್ತ ನಿರಂಕುಶಂ ಮೆಡರಿದಾ[3]ಳ[3]ಣಿಯಂ ಮಱಿದಂಜ[4]ನನ್ನ[4]ನು (?)
ನ್ನತ್ತ ಮತಂಗಜಂಬೊಲೆಸೆದಾ ವಸುದೇವನುಮುತ್ತಮಾಂಗನಾ
ವೃತ್ತಕುಚಾದ್ರಿಕಂಟಕ[5]ವ[5]ನೋತ್ಕಟರಾಗನದೀ ಪ್ರಚಾರ ಚಿಂ
ತೋತ್ತರನೆಯ್ದಿದಂ ವಿಜಯಖೇಟಮನಂಗಜ ಸೌಖ್ಯವಾಟಮಂ ||೫೫||

ವ|| ಎಯ್ದಿ ಪೊಱಪೊೞಲೊಳೊಂದು ನಂದನವನಮಂ ಪೊಕ್ಕು ಪದ್ಮಾಕರ ದೊ[6]ಳೊಲೆದೋ[6]ಲಾಡಿ ಕೊಳನ ತಡಿಯೊಳಿಕ್ಕಿರ್ದ ಮೃಗಮದಮುಮಂ ಸೆಳೆಗೊಂಬು ಕೊಂಬನೊರಸೆ ಸುರಿದ ಸಿರಿಕಂಡದ ರಸಮುಮನಣ್ಪೆಕ್ಕಿ ಪೂವಂ ತುಱುಂಬಿ ತುಱುಂಬಿಗೆ ತುಱುಗಿ ಮುಸುಱುವ ಮಱಿದುಂಬಿಯಿಂ [7]ಕಣ್ಬೇಲಿ[7]ಯ ತಲೆಸುತ್ತಂ ಸುತ್ತಿದಂತೆ ಸೊಗಯಿಸಿ ಸುರಯಿಯ ಸುರಹೊನ್ನೆಯಲರ ಬಿರಿಮುಗುಳ ಬೆರಕೆವಾಸಿ ಗಮಂ ತಲೆಸುತ್ತಿ ಕೇದಗೆಯ ಕುತ್ತುಂಗಱಗಳಂ ಕುತ್ತಿ ಕೇ[8]ಶ[8]ದ ಕೊನೆಯೊಳ್ ಕೇಸರದ ಕಿಸುವುಡಿಯಂ ಕೆದಱ ತಿಳಕದ ತಿಳಕಮಂ ತಳೆದು ಕೇದಗೆಯ ಬಿಳಿಯೆಸಱ ಬಳಸಮೋಲೆಯನಿಟ್ಟು ಪೂಗೊಂಚಲಂ ತೂಗಿ ತೊನೆಯೆ ಕನ್ನವುರಂದೀವಿ ಮುಗುಳ ಮುದ್ರಿಕೆಯನಿಕ್ಕಿ ಕುಸುಮಕಂಕಣಮನೇಱನೂಂಕಿ ನಿಱದಳಿರ ತೊಂಗಲಂ ತೋಳೊಳ್ತೊಡರ್ಚಿ ಚಂಪಕಮಾಲೆಯೊಳ್ಪಿರಸಿ ಕೊಳದ ಮಲ್ಲಿಗೆಯ ತಿಸರಮಂ ತೊಟ್ಟು ತಾವರೆಯ ನೂಲ ತಿರುವಂ ತೀಡೆ ವಕುಳದ ಪೂತ ಸೆಳೆಯ ಸೆಳೆವಿಲ್ಲಂ ಗೊಲೆಗೊತ್ತಿ ಪೊಸನನೆಯ ಪುಳುಂಬಂ ಪೊಸೆದು ಸಲಿಸಿ ಕಿಱುದಳಿರಂ [9]ಗಱಗಟ್ಟಿ[9] ಮಾವಿನಂಕುರದ [10]ಕೂ[10]ರ್ಗಣೆಗಳಂ ತಳಂ ತೀವೆ ಪಿಡಿದು ಪೊಲಗೆಟ್ಟ ಕಾಮದೇವನಂತೆ ವಸುದೇವನಾ ವನದೊಳಗೆ ಪರ್ವಗಳೊಂದು ತಿಳಿಗೊಳದ ತಡಿಯೊಳ್

1 ವ (ಚ) ನ (ಟಣ) 2 ರಿಪಮ (ಟ) ಱದರ (ಡಣ) 3 ಳ (ಟಡಣ) 4 ನ್ನ (ಜ) 5 ವು (ಚಟಡಣ) 6 ಳೊಃ (ಜ) 7 ಕರಿ (ಜ) 8 ಸರ (ಜ) 9 ಕೆಂಗರಿಗಟ್ಟಿದ (ಚಟಡಣ) 10 ಪೂ (ಜ)

ಸುತ್ತುಂ ನವಪಲ್ಲವಮೆಱ
ಲುತ್ತಿರೆ ಪುತ್ತಿದ ಮದಾಳಿಕುಳದಿಂ ಮದನಂ
ಗೆತ್ತಿದ [1]ಪೊಸಗಣ್ಬೇಲಿಯ[1]
[2]ಸ[2]ತ್ತಿಗೆಯೆನಿಸಿದುದು ಬಂದ ಚೂತಕುಜಾತಂ ||೫೬||

ವ|| ಆ ಮಾವಿನಡಿಯೊಳಡಿವಾಸಿ (?) ಪೂವಿನ ಪುಡಿಯ ಪುಳಿ[3]ಲಂ[3] ಜಗಲಿಗಟ್ಟಿ ಪೊಸದಳಿರ ಪಾಸಂ ಕುಸುಮದೆಸಳಿಂ ಪಚ್ಚವಡಿಸಿ [4]ಪೊಚ್ಚ ಪೊಸ[4] ಪಚ್ಚೆಲೆಯಂ ತಲೆಗಿಂಬುಮಾಡಿ ಬಾಳ್[5]ವಿಸ ವಿಸ್[5]ತದಿಂ ಬಿತ್ತರಿಸಿದ ಬಿತ್ತರಿಗೆಯಂ ಕಾಲಡೆಸೆಗೆ ಪೋಗೆ ನೂಂಕಿ ಪರಿಶ್ರಮಮಂ ಕಳೆಯಲೆಂದು ಪವಡಿಸಿ ಕರ್ಪೂರದ ಸರಲಂ ಬಾಯೊಳ್ಪೊಯ್ದು ತಂಬುಲಮಂ ಕಳೆದುಕೊಂಡು

ಅರಸಂ ಶೃಂಗಾರವೃತ್ತಂಗಳನೆ ಗಿಳಿಗಳೊಳ್ ರಾಗದಿಂದೋದುತುಂ ಗಾ
ವರಿಸುತ್ತುಂ ತುಂಬಿಯೊಳ್ ನುಣ್ಪಡರ್ದ ಶಿಖಿ ಪಿಕಾರಾವದೊಳ್ ಲೀಲೆಯಿಂದಂ
ಬೆರಸುತ್ತುಂ ಷಡ್ಜ[6]ಮಂ[6] ಪಂಚಮುಮನೆಲ[[7]ರದೊ[7]]ರಂಪದಿಂ ತತ್ಸ್ವರಸ್ತ್ರೀ
ಕರಮಂ ಮೇಲೊಟ್ಟಿ ಮೆಲ್ಪಿಂದಲೆಯೆ ಮುಕುಳಿತ ಸ್ವಾಂತನೇತ್ರಾಬ್ಜನಾದಂ ||೫೭||

ಪ್ರಚ್ಛಾಯಾ[8]ಸುಪ್ತಂ[8] ಮೃದು
[9]ಳ[9]ಚ್ಛದನ ಪ್ರಸರಶಯನ[10]ಪ್ರೋ[10]ತ್ತನು[11]ಸಿ[11]
ಸ್ವೇಚ್ಛಾಸುಖಿತಂ ನಿ[12]ದ್ರೆ[13]ಯ
ತುಚ್ಛಶ್ರಮ ಭರಮನಾಳ್ದುದೊಂದರೆಜಾವಂ ||೫೮||

ವ|| ಅಂತು ಸುಖನಿದ್ರಾಸಕ್ತನಾಗಿ

ಕೊಡೆಮಾವಿಂ ಪಾರಿಜಾತಂ ಕುಸುಮಶಯನದಿಂ ಶೇಷಶಯ್ಯಾತಳಂ ಕೀ
ಟ್ಪಡೆ ಪಂಕೇಜಾಕ್ಷನಂತಾ ಯುವತಿಯಮಳ ನೇತ್ರಪ್ರಭಾಪೂರವಾ ಪಾ
ಲ್ಗಡಲಂ ಪೋಲ್ತೊಪ್ಪೆ ಲಕ್ಷ್ಮೀಲಲನೆಯ ತೆಜದಿಂ ಲೀಲೆಯಿಂ ತನ್ನ ಕಾಲಂ
ಪಿಡಿಕೈಸುತ್ತಿರ್ದಳಂ ಕನ್ನೆಯನೆ ಕನಸಿನೊಳ್ ಕಂಡನಾ ರಾಜಪುತ್ರಂ ||೫೯||

ವ|| ಕಂಡು ನಿದ್ರೆದಿಳಿಯೆ ತಳವೆಳಗಾಗದೆ

---

1 ನುಣ್ಬೇಲಿಯ ಪೊಸ (ಚಡಣ) ಗಣ್ಬೇಲಿಯ (ಟ) 2 ಪ (ಕಗಟ) 3 ಯಂ (ಚಟಡಣ) 4 ಪೊಚ್ಚ (ಚಟಡಣ) 5 ಬಿಸದಿಶ (ಡ) 6 ಮಂ (ಚಟ) 7 ದೊಳೊ (ಚಜಟಡಣ) 8 ಸೂತಂ (ಕಗಚಜಟಡ) 9 ನ (ಕಗಚಟಡ) 10 ಪೋ (ಚಡ) ಸೋ (ಟಣ) 11 ಸ (ಜ) ಶ್ರಿ (ಜ)

ಆ ವನಿತೆಯ ನಯನಜ್ಯೋ
ತ್ಸ್ನಾವಿಲಸಿತದಿಂದಮಲರ್ದು ಮಿಗೆ ಮುಗಿದ ನವೇಂ
ದೀವರಮಲರ್ದಪುದೆನೆ ವಸು
ದೇವಂ ಕಣ್ಣಿಱಿದು ನೋಡಿ ವಿಸ್ಮಯದಿಂದಂ ||೬೦||

ನಿಜನಿವ್ರಾಮುದ್ರಿತಾಸ್ಯಾಂಬುಜಮನ[1]ಱ[1]ಕೆಯಿಂ ನೋಡಿ ನಿಶ್ಶಂಕ ನೇತ್ರಾಂ
ಬುಜನಾಗಳ್ ಲಜ್ಜೆಯಿಂದಂ ತೆಗೆಯೆ ನೆಗೆಯೆ ರೋಮಾಂಕುರಂ ಪೊತ್ತುವೋಲ್ ಘ
ರ್ಮಜಳಂ ಕುಳ್ಳಿರ್ದು ತೋಳ್ಬಿತ್ತರಿಗೆಯ ಕೆಲದೊಳ್ ಕಾಲನೊತ್ತುತ್ತುಮಿರ್ದಳ್
ವಿಜಯಶ್ರೀಯಂತೆ[2]ತೋರ್ಪಳ್[2] ಬಿಸಜವದನೆ ಜೇಱೊಂದಪಷ್ಟಂಭದಿಂದಂ ||೬೧||

ಅವಳಾಂ ಮೆಲ್ಲನೆ ತೊಡೆಯಂ
ತಿವಿದಪನೆಚ್ಚಱದೆ ತೆಱಪೆ ಕಣ್ಗಳ ಪಸವೋ
ಡುವಿನಂ ನೋಱ್ಪಿಸಮೇಕು
ಪ್ಪವಡಿಸಿದನೊ ಕುವರನೆಂದು ಬೆಚ್ಚನೆ ಸುಯ್ದಳ್ ||೬೨||

ಮೊಲೆನೋಳಿಂ ಮೇಲುದಂ ತಂಪೆಡವ ಮುಡುಪಿನೊಳ್ನೀಡುತುಂ ವಾಮ[3]ಹಸ್ತೋ[3]
[4]ತ್ಪಲಮಂ ನೈತಂಬ ಬಿಂಬ[5]ಸ್ಥಳದೊಳಿಱುಪುತುಂ ಬಳ್ಕಿ ಮಧ್ಯಂ ಕಚಂ ಬಿ
[6]ಟ್ಟಳಿಗ[6]ಣ್ಪಂ ಸಾರೆ ಬೆನ್ನೊಳ್ಪಸು ಮುರಿಯೆ ಮೊಗಂ ಕೊಂಕೆನಿಂದಿರ್ದು ಚೆಲ್ವಿಂ
ಬಲಗೆಯ್ಯಿಂ ಬೀಸುತಿರ್ದಳ್ಬಿಸರುಹದಳದಿಂ ಕಾಂತೆ ಮತ್ತೊರ್ವಳಾಗಳ್ ||೬೩||

ವ|| ಅಂತು ತನ್ನ ಬೞಿಯನೆ ಬಂದ ಭಾಗ್ಯದೇವತೆಯಂತಿರ್ದಳಂ ಕಂಡು ಕನಸೆ ನನಸಾದುದೆಂದು ಪಂಡಿರ್ಕಾರಣಮೆನ್ನ ಬೀಡುಂ ನಾಡುಮಂ ಬಿಟ್ಟೋಡಿ[6]ಬಂ[6]ದೊಡ ಮವಳ್ದಿರೆನ್ನ ಬೆನ್ನನೇಕೆ ತಗು[7]ಳ್ದಪರ[7]ನ್ನೀವೆನೆಂದೇವೈಸಿ[8]ದಂತೆ[8]

ಮೊಗದೊಳ್ನಾಂಟಿದ ಕಣ್ಣಂ
ತೆಗೆ[9]ಯೆನೆ[9] ಕಣ್ಣೊಡನೆ ಪರಿದು ನಾಂಟಿದ ಮನಮಂ
ತೆಗೆಯೆನೆ ಭೋಂಕನೆ ಕಾಲಂ
ತೆಗೆದಂ ವಸುದೇವನಂಕದಿಂದಂಗನೆಯಾ ||೬೪||

---

1 ಱ (ಜಟಡ) 2 ರ್ವರೆ (ಟಣ) ಯೊರ್ವಳ್ (ಡ) 3 ಹಂಭೋ (ಜ) 4 ತ್ಪಲ (ಜ)
5 ಟ್ಟಳುವಿ (ಜ) 6 ಬಂದೆಂ ಬಂ (ಜ) 7 ಳ್ದು ಬಂದಿಪಿ (ಜ) 8 ದಂ (ಜ) 9 ಯುದೆ (ಜ)

ವ॥ ಆದಂ ಕಂಡಾ ಚಿತ್ರಲೇಖೆಯೆಂಬಾಕೆಯು ಕೆಳದಿ ಬೀಸುವ ಬಿಸರುಹದೆಲೆಯ ಬಿಜ್ಜಣಿಗೆಯಂ ಮುಗುಳ್ನಗೆಯಿಂ ಪೊದಯಿಸೆ ಪೂವಿನ ಬಿಜ್ಜಣಿಗೆಯಂ ಮಾಡಿ

[1]ಬಿಡಿಸುವೆಯೇಂ[1] ಕಾಲಂ ಕೈ
ವಿಡಿದಪಳೀಗಳ್ಕುಮಾರಿ ನೀನೀಕೆಯ ಕಾ
ಲ್ವಿಡಿವಂತಾದಪುದಿನ್ನೇಂ
ತೊಡರ್ದ್ಯ ಕಡುಗೆಲ್ಲಕಾರ್ತಿಯಿಾ ಕಾಂತೆ ಗಡಾ ॥೬೫॥

ವ॥ ಅರಸನಂತೆಂಬುದೇನೆನೆ ಮತ್ತಮಾಕೆ

ಈ ಮಾವೀಕೆಗೆ ಕಾಮನರ್ಚಿಸಿದವಾ[2]ವೈತಂ[2]ದೊಡಂ ಭಾನುವೀ
ಭೂಮೀಜಾತದ ತಣ್ಣೆಟಿಲ್ಗೊಲಗದಾವಂ ಬಂದು ಸಾರ್ದಿರ್ದೊಡು
ದ್ದಾಮಂ ಬಲ್ಲಿದರಾಣೆಯಿಟ್ಟ ತೆಱದಿಂದಿರ್ದಪ್ಪುದಾ ಶ್ರೀ ಮಹಾ
[3]ರಾ[3]ಮಂ ವಲ್ಲಭನೀ ಕುಮಾರಿಗಿದುಸಿರ್ದಾವೇಶಮುರ್ವೀಶ್ವರಾ ॥೬೬॥

ವ॥ ಈ ಪುಣ್ಯವತಿಯುಮಿಾ ಪೌಟಿಲನಾಳ್ವ ಮಗಧಾಧಿಪತಿಯ ಮಗಳ್ ಶ್ಯಾಮಳೆಯೆಂಬೊಳೀ ಕೋಮಳೆಯಿಂದು ಸಿಸಗಿದಿರ್ಪರ್ಪಂತೆ ಒಂದೀ ಬನದೊಳಗೆ ಬಿನದದಿನಾಡುತ್ತುಮಿರ್ದು ನೀಮಿಾ [4]ಪಾಮ[4]ರದಡಿಯೊಳ್ ಒಂದಿರ್ದುದುಮನೀ ತರುಣ ತರುಚ್ಛಾ[5]ಯೆ ಪ್ರತಿಚ್ಛಾಯೆ[5]ಯಂತೆಯುಂ ನೆಲದೊಳ್ನಾಂಟ ಬೇರೂಱಿ ದಂತೆಯುಮೆತ್ತಲುಂ ತೊಲಗದಿರ್ದುದುಮಂ ಕಂಡು ಆದೇಶ ಪುರುಷನೆಂದಱಿದು ಪರಿತಂದು ಪೇೞ್ದ ವನಪಾಲಕಂಗೆ ಪಸಾಯಮನಿತ್ತು ಮತ್ತಮಿಪಂ ತಮ್ಮ ಬೊಪ್ಪಂಗ ಱಿಪಲ್ ಕಳುಪಿ ಕೆಳದಿಯರ ನೂಪುರಕ್ವಣಿತಮೆ ಬದ್ದವಣಮಾಗೆ ರಾಗದಿಂ ಬಂದಿಲ್ಲಿ ಬಸಂ[6]ತನ[6] ಮನೆಗೆ ಬಿರ್ದು ಬಂದ ಕಾಮದೇವನಂತೆ ಬಟಲ್ದು ಬೆಂದು ಬೆಱಗಾಗಿ ಸಿಶ್ರಮಿಸೆ ಮಿಸುಗುತ್ತಿರ್ದ ನಿನ್ನ ಪದಪ್ರಚಾರಾತ್ಯರುಣ ಸರಸಿಜದ ಸಿರಿಯೆ ಸನ್ನಿದಮಾ ದಂತೆ ಸಮ್ಮದಮನಪ್ಪುಕೆಯ್ದು

ಚಾಮರವಿಕ್ಕುವಂತೆ ತನು ಚಂಪಕಮಾಳಿಕೆಯಂ ಮುಸುಂಕುತುಂ
ಪ್ರೇಮ ವಿಳೋಕಮೆಂಬ ಪೊಸಪೂವಿನ ಪಚ್ಚಡದಿಂ ಕರಾಬ್ಜ ಘ
ರ್ಮಾಮೃತದಿಂದೆ ನಿನ್ನಡಿಗಳಂ ನಯದಿಂದಮೆ ಪೂಸುತಿರ್ದಪಳ್
ಶ್ಯಾಮಳೆ ಪುಷ್ಪಕೋಮಳೆಯಿದೀಕೆಯ ವೃತ್ತಕಮೇಕೆ ಬೆರ್ಚುವೈ ॥೬೭॥

1 ಬಿಡು ಇಂದೇಂ (ಆ) 2 ಯ್ತಂತೆಂ (ಚಟಡಣ) 3 ದಾ (ಆ) 4 ಮ (ಚಜಟಡ)
5 ಯೆ (ಜಡ) 6 ತಂ ತನ್ನ (ಚಟಡಣ)

ಕೀರ[1]ಕುಳ[1]ಸ್ವರಂ ಮಧುರ ಮಂಗಳಪಾಠಕನಾದಮಾಗೆ ಝೇಂ
ಕಾರಿಸುತಿರ್ಪ ತುಂಬಿಗಳ ಗಾವರಮೊಪ್ಪುವ ಗೇಯಮಾಗೆ ಕೈ
ವಾರದಿನೀಕೆಯಂ ನಿನಗೆ ಚಿತ್ತಭವಾಗ್ನಿಯೆ ಸಾಕ್ಷಿಯಾಗೆ ಕೈ
ನೀರೆರೆ[3]ವಂದದಿಂ ನೊನೆಯ ನೀರ್ಸುರಿವಪ್ಪುದು ನೋಡೆ ಕೋಕಿಳಂ ||೬೮||

ವ|| ಅನ್ನೆಗಂ

ಹರಿಸೈನ್ಯಂ ಹಸ್ತಿಸೈನ್ಯಂ ಪಱಿ ಪಟಯಿಗೆ ಪಿಂಛಾತಪತ್ರೋತ್ಕರಂ ಚಾ
ಮರಮೆಯ್ತ್ರಪ್ಪೇ[2]ಜ[2]ರಂ (?) ಕನ್ನಡಿ ತಳಿರ್ಗಳಸಂ ಒರ್ಪವರ್ಬರ್ಪ ಸತ್ಪೆಂ
ಡಿರ ತಂಡಂ ಪೆಂಡವಾಸಂ ಪಡಿಯಱರಣುಗಳ್ ಮಂತ್ರಿಗಳ್ಮಂತ್ರಪಾಳರ್
ಬೆರಸಿಂದ್ರಂ ಬರ್ಪವೋಲ್ಮಾಗಧನಧಿಕಬಳಂ ಬಂದನಾನಂದದಿಂದಂ ||೬೯||

ವ|| ಬಂದು ಪೊಸವಾವೆ ಪಸುರ್ವಂದ[3]ರ[3]ಗೆ ಮದುವೆಮಾಡಿ ತನ್ನ ಮಗಳು ಮನಳಿಯನುಮನೊಡಗೊಂಡು ಪೋಗಿಯರ್ಧರಾಜ್ಯಮಂ ಬಟ[3]ವಟ[3]ಗೊಟ್ಟು ಸುಖದಿನಿರೆ

ಅಲಸಿಕೆ ನೋಟದೊಳ್ ತಣಿವು ಕೂಟದೊಳುಕ್ಕೆವಮಟ್ಟಿಱೊಳ್ ಚಲಂ
ಗೆಲವಿನೊಳಪ್ಪಿನೊ[4]ಳ್ಧರವುರುಂಟೆನುಕಂ[4] (?) ಬೆಸಕ್ಕೆವ ಭಂಗಿಯೊಳ್
ಪೊಲೆಗೆಳೆಸೋಲದೊಳ್ ಪದಿರೊಳೊತ್ತಿದಿರೊಳ್ ಪಲಮಾತು ಮಾನದೊಳ್
ಕಲಿತನಮಾಗದಂತಬಲೆ ವರ್ತಿಸಿದಳ್ ಕವಿತಾವಸಂತನೊಳ್ ||೭೦||

ಚುಂಬನಮಪ್ಪ ಚಪ್ಪರಣೆ ಜೇಡುವ ಬಕ್ಕುಡಿ ಕಾಯ್ದು ಕೂಡುವ
ಟ್ಟುಂಬರಿಯೆಂಬಿವಾಗೆ ಸಲೆ ತನ್ನವು ನಲ್ಲನ ಬಾಯ ತಂಬುಲಂ
ತಂಬುಲಮಿಕ್ಕಿದಣ್ಪು [5]ತನಗಣ್ಪು[5] ತುಱುಂಬಿದ ಪೂವೆ ಪೂವು[6]ಮು[6]
ಟ್ಟಂಬರಮಂಬರಂ ನಿರುತಮಾಗಿರೆ ಕೊಂಡಳನಂಗ ಸೌಖ್ಯಮಂ ||೭೧||

ವ|| ಅಂತಪ್ಪುಕೆಯ್ದೊಂದುದಿವಸಂ ವಿಷಮನೃತ್ಯಶ್ರಮ[7]ಶ್ರಾಂತೆ[7]ಯಾಗಿ

ಉಟ್ಟ ದುಕೂಲಮುಟ್ಟಪೊಲತಿಸ್ಫುಟಮಾಗಿರೆ ತೊಟ್ಟಕುಪ್ಪಸಂ
ತೊಟ್ಟಪೊಲಿಟ್ಟುದಿಟ್ಟಪೊಲಣಲ್ ನಱುದಂಬುಲದಿಂದೆ ಬೀಗೆ ಸುಯ್
ಸುಟ್ಟುದಿರಲ್ಕೆ [8]ಸ್ಮಾ[8]ರ್ತರೆ ಕಚಂ ಮೊಗದೊ[9]ಳ್ತ್ತ[9]ಱದಿಂದೆ ತನ್ನ
ಮೇಲಿಟ್ಟೆಡದೋಳನತ್ತ ಮೊಗಮಾಗಿಯೆ ನಿದ್ರೆಯೊಳಿರ್ದ ನಲ್ಲಳಂ ||೭೨||

1 ಕರ (ಚಟಡಙ) 2 ಝು (ಚ) ಜ್ಝ (ಜ) ಜ್ವ (ಡ) 3 ಮಾ (ಚಟಡಙ) 4 ಳಧರೆವಿಂ ಟವುತಂ (ಚ) ಧರಂವಿಂಟವುತಂ (ಡ) ಳ್ದರ.. ವಿಂಟರುತಂ (ಙ) 5 ತುಱ್ರುಬಿಂಗೆ (ಚಟಡ) ತುಱ್ರುಂಬಿಗೆ (ಙ) 6 ವು (ಜ) 7 ಶ್ರಥೆ (ಚಟಙ) ಶ್ರದ್ಧೆ (ಡ) 8 ಸೋ (ಚಟಡಙ) 9 ಳ್ತೊ (ಟಙ)

ವ|| [1]ಕಂಡು ತಾನ್ನೆವಕಾಱನಪ್ಪ ಕಾರಣಮೇವಯಸಿ[1]

ಶ್ರವದಿಂ ಭಾಳಕ್ಕೆ ಬಾನಲ್ವರಿ[2]ದ[2] ಕುರುಳ ಕಸ್ತೂರಿಕಾರೇಣುಜಾಳ
ದ್ರವಮಂ [3]ಕಂಡರ್ದಿ[3]ಕೊಂಡೊಳ್ನನೆಯ ಪೊನೆಯೊಳ್‌ಂ ಬಂದಪೆಂ ಪೋಗಿತಾನ
ನ್ನೆವರಂ ನಿಶ್ಚಿಂತಮಿರ್ಕೆನಲಸ[4]ಳ[4] ನೆಲಸಿರ್ಪಾಗಳೆಂದಾ ಸುಕೇಶಿ
ಶ್ರವಣಶ್ರೀಪತ್ರದೊಳ್ ತಾಂ ಬರೆದಱಿಯದವೋಲ್ ಪೋದನಲ್ಲಿಂ ಕುಮಾರಂ ||೬೩||

ವ|| ಅಂತು ಶರೀರದಿಂ ಜೀವಂ ಪೊಱಮಟ್ಟು ಪೋಪಂತಾರುಮಱಿಯಲೀಯದೆ ಪೊಱಮಟ್ಟು ಪೋಗೆವೋಗೆ

ಸ್ರವ[5]ದಂಭೋ[5]ಧಾರ ಧಾರಾಗ್ರಹಮುಚಳಘನಾಸಾರಸಾ [6]ಸೀರ ಜಂ[6]ಝಾ
ಪವನವ್ಯಾಧೂತ ಭೂಜವ್ಯಜನಮತುಳತಾಪಿಚ್ಛಪಿಂಛಾತಪತ್ರಂ
ಪ್ಲವಗಪ್ಲತ್ಯುತ್ತ್ವತ ದ್ವಿ[7]ಕಿರಕರಗರುತ[7]ಚ್ಛನ್ನ ಶಾ[8]ಖಾಂತ[8]ರಾಳಂ
ರವಿರುಕ್ಸಂಧುಕ್ಷಿತಾಂಗ ಕ್ಷಿತಿಪತಿತನಯಂಗಾಯ್ತು ರಣ್ಯಂ ಶರಣ್ಯಂ ||೬೪||

ಮಳಯಜಮಂ ಬಳಸಿದ ಫಣಿ
ಕುಳಮಂ ಕೇಕಿಗಳ ಕಳರವಂ ಸೋದುದು ಭೂ
ತಳನಾಥರನೋಲಗಿಸುವ
ಖಳರಂ ಸೋವಂತೆ ಸುಕವಿಸೂಕ್ತಿ ಕಳಾಪಂ ||೬೫||

ಸೋಗೆಯ ಸೊಗಯಿಪ ದನಿಗಂ
ತಾಗುವ ಕೀಚಕದ ರುತಿಗಮೊಡಸೋಲ್ತು ಕರಂ
[9]ಬಾ[9]ಗಿ ಕುಲನೊಲೆದು ತಲೆಯಂ
ತೂಗಿದುದರಿಮಿತ್ರವರ್ಜಿತಂ ಗುಣಮಲ್ತೇ ||೬೬||

ಬಯಸಿ ರಸೆಯಹಿಗಳಂ ಮನ
[10]ಮು[10]ಯೆ ನೆಲದೊಳ್ಪೊಕ್ಕು ಬರ್ಹಿಣಾವಳಿಯ ಶಿಖಾ
ವಯವಮಿವೆ ತೋಱದಪುವೆನೆ
ಮಯೂರಶಿಖಿನಿಕರಮೆಸೆದುವಾ ಕಾನನದೊಳ್ ||೬೭||

1–(ಚಟಡಣ) 2 ವ (ಜ) 3 ಕೊಂಡಳ್ಚಿ (ಜ) ಕಂಡತ್ತ್ಸ (ಡ) 4 ಳೆ (ಜ) 5 ದಾಮ್ಭೋ (ಜ) 6 ಸೀರಝುಂ (ಜ) 7 ಕರ ನಿಕರಗುರು (ಜ) 8 ಖಾಳ್ತ (ಜ) 9 ಬೋ (ಜ) 10 ಮು (ಚಟಣ)

ಆಹಿತಬಹುಬದರದಳ
ವ್ಯೂಹ ತಿ[1]ರೋ[1]ಹಿತ ಬುಭುಕ್ಷಿತೋತ್ತಾನ ಮುಖೋ
ಗ್ರಾಹಿ ಶಿರೋರುಣಮಣಿಯಂ
ಹಾಹಾ ಪಣ್ಗೆತ್ತು ಪಾಯ್ದುದೊಂದು ವಿಹಂಗಂ ||೭೮||

ಅಡಗೆಂದೆಲವದ ಪ್ರೂ[2]ವಿಂ[2]
ಗಡಹಡಿಸಿಯೆ ಪಾಯ್ದು ಕಾಯ್ದು ಕಾದಿದುವೊಡಲಂ
ದಡಗಡ[3][ಗ][3]ಪ್ಪಿನಮೆಱಕೆಗ
ಳುಡಿವಿನೆಗಂ ಕಣ್ಗಳೊಡೆವಿನಂ ಕಾಕಂಗಳ್ ||೭೯||

ಅಡವಿಯ ಖಗನಿಕ[4]ರದ[4] ಬಱ
ವಿಡಿದು[5]ಱ[5]ದಱಿಯಟ್ಟಿ ಪಿಡಿಯಲಾಱದೆ ಕಡುಪಿಂ
ಗುಡುಗುಡು ಗುಡೆಂದು ಗಿಡಗಂ
ಕೆಡೆದುದು ಗಱಯುಡಿಯೆ ಪೊಡೆದು ತನ್ನಯ ನೆಲಲಂ ||೮೦||

ಅರ್ಕಾಂಶುಗೆ ಹುಗಲಿಲ್ಲದೆ
ಸೀರ್ಕರಡಿಯ ಕಡುಪಿನಂದದಡವಿಯ ತಮಮಂ
ಮಾರ್ಕೊಂಡು ಸುಱುವ ಕಾಡೆಳ
ವೆರ್ಕಿನ ಕಣ್ ನಡೆವ ಸೊಡರ್ಗಳೆನೆ ಜಲಜಲಿಕುಂ ||೮೧||

ಪೊರೆವಿಡಿದು ಪೊಕ್ಕು ಪಾವಿನ
ಪೆರೆಯಂ [6]ಪೊ[6]ತ್ಕ್ರಾಂತಿಯೊಂದು ಪರಿತರೆ ತಿರಿದೇಂ
ಸರಟಶತಮೋಡಿ ಪೊಕ್ಕುವು
ಸುರನಹಿಗೆತ್ತುದಿರ್ದ ಖದಿರ ಬದರೋದರಮಂ ||೮೨||

ಗಿಡು ಪಿಡಿಯೆ ತನ್ನ ಬಾಲಂ
ತೊಡರ್ದೊಡೆ ಪರಿತರ್ಪ ಬೇಗೆಗಾಡುವ ಚಮರಂ
ಬಿಡಿಸಿದಪೆನೆಂದು ನಿಂದುದು
ಕಡುಲೋಭಂ ಜವನ ಬಂದಿಯೋ ಬಂಧನವೋ ||೮೩||

---

1 ವಿಂರ (ಚಣ) ವಿರೊ (ಟ) 2 ನಂ (ಚಜಟಡ) 3 ವ (ಚಜಟಡಣ) 4 ರಂ (ಚಟಣ)
5 ಱ (ಜ) 6 ಪೆ (ಚಟಡಣ)

ಅಡಸಿ ಬರೆ ಶಬರನುಡುಗಿದು
ದುಡು ಕಣ್ಣಂ ಮುಚ್ಚಿ ಪರಿಯನಾಗಡೆ ಗಡ ಕ
ರ್ದಡಿಗನ ಕಣ್ಣೊಳ್ಪೊವಿನ
ಪುಡಿ ಪೊಕ್ಕುದು ಮಾಱುತೇಱುತಂ ಕಾನನದೊಳ್ ||೮೪||

ಅಹಿಯ ವಿಷವಹ್ನಿ[1]ಗೆಂ[1]ದಹಿ
ಗ್ರಹಮಂ ಪೀರ್ದುರ್ಚುವತ್ಸಭಲ್ಲ[2]ನ[2] ಬಾಯಂ
ದಹಿಯಿಸಿ ಪಾಪಿ ಪಾಪೇ
ನ ಹನ್ಯತೇಯೆಂಬ ನುಡಿಯನೇಂ ನಡೆಯಿಸಿತೋ ||೮೫||

ಮಾವಿನ ತಳಿರೊಳಗೆ ಮುಗು
ಳ್ಮಾವಿನ ಮೊಗಮುಳಿಯೆ ಮಿಸುಪ ತೊಡೆ ನಡು ಜಘನಂ
ತೀವಿದ ಮೊಲೆಯೆಂಬಿವು ವಸು
ದೇವನ ಕಣ್ಗಿತ್ತುವತನುರಾಗೋದಯಮಂ ||೮೬||

ಮಗಮುಗಿಸಿ ಕವಿವ ಮದಗಂ
ಪುಗಳನೆ ಪೊಗೆವಂತೆ ಮೊಱೆವ ಮುಸುಱುವ ಮಱಿದುಂ
ಬಿಗಳಿಂ ಕೊರ್ವಿದ ಕತ್ತುರಿ
ಮಿಗಮಿರ್ಪವೊಲಿರ್ದುದೊಂದು ಗಂಧಗಜೇಂದ್ರಂ ||೮೭||

ತಮಕಿನ ಸರಳದ ಸಪ್ತ
ಚ್ಛದದಾಮ್ರದ ತಳಿರನುಡಿದು ಮೇಯದೆ ಕರಿ ಮೇ
ದುದು ವಿರಹಿಯಱಿಸಿ ಪೊಸವೇ
ಟದ ಪಿಡಿ ನಸುಮೇದು ಬಿಸುಟು ಪೋದೊಣದಳಿರಂ ||೮೮||

ಮಧುಪರಿಮಳಮಂ ಕಾದುದು
ಸುಧೇನು ಪೇಚಕಮನೊಂದು ಮದಗಜಹಸ್ತಂ
ಮಧುಸಖನ ಬಯ್ತರತಿಧನ
ನಿಧಾನಮಂ ಕಾವ ಕಾಳಸರ್ಪನ ತೆಱದಿಂ ||೮೯||

1 ನೆಗೆ (ತಟಪದ) 2 ವ (ಚಬಪಜ)

ತಾಳಸ್ಥೂಳಕರಂ ತಮಾಳವಿಸರಚ್ಛಾಯಂ ಸುರೂಪಂ ಸುವ
ಕ್ತ್ರಾಳೋಕಂ ಶುಭಬಿಂದು ಶುಭ್ರರದನಂ ದಾನಾರ್ದ್ರಗಂಡಸ್ಥಳಂ
ಲೀಳಾಯಾನನುದಗ್ರ ಪಲ್ಲವನದೀ ತಾನಾಯ್ತು ನೂತಕ್ಷಮಾ
ಶೀಳಂ ಕೇಸರಿಗಂ ನಿರೀಕ್ಷಣ ಸುಖಶ್ರೀಪಂಜರಂ ಕುಂಜರಂ ॥೯೦॥

ಗಜವೊಂದಿರ್ದುದು ರೋಹಣಾಚಲದವೊಲ್ ತತ್ಪದ್ಮರಾಗಪ್ರಭಾ
ರಜವಿರ್ಪಂತಿರೆ ತೋರ್ಪ ಪದ್ಮಪಟಲಂ ತಳ್ಪೊಯ್ಯೆ ನೀಳೋತ್ಪಳ
ವ್ರಜಮಿರ್ಪಂತಿರೆ ಮತ್ತಭೃಂಗಮಿಳಿತಂ ದಾನದ್ರವಂ ವಾಳವಾ
ಯಜಮಿರ್ಪಂತಿರೆ ಕಣ್ಣ ಪೆರ್ಮೞೆಯೊಳಂ ಮೇ[1]ಲ್ವಾ[1]ಯ್ದಪಾಂಗಾಂಶುವಿಂ ॥೯೧॥

ನೇಱಿಲ ಪಣ್ತು ಕೊಂಬುಡಿದು ಬಿರ್ದವೊಲೊಟ್ಟಿದ ಸೀ[2]ವರ[2]ಕ್ಕೆ ಪಾ
ಯ್ದಾಱಿಡಿಱಿಂಡಿನಿಂ ಮುಱಿದು [3]ಪೂಸಿದ[3] ಮಾವಿನ ಕೊಂಬು ಮೇಲ್ಮದಂ
ಗಾಱಿ ಕಟಂಗಳುಣ್ಮಿವಿಡೆ ಕಾಯ ಒಲಂ ಮಿಗೆ ಬೇಗೆಯಿಂದೆ ಬೆಂ
ದಾಱಿದ ಬೆಟ್ಟನಂತೆ ವನವಾರಣಮಿರ್ದುದದೊಂದು ತಾಣದೊಳ್ ॥೯೨॥

ಚೂತಾಮೋದಕ್ಕೆ ಮೂಗಂ [4]ತದುಕಿಫ[4] ತಳಿರ್ಗಾಸ್ವಾದಮಂ [5]ಕತ್[5]ಪುಳಿಂದೀ
ಗೀತಕ್ಕುತ್ಕರ್ಣಮಂ ಕುಟ್ಮಳಿತನಯನಮಂ ಕೋಕಿಲಾಸ್ಯಕ್ಕೆ ಮೆಯ್ಯಂ
ಸ್ರೋತಶ್ರೀತಾನಳಂಗೊಪ್ಪಿಸಿ ಸುಖಮಯನಾಗಿರ್ದುದಸ್ಪಂದಮಂದೀ
ಭೂತಂ ಕರ್ವೆಟ್ಟನಂ ಕಂಡರಸಿ ಸಮೆದವೋಲ್ ನೀರದಾಭಂ ಮದೇಭಂ ॥೯೩॥

ನನೆವೆರಸು ಗುಜ್ಜಮಾವಿನ
ಕೊನರ್ಗಳನುಡಿದುಡಿದು ನೀಡೆ ಬೇಟದ ಪಿಡಿಯೇಂ
ಮನನೊಸೆದು ಮೇವುತಿರ್ದುದೊ
ವನಕರಿ ಪರಿದಂತೆ [6]ದತ್ತ[6]ಹಸಿತಕಟಾಕ್ಷಂ ॥೯೪॥

ಕಡೆವಾಯಿಂ ಪ್ರತಿಹಸ್ತದೊ
ಳಡಸಿದ ತಳಿರುದಿರೆ ತಳ್ತ ಕೆಯ್ಯೊಳೆ ಕೆಯ್ಯಂ
ಪಿಡಿದು ಪಿಡಿ ತುಱಿಸುತಿರ್ದುದು
ಕಡೆಗಣ್ಣಂ ಸಮೆದ ಕರಿಯ ಕೊಂಬಿನ ಕೊನೆಯೊಳ್ ॥೯೫॥

1 ಲ್ಪೊ (ಚಟಡಣ) 2 ದಱ (ಟಣ) 3 ಸೂಸಿದು ಸೂಸಿದ (ಜ) 4 ಕದಿಕಿಪ (ಚಟಣ) ಕದುಕಿನ (ಡ) 5 ಸತ್ (ಜ) ಕಲ್ (ಡ) 6 ದಂಕ (ಚಟಡಣ)

ಅನುಸಿಂಚತ್ಪಲ್ಲಕೀ ಶೀಕರ ಪರಿಚಯದಿಂ ಶೀತಶೀತಂ ಲತಾಲಿಂ
ಗನದಿಂದಂ ಮಂದಮಂದಂ ಫಣಿ[1]ಗಣವಿಷ[1]ದಿಂ ಭೀತಭೀತಂ ಚಳಚ್ಚಂ
ದನಶಾಖಾಂದೋಳದಿಂದಂ ಚಕಿತಚಕಿತಮಾಯ್ತುಚ್ಚರತ್ಕೀಚಕ ಪ್ರ
ಸ್ವನಿತಂ ವಾನೇಯನಾಗಸ್ಫುಟಿತಕಟ ಮದಾಮೋದಭಾರಂ ಸಮೀರಂ ||೯೬||

ತಳಿರಂ ತೂಗಿ ಪರಾಗಮಂ [2][ಪೊರೆ][2]ದು ಪೂನೀರಂ ತಡಂಗೂಡಿ ಗು
ಗ್ಗುಳನಿರ್ಯಾಸಮನಾಂತು ಚಂದನರಸಕ್ಲೋದಂಗಳಂ ಪೊತ್ತು ಶೀ
ತಳಕರ್ಪೂರಮೃಗೋದ್ಭವಾ[3]ಗು[3]ರುಕುಮುಸ್ತಾಗ್ರಂಥಿಗಂಧಂಗಳಂ
ತಳೆದೇಂ ಗಂದಿಗರಂತೆ ಬಂದೊಲೆದುದೋ ಮತ್ತೊಂದು ಮಂದಾನಿಳಂ ||೯೭||

ವನಜಮನೊಕ್ಕಲಿಕ್ಕಿ ಮಱಿದುಂಬಿಯನಾಳ್ದು ತರಂಗಮೆಂಬ ತ
ಕ್ಕಿನ ಪರಿಕಾಱರಂ ತುಱಿದು ಸೀಕರಮಂ ತಳೆದೊಟ್ಟಿಕೊಂಡು ಪೂ
ವಿನ ಪುಡಿಯಂ ನೃಗೇಂದ್ರ ಭಯದಿಂದ ತಿರೋಹಿತನಾಗಿ ಬರ್ಪ ಕಾ
ನನ ಕರಿಯಂತೆ ಬಂದುಪೆಲರೊಯ್ಯನೆ ರಯ್ಯನೆ ಸಾರಿದೇಂ [illegible] ||೯೮||

ಆ ಗಾಳಿಪ[4]ಪ[4]ಗಿಸಿಂದಮೆ
ಪೋಗಿ ಪರಿತ್ರಸುಪ[illegible] [illegible]
ನಾಗೇಂದ್ರನಂತೆ ಪ [illegible]
ಲಾಗಮನೇ ಕಂಡನೊಂದು [illegible] ||೯೯||

ಗಂಗೆಯ ಗೋತ್ರವೇ [illegible] ಬಿತ್ತೊ ಮ
ತ್ತಿಂಗಳ [illegible] [illegible] ತೋರ್ಪ ಬೆ
ಳ್ದಿಂಗಳ ಬೈಸಿಯೋ [6]ಬನ[6]ದ ದೀವದೆಯ [illegible] ಕಣ್ಣ ಬೆ[7]ಳ್ಪು[7] ಬೆ
ಳ್ದಿಂಗೆಡೆವತ್ತೊ ಪೇಱಿಮೆನೆ ನಿರ್ಮಲಮಾದುದು ನೀರಬಾಕರಂ ||೧೦೦||

ತೆರೆಯಿಂ ಕೆ[8]ಯ್ಮಿ[8]ಱಿದಾಡುವಂತಿರೆ ಚಳನ್ಮೀನಂಗಳಿಂ ನೋಡುವಂ
ತಿರೆ ನಾನಾ ಮಧುಪಾನಮತ್ತಮಧುಲಿಟ್ ಝೇಂಕಾರದಿಂ ಪಾಡುವಂ
ತಿರೆ ಮೇಲ್ವಾ[9]ಱು[9]ವ ಕುಂಕುಮಾರುಣ ರಥಾಂಗದ್ವಂದ್ವದಿಂ ತತ್ಪಯೋ
ಧರಿ [illegible] ||೧೦೧||

1 ವಿಕಸನ (ಚಡಗ) ವಿಳಸನ ( ) [illegible] ಪಾಠಾಂತರವನ್ನು ಉಪಯೋಗಿಸಿಕೊಂಡಿದೆ. 2 ಪಿರಿ (ಚಟ [illegible]) — (ಜ) 3 ಕ (ಚಜ) ಗ (ಟಡ) 4 ರ (ಜ) 5 ಪಳ್ದ (ಜ) 6 ಜನ (ಚಟಡ) ಜಗ (ಗ) 7 ಳ್ಪು (ಟ) 8 ಯ್ಮಿ (ಚಟಡಟ) 9 ಡು (ಜ)

**ನೆಱೆ[3] ಜಳಕೇಳಿಯಾಡಿ ಪೊಱಮ[1]ಟ್ಟ[1] ವನೇಚರಿಯರ್ಕಳೆಂಬಿನಂ**
**ತುಱುಗಿರೆ ತೀರದೊಳ್ ನವತಮಾಳ ಲತಾವಳಿಯಬ್ಜಷಂಡಮೊಳ್**
**ಪೊಱಮಡದಿರ್ದುವಾಕೆಗಳ ಕಣ್ಗಳುಂ ನೊಲೆವಿಂ[2]ಡು[2]ಮೆಂಬಿನಂ**
**ಮುಱುಗಿದುವೊರ್ಮೆಯುಂ ಪೊಳೆವ ವಿಸಂ[3]ಗು[3]ಲಮುಂ ಪೊಣರ್ವಕ್ಕಿಯೊ[4]ಕ್ಕ[4]ಲುಂ**
||೧೦೨||

ಹರಿಯ ನಳಿನಾಭಿನಳಿನಂ
ವಿ[5]ರಂಚಿಯುಂ[5] ಪಡೆದುದರ್ಕೆ ಪುರುಡಿಸಿ ತಾನಾ
[6]ಹ[6]ರಿಯನೆ ಪಡೆದವೊಲೆಸೆದುದು
ಸರೋವರಾವರ್ತ ನಳಿನಮೊಂದಳಿಗರ್ಭಂ ||೧೦೩||

ತರುಣ ಬಿಸ[7]ಸದನಮುಜ್ಞಾ[7]
ಕರ ಕರಿ ಮೇಗೊಟ್ಟಿಕೊಂಡುದದು ನೀರ್ವೂವಂ
ಸರಸಿರುಹಪತ್ರಕರ್ಣಂ
ತರಂಗತರಮುಚ್ಯಮಾನ ಶೀಕರನಿಕರಂ ||೧೦೪||

ವನರುಹ ಸಹಸ್ರನೇತ್ರನ
ನನಿಮಿಷ ಸೇವಿತ[8]ದಿ[8]ನಾ ಸರೋವರಸುರನಾ
ಥನನಾಂತ ಕರಿಪೊಲೆಸೆದುದು
ವನಕರಿ[9]ಯು[9]ನ್ಮಗ್ನಪೂರ್ವಕಾಯಂ ಕ್ಷಣದಿಂ ||೧೦೫||

ಸೊಗಯಿಸಿದುದು ಕನಕಾಬ್ಜದ
ಮುಗುಳ್ಗನೆಯಿಂ ಕರಿಯ ಬಿಳಿಯ ಕೆಂಪಿನ ನೀರ್ವೂ
ವುಗಳಿಂದೆ ಪಂಚರತ್ನದ
ಪಗನಂ ತೆ[10]ಱೆ[10]ದಂತೆ ಸರಸಿ ಸರಸಿಜದೆಲೆ[11]ಯಂ[11] ||೧೦೬||

ನೀಲದ ಪೊಳೆವ ಪರಲ್ಗಳ
ಕೀಲಣೆಯಿಂ ಜಲಕನಾದ ಜಲದೇವಿಯ ಪೊ
ನ್ನೋಲೆಯೆನಿಸಿದುದು ಪತ್ರಕ
ಪೋಲಗತಂ ಕನಕನಳಿನಮೊಂದಳಿ[12]ಮು[12]ಳಿನಂ ||೧೦೭||

---

1 ಟ್ಟು (ಜಡ) 2 ಬು (ಜ) 3 ಗೊ (ಚಟಡ) 4 ಕ್ಕಿ (ಚಟಡಣ) 5 ರಿಂಚನಂ (ಜಡ) 6 ಪ (ಚಟಡಣ) 7 ದಶನ ಮುಜ್ಞಾ (ಜ) 8 ನ (ಜ) 9 ಮು (ಜಟ) 10 ಗೆ (ಟಣ) 11 ಯಿಂ (ಣ) 12 ನ (ಚಣ)

ಕೊಳದೊಳೆ ವ್ಯೆಗರೆದ[1]ಬ್ಯಾ[1]
ಕುಳಮಿರ್ಪವೊಲಿಂದು ಕೂಡಿದುದು ಕುಮುದಿನಿಯೊಳ್
ಜಳರುಹಮಂ ಕಡಿದುದು ಸ್ವೈ
ವಳತರು[2]ವಂ ಕೊಂಬು[2]ಗೊಂಡುದೊಂದು ಮರಾಳಂ ॥೧೦೮॥

ಗಲ್ಗಲನೆ ಕರಗುವಾಲಿಯ
ಕಲ್ಗಳ[3]ವೋಲ್[3] ಕರಗಿ ಪ[4]ರಿ[4]ವ ಜೊನ್ನದ ತಿಂಗ
ಳ್ಗಲ್ಗಳೊಸರದೆನೆ ಕ[5]ಬಿಲ್ದೈ[5]
ಕಿಲ್ಗೊಳನೆನೆ ಕುಳಿರ್ದುದಾ ಜಳಂ ತಿಳಿಗೊಳದಾ ॥೧೦೯॥

ಊದೆ ಕರಿಗಳ್ ಸರಸ್ಸ್ವ
ಚ್ಛೋದಕಮಂ ನೆತ್ತಿಗಡರ್ದ ಪನಿಗಳೆ [6]ಪ್ರೆಸ[6]ಮು
ತ್ತಾದುವದಲ್ಲದೊಡಡವಿಯ
ವೇದಂಡದ ನೆತ್ತಿಯಲ್ಲಿ ಮುತ್ತುಗಳೊಳವೇ ॥೧೧೦॥

ತರುಣತರಂಗೋತ್ಥಿತ ಸೀ
ಕರಹಿಮದಿಂ ನೇದೆಗೊಂಡವೊಲ್ಪೊಕ್ಕು ಸರೋ
ಜ ರಜಃಪರ ಗುಂ[7]ರಿ[7]ತಮೆನ
ಲರಳಿದುದದು ಕುಮುದ ಮುಕುಳ ಕೋಟರ ಕುಟಿಯೊಳ್ ॥೧೧೧॥

ವ॥ ಆ ಕುಸುಮಾ[8]ಕರ[8]ಮೆಂಬ ಕಮಳಾಕರಮಂ ಕುಮಾರಂ ಪೊಕ್ಕು ಪ್ರಕ್ಷಾಲಿತ ಪಾದ ಮುಖಕಮಳನುಂ ಪೀತ ಶೀತಜಳನುಮಾಗಿ ನೀರಜರಜದ ನೀರ್ಗುಂಕುಮಮಂ ತೊಡೆದು ತಡಿಯೊಳಿಕ್ಕಿರ್ದ [9]ಗಜ[9]ಮದದಿಂ ತಿಳಕವಿಕ್ಕಿ ಸೆಂದುರದ ಬಿರಿಮುಗುಳಂ ತುಱುಂಬಿ ಕಮಳಪತ್ರಮಂ ರಾಗವಟ್ಟಕಟ್ಟಿ ಕಾವುವೆರಸಿರ್ದ ಕರಿಯ ನೆಯ್ದಿಲನಂಕುಶಂ ಮಾಡಿ ಪಿಡಿದು ವಿನೋದದಿನಾಸೆವಸದನಂಗೊಂಡು ಆ ಕೊಳನ ತಡಿಯೊಳ್ ಸಮವ ಸರಣದಶೋಕೆಯಂತಿರ್ದ ಅಶೋಕೆಯ ನೆೞಲೊಳ್ ಬೆಸದ ಮೆಯ್ಯಂ ಮುಱಿದು ಕಾಯ್ತೊಱಗಿದ ಬ[10]ಳ್ಳಿಗವುಂ[10]ಗಂ ಮಲಂಗಿ ಕುಮಾರಂ ಕುಳ್ಳಿರ್ದನನ್ನೆಗಂ

---

1 ವೋ (ಚಟಡಣ) 2 ಮಂಕುಟುಕು (ಚಡ) ಪುಂಕು ಕುಟುಕ (ಟಣ) 3 ವಲ್ (ಚಟಡಣ) 4 ರಿ (ಚಟಡಣ) 5 ಳಿದ್ದೈ (ಚಟಡಣ) 6 ಮುುಸು (ಜ) 7 ದಿ (ಚಟಣ) 8 ರೆಣ್ಣ (ಚಟಡಣ) 9 ಮದಗಜದ (ಜ) 10 ಳಿಕಂ (ಚಟಡ) ಲ್ಲಿಕಂ (ಣ)

ಕೊನೆಗೊಂಬಲ್ತು ಬಿಸಾಂಕುರಂ ಸಿರಮದಲ್ತುತ್ಕಚ್ಛಪಂ ನೇತ್ರಮ
ಲ್ತನಿಮೇಷಂ ಮದಮಲ್ತು ವಾರಿ ಕಿವಿಯಲ್ತಬ್ಜಚ್ಛದಂ ಪದ್ಮಕಾ
ಸನಮಲ್ತಂಬುಜಮಾನೆಯಲ್ತು ಸರದೊಳ್ ಲೀಲಾ[1]ಸರಂ[1] ಪುಟ್ಟಿದ
ತ್ತೆನೆ ಮೂಡಿತ್ತವಗಾಹಮಿರ್ದು ಕೊಳದಿಂ ಕಾಯ್ದೊಂದು ದಂತಾವಳಂ ||೧೧೨||

ತೋರದೆರೆ ಮುಱಿಯೆ ಮೂಡುವ
ವಾರಣಮಂ ಪೋಲ್ತುದಡಸಿ ನಿಡುಗಯ್ಯಂ ಭಂ
ಡಾರಿಸಿ ಮೆಡಱಿದ ತಳಿಯಂ
ಬಾ[2]ರಿ[2]ಯುಮಂ ಮುಱಿಯೆ ಪೊಯ್ದು ಪೊಱಮಡುವಿಭಮಂ ||೧೧೩||

ವ|| [3]ಅಂತು ಮಕರಾಕರದಿಂ ಪೊಱಮಡುವ ಕರಿ ಮಕರದಂತೆ[3] ಕಮಳಾಕರದಿಂ ಪೊಱಮಟ್ಟು ದಡಂಗೊಳ್ವಲ್ಲಿ ಕಿೞ್ತು ಕೆಡೆದು ಕಾಲೊಳ್ತೊಡರ್ದು ಬಂದ ಬಿಸವಲ್ಲಿಗಳ್ ನೆಲನನೊಡೆದು ನಾಗಲೋಕಮಂ ಪುಗವೇಡೆಂದು ಗರುಡನ ಕಾಲಂ ಪತ್ತಿ ಬಿಡದ ಪಾವುಗಳಂತಿರ್ದುವದಱ ಗಾಳಿಗೆ ವನಗಜಘಟೆಗಳೆಲ್ಲಂ ಘನಘಟೆಗಳಂತಿ[4]ರೊಡೆ[4] ದೋಡಿದುವು ಮೇಲ್ವಾಯ್ದ ಸಿಂಗಂಗಳೆಲ್ಲಮಾದಿಯ ಪಂದಿಯಂ ಪೇಱಿದ ಗ್ರಾಮ ಸಿಂಹಂಗಳಂತಿರ್ದುವು ಪೆಳಱಿ ಬೆಂಗುಡುವ ಬಟ್ಟಾನೆಗಳಿಂ(?) ಮಣಿಯೇಱಿಂದಿಱಿ ದೆತ್ತಿದಲ್ಲಿ ಮದದ ಮಸಿಯಿಂ ಮಳೀಮಸಮಾದ ಮುಸುಂಬು ಮುಸುವಿನ ಮುಸುಂಬಿ ನಂ[5]ತೆ[5] ಕಡಲಂ ಕಟ್ಟಲೆಂದು ಬೆಟ್ಟಮಂ ಕಿೞ್ತೆತ್ತಿದ ಸುಗ್ರೀವನಂತಿ[6]ರ್ದುದು[6] ವನಮಂ ಪೊಕ್ಕು ಮರಮುಸಕದಿಂ ಮರವಾಯ್ದು ಮರದುಱುಗಲಂ [7]ಕಿೞ್ತೀಡಾಡುವಲ್ಲಿ ದಶಗ್ರೀ ವನ ವನಮಂ ಕಿೞ್ತೀ[7]ಡಾಡುವಣುವನಂತಿರ್ದುದು ಪಲ್ಲವಮನುಡಿದು ಸೂಸುವಲ್ಲಿ ದೆಸೆಯಾನೆಗಾಳಿಗಕ್ಕೆ ಪುಲ್ಲಂ ಸೂಸುವಂ[8]ತಿರ್ದುದು ಅಂತು[8] ಮಾಮು[9]ಸಕಂ[9]ಮಸಗಿ ಬಿ[10]ಸ[10]ಟಂಬರಿವ ಮದಕರಿಯಂ ಕುಮಾರಂ ಕಂಡೀ ಕಟ್ಟಾನೆಯನೇಱಿದೊಡಾನೆ ಯಾನೆ ವಿ[11]ನ್ನಾ[11]ಣಿಯೆಂದು [12]ಸ[12]ರಂದೋಱಿದ ಸರದ ಬಱಿಯನೆ ಗಱಿವಱಿಯ ಪಾವಿನಂತೆ ಮೊಗದ ಬಿ[13]ಗಿ[13]ಪುಂ ಕಣ್ಣ ಬೇಡುಂ ಬೆರಸು ಗಾಳಿಗೆ ಗಱಿಮೂಡಿದಂತೆ ಗಿಱ್ರನೆಯ್ತರ್ಪಾನೆಯಂ ಚಪ್ಪರಿಸಿ ಪಿಡಿದಾಸೆಗೊಟ್ಟು ಪುಷ್ಕರಣದೊಳ್ ಕೆಂದಳಂ ಕೆಂದಳಿರಂತೆ ತೊಳಗೆ ದೀರ್ಘಾಂಗುಳಿಯಿಂ ಪಿಡಿದು ಗರುಡನೊಪ್ಪಮಂ ಗಾಳಿಯ ನುಸುಳುಮಂ ಕೈಕೊಂಡು ಕೊಂಡಾಡಿ ಮನಮೆ ಮಾನೆಸೆನಾದಂತೆ ಪ[14]ರಿದುಪರ[14]

---

1 ಲಸಂ (ಚಟಡಣ) 2 ರೆ (ಚಟಡಣ) 3 ಅಂತು (ಜ) 4 ರೋಡಿ (ಚಟಡಣ) 5 ತೆತ್ತಿರೆ (ಚಟಡಣ) 6 ರ್ದುವು (ಚಡಣ) ದುರ್ (ಟ) 7 ಕಿೞ್ತೀ (ಜ) 8 ತು (ಜ) 9 ಸ (ಚಟಡಣ) 10 ಸಾ (ಜ) 11 ನ್ನ (ಜ) 12 ಸು (ಚಟ) ಸಿ (ಡಣ) 13 ಗು (ಜ) 14 ರಿದು ಪೊರೆದುಪರ (ಜ)

ಯೊಳ್ [1]ಬ[1]ಳಲ್ಚಿ ಕುಡೆಂ[2]ಬ ತಿಂಕು[2]ವೊಳಗಿಂ ಬೆಂಗ[3]ಬಾ[3] ಎಂಬಂತೆ ಬೂತಾಟ ನಂಗೆಯ್ದು ಗಜದ ಬೆಂಗೆ ಸಿಂಗದಂತೆ ಲಂಘಿಸಿಯಾನೆಯೆ ಪೊರಜೆಯಾಗೆ ಪೂರ್ವಾಸ ನದೊಳ್ ಪದುಳವಿ[4]ರ್ದುಮಬ್ಬ ಬಾಪ್ಪುಬಾಪ್ಪೆಂ[4]ದು ಕುಂಭಸ್ಥಳಮನಾಸ್ಫಾಳಿಸಿ ಬೀರ ಸಿರಿಯ ಗುರುಕುಚಮನುಗುರೊಳುಗಿದು ಕೋಡಗಂಗಳೆ ಅಕ್ಕೋಡಗವಾಗೆ ಹರಿಣಂಗಳೆ ಹರಿಕಾಱರಾಗೆ ಪರ್ವತಂಗಳೆ ಪ್ರತಿಗಜಂಗಳಾಗುರುಳೆ [5]ನೂಂಕಿಯ ೨ ಸುರುಳೆ ನೂಂಕಿಯು[5]ಮಡ್ಡವಿಕ್ಕಿಯುಂ ಪೊಕ್ಕು ಪರಿಯಿಸಿಯುಮಂತಪ್ಪ ಕಟ್ಟಾನೆಯಂ ಕೆಪ್ಪ[6]ನ[6]ಳವಡಿಸುವಂತೆ ಮಡದೊಳಮುಂಗುಟದೊಳಳವಡಿಸಿದ ರಾಜಪುತ್ರನ ಬಲ್ಪಿಂಗಂ ಬಿನ್ನಣಕ್ಕಂ ಬೆಕ್ಕಸಂಬಟ್ಟು

ಆ ಪ್ರಸ್ತಾವದೊಳಿರ್ವರ
ತಿಪ್ರೌಢಖಚರರಚಿರರುಚಿ ದಿವಿಜಧನು
ರ್ದೀಪ್ರಮಣಿ ಮಕುಟ ವಿಕಟ ಪ
ಟುಪ್ರಭೆಯಿಂ ಭೂಪಭಾನುಗರ್ಘ್ಯಮನಿತ್ತರ್ ॥೧೧೪॥

ಮದಪುರುಷರಗಿದು ರದನಿಯ
ಮದವಿಱಿದ[7]ಱಿವಪುದೆಂದೆನೆ[7] ಮೆಯ್ಯಿಕ್ಕಿದವೊಲ್
ವಿದಳಿತ ವದನ ಪಯೋಜರ್
ಪದೆದಚಿರಂ ಖಚರರಿರ್ವರವನತರಾದರ್ ॥೧೧೫॥

ವ॥ ಆಗಿ ಕಯ್ಗಳಂ ಮುಗಿದು ದೇವ ಬಿನ್ನಪಮಿಾಯಾನೆಯನೇಱುವೆನೆಂಬನ ನಸುನೆತ್ತಿಗೇಱುಗುಂ ಮುನಿವನ ಮುನಿಗುಂ ಪರಿಯಿಸುವೆನೆಂಬನ ಪಸಿಪ್ಪರಿಗುಯಿಮಾ ಯತಿವರ್ತಿಯಂ ವಶವರ್ತಿಮಾಡಲುಮಂಕುಶಮಿಲ್ಲದಂಕಿಸಲುಂ ನಿನಗೆ ತೀರ್ವುದು [8]ನೀನಲ್ಲದ[8] ದೇವನುಮೇತಱ ದೇವನೆಂದು ಗಳಗರ್ಜರಂತೆ ಪೊಗಟ್ದು ಬೇಗಮಿಾ ಗಜದಿನಿೞಿದೆಮ್ಮಧಿವಾಸನಾದೇಶಭಾಗಮನಿಱುಪುವುದೆನೆ ವಸುದೇವನಿೞಿದು ನೀಮಾರ್ಗ[9]ದೇನೆಂಬುದೆನೆ ವಿದ್ಯಾಧರರಿಂತೆಂದರ್

ಮಾಣಿಸಿ ನಿ[9]ದ್ದೆ[9]ಯಂ ಜಿನಪತಿಸ್ನಪನೋತ್ಸವ ಮಂಗಳಾನಕ
ಕ್ವಾಣಮದೊಮ್ಮೆಯುಂ ಜಿನಮುಖಾಮುಹಮುಂ ಸಲವಿಂಪೆ ನೋಟ್ಪಿಕ
ಣ್ಜಾಣೆಮೆಯಿಕ್ಕಲೀಯದಿರೆ ತಾನೆ ನಗೇಂದ್ರದ ದಕ್ಷಿಣೋತ್ತರ
ಶ್ರೇಣಿಗೆ ತಂದು ಮುಂದಿಡುವುದಾರುಹತಂ ಸುರಲೋಕಶೋಭೆಯಂ ॥೧೧೬॥

---

1 ಬಿ (ಚಟಡಣ) 2 ಬತಿಕ್ಕ (ಚಟಣ) ಬಾತಿಂತು (ಡ) 3 ಯಿಂ (ಚಟಡಣ) 4 ರ್ದುಮಜ ಬಾಷ್ಪು ಬಾಷ್ಪೆಂ (ಜ) ರ್ದಮಬ್ಬ ಬಾಷ್ಪು ಬಾಷ್ಪೆಂ (ಟ) ರ್ದುಮಬ್ಬ ಬಾಪ್ಪ ಬಾಷ್ಪೆಂ (ಡ) 5 ನೂಂಕಿಯುಂ (ಜ) 6 ವ (ಚಟಡಣ) 7 ಪುದಳಿಯದೆಂದು (ಚ) ಫುದಿಳಿವುದೆಂದು (ಜ) ಪುದಳಿವುದೆಂದು (ಟಡ) 8 ನಿನಗಲ್ಲದ (ಚಟಡಣ) 9 ರ್ದ (ಚಟಡಣ)

ವ॥ ಆ ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯ ನಿ[1]ಳಿಪ್ಪ[1] ಕಿನ್ನರಗೀತಮೆಂಬ ಪೊಲಿಲನಾಳ್ವೊಂ ಮಹಾಭಾಗನಶನಿವೇಗನೆಂಬನಂಬರಚರನಾಥನ ಮಗಳ್ ಪರ ಪುರುಷ ಶುಕಶಾಲ್ಮಲಿ ಶಾಲ್ಮಲಿಯೆಂಬಳಾಕೆಗನುರೂಪನಪ್ಪ ಪುರುಷನಂ ಖಚರಕುಲ ದೊ[2]ಳಂ ಭೂಚರಕುಲದೊಳಂ[2] ಕಾಣದೆ ಖಿನ್ನನಾಗಿರ್ಪುದುಮಾದೇಶ[3]ಪುರುಷ ನುವಿಶಾ[3] ಮದಗಜಮನೇಱಿದನೆ ನಿಜಾತ್ಮಜೆಗೆ ಮದವನಿಗನೆಂದೊಡಾನಂದದಿನೆಮ್ಮಾಳ್ದ ನೆವ್ಮಿರ್ವರುಮಸೀ ಕರಿಪತಿಗೆ ಕಾಪಂ ಪೇೞ್ದನೆಂದಿಂದಿತ್ತಲೀಯಡವಿಯೊಳಡಿಮಿಡುಕದೆ ಮೃಗಂಗಳಾಗಿರ್ದಿವಿಂದೆಮ್ಮ ಪುಣ್ಯಂ ಬರ್ಪಂತೆ ಬಂದು ಸಾಹಸಪುರುಷನುಮಾದೇಶ ಪುರುಷನುಮಾಗೆ ಎಮ್ಮ ತಪಮುಂ ಶಾಲ್ಮಲಿದತ್ತೆಯ ಕಾಮತಾಪಮುಂ ಸಫಲ ಮಾದುದೆಂದು

ಇದು ದಿವ್ಯಶ್ರೀವಿಮಾನಂ ಮನಮೊಸೆದಿದ ನೀನೇಱು ಬಾ ಪೋಪಮಾ ತೋ
ರ್ಪುದೆ ಕಂಡೈ ಖಂಡಿತಾರಿಸ್ಮಯ ಜಯವಿಜಯಾರ್ಧಾಚಲಂ ನಿನ್ನನೆಯ್ತಂ
ದಿವಿಗೊರ್ಳ್ವಂದಿತ್ತ ಬರ್ಪುಜ್ವಳ ಜಳಧರದಿಂ ನಿನ್ನ ಬರ್ಪುತ್ಸವಕ್ಕೆ
ತ್ತಿದವೊಲ್ ಕೂಟಾಗ್ರದೊಳ್ ನಿರ್ಝರಪಟಳ ಪತಾಕಾಳಿ[4]ಯಂ[4] ಲೀಲೆಯಿಂದಂ
॥೧೧೭॥

ಆನೆಯನೇಱಿದೆಯೇಱು ವಿ
ಮಾನಮನೇಱಿದಪೆಯುಚಳಪತಿಚೂಳಿಕೆಯಂ
ತಾನೆ ಕುಡುಗುಂ ಮಹೋನ್ನತ
ಮಾನೋನ್ನತಿ[5]ಯುಂ ನತೋನ್ನ[5]ತಾರೋಹಣಮುಂ ॥೧೧೮॥

ವ॥ ಎಂದಾ ಖಚರಯುಗಳಮುವಟ್ಟೈಸಿದ ಮಣಿಮಯ ವಿಮಾನಮನೇಱಿ

ಪವನಸ್ಪ್ರೇಂ[6]ಖಾನಳ[6]ಪ್ರೇಚ್ಛಳಿತ ಮರಕತ ಸ್ಥೂಲ ರತ್ನಾವಳೀ ಪ
ಲ್ಲವಮಾಲಾ ತೋರಣಂಗಳ್ಪಸುರ್ಗುಮುರೆಗಳಂ ಪೂಡಿದಂತೊಪ್ಪೆ ಕಯ್ಯೊಳ್
ನವಲೀಲಾ ನೀರಜಂ ರಂಜಿಸೆ ನಿಜರಥಮಂ ಬಂದು ಮಾರ್ತಂಡನೊಲ್ದೇ
ಱುವವೊಲ್ತಾನೇಱಿದಂ ಕಾಂಚನಖಗರಥಮಂ ಮೂರ್ತಿ ಮಾರ್ತಂಡದೇವಂ॥ ೧೧೯॥

ಇದು ಮೃದುಪದಬಾಧಬಂಧುರ ಸರಸ್ವತೀ ಸೌಭಾಗ್ಯವ್ಯಂಗ್ಯ ಭಂ[7]ಗಿ[7]ನಿಧಾನ ದೀಪವರ್ತಿ ಚತುರ್ಭಾಷಾ ಕವಿಚಕ್ರವರ್ತಿ ನೇಮಿಚಂದ್ರ ಕೃತಮುಂ ಶ್ರೀಮತ್ಪ್ರತಾಪ ಚಕ್ರವರ್ತಿ ವೀರಬಲ್ಲಾಳದೇವ ಪ್ರಸಾದಾಸಾದಿತ ಮಹಾಪ್ರಧಾನ [8]ಸೆಜ್ಜೆ[8]ವಳ್ಳ ಪದ್ಮ ನಾಭದೇವ ಕಾರಿತಮುಮಪ್ಪ ನೇಮಿನಾಥ ಪುರಾಣದೊಳ್ ಪಂಚಮಾಶ್ವಾಸಂ

**ಸಮಾಪ್ತಂ**

---

1 ಳಿಂಪ (ಚಟಡಣ) 2 ಳ್ (ಜ) 3 ವಿದರಿ (ಜ) 4 ಯಿಂ (ಚಟಡಣ) 5 ಯುಂ ನ (ಜ) 6 ಖೊಳನ (ಜ) 7 ಗಿನೀ (ಚಟಡ) 8 ಪದವೀ ವಿರಾಜಿತ ಸೆಜ್ಜೆ (ಜಟಡ)

# ಷಷ್ಠಾಶ್ವಾಸಂ

ಶ್ರೀಪತಿಪಾದಂ ಗಗನಾ
ಕೂಪಾರದ ಮುತ್ತುಬೆಟ್ಟಮಾದವೊಲೆಸೆದಿ
ರ್ಪ ಪರ್ವತಕ್ಕೆ ಕೃತಿಕುಳ
ದೀಪಂ ಕವಿತಾವಸಂತ[1]ನವನೀ[1]ಕಾಂತಂ ||೧||

ತುಱುಗಿದ ಕಡಲಂ ಸೂಸುವ
ನಿಱಿಮುಗಿಲೊಳ್ ಪರಿವ ಗಗನಯಾನದೊಳರಸಂ
ನೆಱೆ ಪೋಲ್ತಂ ಸ್ತ್ರೀರತ್ನಮ
ನಱಸ[2]ಲ್ ತಾಂ[2] ಪಾಱಿಪೋಪ ಸಾಂಯಾತ್ರಿಕನುಂ ||೨||

ಕುಲಗಿರಿಸಂಕುಳಂ ಸುಕವಿಶೇಖರನುನ್ನ[3]ತಿ[3]ಗಂಡು ಲಜ್ಜೆಯ
ಗ್ಗಲಿಸೆ ಕುನುಂಗುವಂತೆಸೆದು ತೋಱಿದುವಂದು ಮಿಸುರ್ಪ ಸರ್ಪ ಸಂ
ಕುಲಮನೆ ಕೂಡಿ ಕೊಂಕಿ ಪರಿಗೊಳ್ವ ನದೀನದಜಾಳದಿಂ ಮಹೀ
[4]ತಳ[4]ಮಹಿಲೋಕದಂತೆಸೆದುದಾ ಜಗತೀಪತಿಗೂರ್ಧ್ವಯಾನದೊಳ್ ||೩||

ವ|| ಅಂತುಮಲ್ಲದೆ

ಸಾಗರಮೊಂದು ಕಂಕಣದಿನುರ್ವರೆ ಕಾವಲಿ[5]ಯಿಂ[5] ಕುಳಾದ್ರಿಗಳ್
ಪಾಗಲ ಕಾಯ್ಗಳಿಂ ಸುದಗಜಾವಳಿ ಪಂದಿಗಳಿಂ ನದೀವ್ರಜಂ
ಭೋಗಿಗಳಿಂ ತಡಾಗ[6]ತ[6]ತಿ ಕ[7]ಣ್ಗಳಿನು[7]ನ್ನತಪಾದಪೋತ್ಕರಂ
[8]ಸೀಗು[8]ರಿಯಿಂ ಕರಂ ಕಿಱಿಯವಾದುವು ಕಣ್ಗೆ ಗುಣಾವಲೋಕನಾ ||೪||

* ಮಾಲಿನೀ|| ಪರಿಗತ ಬಹುವರ್ಣಂ ತತ್ಸಮೀಭೂತ ಪದ್ಮಾ
ಕರಸಲಿಲದಚಲಾರಣ್ಯಾ ನಿಮ್ನೋನ್ನತ ಶ್ರೀ
ಕರಮೆಸೆದುದು ಜಂಬೂದ್ವೀಪಮಾದಂ ಬೆಡಂಗಂ
ಬೆರಸಿ ಬರೆದ ಜಂಬೂದ್ವೀಪದಂತೀಕ್ಷಣೀಯಂ ||೫||

---

1 ವನಿತಾ (ಚಟಡಣ) 2 ಲ್ಕಂ (ಜ) ಲ್ (ಡ) 3 ತ (ಚಟಡಣ) 4 ವಲ (ಚಟಡಣ)
5 ಯೆಂ (ಚಟ) 6 ಗ (ಚಜಡ) 7 ಜ್ಯೋಳಿಗು (ಚಟಡಣ) 8 ಶ್ರೀ ಗಿ (ಚಟಡಣ)
* 'ಡ' ಪ್ರತಿಯಲ್ಲಿಲ್ಲ

*ವ|| ಅಂತು ಕಿನ್ನರಗೀತಕ್ಕೆ ಪೋಗಿ ಶಾಲ್ಮಲಿದತ್ತೆಯೊಳ್ಮದುವೆ ನಿಲೆ

ತುದಿ ಮೊದಲಪ್ಪುದಿಂಪಡರೆ ಕೂಡುವ ಕೂಟದೊಳೀಕ್ಷಣಕ್ಕೆ ರೂ
ಪದೆ ಪೊಸತಪ್ಪುದೊಲ್ದೆಳಸಿ ನೋಡುವ ನೋಟದೊಳೇನನಿತ್ತನಿ
ತ್ತುದೆ ಬೆಲೆಯಪ್ಪುದೆನ್ನಸುಗೆ ಬೇಡುವ ಬೇಟದೊಳೆನ್ನ ನಲ್ಲನಂ
ಮದನವಿಕಾರಸಾರಸುಖದಿಂದಮೆ ಮಾಡದೆ ಮಾಣ[1]ನ[1]ಬ್ಜಜಂ ||೬||

ಬಾಯ್ವಸವೋಡದಂತಡರೆ ಚುಂಬಿಸೆಯುಂ ಬಗೆದೆಂತು ತಳ್ತೊಡಂ
ಮೆಯ್ವಸ[2]ವೋಡ[2]ದಪ್ಪು ಗಡ ಕಣ್ಬಸವೋಡದಿದೆಂತು ನೋಡೆಯುಂ
ಕಯ್ವಸದಂತವಂ ನೆರೆದೊಡಂ ಮನಮಾಱದದರ್ಕೆ [3]ಸಕ್ಕಿಯಿಂ[3]
ಸಯ್ವಱಗಾದ ಮೆಯ್ನವಿರ್ಗಳೆಂಬವೊಲಂಗನೆ ಕೂರ್ತು ಕೂಡಿದಳ್ ||೭||

ಸುರಯಿಯ [4]ಮುಗುಳ್ಗ[4]ಳೊ[5]ಳುರುವಳ[5]ದಳಿಪತಿ
ಬಿರಯಿಸೆ ಬೆರಸುವ ಬಸದನ ಬೆಸ[6]ನಿ[6]ರೆ
ಸುರತ ಸುರಭಿರಸ ಪರಿಮಳಮಿಟ[3]ತರೆ
ಬೆರಸಿದನರಮಗನರಸಿಯೊಳೆಸೆದಿರೆ ||೮||

ವ|| ಅಂತು ಬಂದ ಬಸಂತದೊಳ್ ವನ[7]ಜಲ[7]ಕೇಳಿ[8]ಯಾಡಿ ಬಟಿಲ್ದು ಬಂದು[8] ಮಲ್ಲದೆ ಸುರತಶ್ರಾಂತರಾಗಿ ಶಾಲ್ಮಲಿದತ್ತೆಯುಂ ವಸುದೇವನುಂ ದೇವದಂಪತಿ [9]ಯಂತೆ[9] ಸೌಧಾಗ್ರತಲದೊಳ್[10]ತಳ್ತು[10] ಪವಡಿಸುತ್ತುಮಿರೆ

ಬಿಡಿಸಿ ಭುಜಂಗಿಯ ತಪ್ಪಿಂ
ಪಿಡಿದುಯ್ವಂತೆಳೆಯ ಮಲಯಜಾತಮನಳಿಪಿಂ
ತೊಡರ್ದಾ ಖಚರಿಯ ತಪ್ಪಿಂ
ಬಿಡಿಸಿ ನೃಪಾತ್ಮಜನನೊ[11]ರ್ವನುಯ್ದಂ[11] ಖಚರಂ ||೯||

ವ|| ಆಗಳಾ ಶಾಲ್ಮಲಿದತ್ತೆಯುಮೆಚ್ಚತ್ತು ಚಂದನಗ್ರಾಹಿಯ ಬೆನ್ನಟ್ಟುವ ಭುಜಂಗಿಯಂತೆ

1 ದ (ಚಟಡ) 2 ವೋದ (ಜ) 3 ಶಕ್ತಿಯಂ (ಜ) ಸಕ್ತಿಯಿಂ (ಙ) 4 ಬಿರಿ ಮುಗು (ಚಜಟಡ) 5 ಳ್ ರಸ (ಜ) 6 ಸಿ (ಡಙ) 7 ಜ (ಚಟಡ) 8 ಯುನಾಡಿ ಬಂದು ಬಳಲ್ದುದು (ಚಟಡಙ) 9 ಗಳಂತೆ (ಟಡ) 10 ಪಳ್ತು (? ಟ) 11 ಯ್ದನೊರ್ವಂ (ಡ)
* 'ಡ' ಪ್ರತಿಯಲ್ಲಿಲ್ಲ.

ಒಕ್ಕ ಸೆಱಂಗಿನಿಂ ಮೊಲೆಯ ಗಾಳಿಸಿ ಗಂಡುಡೆ[1]ಯು[1]ಟ್ಟು [2]ಪಚ್ಚು[2]ಗಂ
ಟಿಕ್ಕೆ ಬೞಲ್ದ ಬಲ್ಪಿಣಿಲನೊತ್ತಿದೆಱಂಕೆವೊಲೆತ್ತಿಕೊಂ[3]ಡೆರಟ್[3]
ಪಕ್ಕದ ಬಾಳು[4]ಮು[4]ತ್ತಪರ[5]ಮುಂ ಪೊ[5]ಳೆಯುತ್ತಿರೆ ಪಾಱಿದಳ್ ನಭೋ
ಗ್ರಕ್ಕತಿವೇಗದಿಂ ಖಚರಕಾಮಿನಿ ಕಾಮನ ವೀರಲಕ್ಷ್ಮಿವೊಲ್ ||೧೦||

ಅತ್ತಪರಂ ಸಹಸ್ರಕಿರಣಂ ಪೊಣರ್ವಕ್ಕಿಯನಪ್ಪಿದಂತೆ ಪೊ
ನ್ನತ್ತಪರಂ ತಳತ್ತಳಿಸೆ ಪೆರ್ಮೊಲೆಯೊಳ್ ಪೊಳೆಪಿಂ ತೊಡಂಕೆ ಕ
ಣ್ಗತ್ತಿಗೆಗೊಂಬಿನೊಳ್ ನಲಿದು ನರ್ತಿಸುವೊಂದೆಳಮಿಂಚಿನಂತೆ ಮಿಂ
ಚುತ್ತಿರೆ ತೋಳ ಬಾಳನೊಲೆಯುತ್ತುಮೆ ಶಾಲ್ಮಲಿದತ್ತೆ ತೂಗಿದಳ್ ||೧೧||

ವ|| ಅಂತು ಪಾಱಿಪೋಗಿ ಕಿಱಿದಂತರದೊಳ್ ಕುಮಾರನಂ ಕೌಂಕುೞೊಳ ವುಂಕಿಕೊಂಡು ಪೋಪ ಖಚರನಂ ಕಂಡು ಕಡುಮುಳಿದೆಲೆಲೆ [6]ಸ[6]ತ್ತೆಯಿನ್ನೆತ್ತವೋದಪೆ ಯೆಂದು ಮಧುಮತ್ತಕೋಕಿಲಕುಮಾರಿಯಂತೆ ಖಚರಕುಮಾರಿ ಗಜಱಿ ಗರ್ಜನಂ ಗೆಯ್ದು

ಬಿಡು ಬಿಡು ಮನ್ಮನಃಪ್ರಿಯನನಲ್ಲದೊಡಕ್ಕೆನುತಾಕೆ ಖಡ್ಗಮಂ
ಜಡಿ[7]ದೊಡನಾಲಿಯುಂ[7] ಜಲಮುನೊಕ್ಕುವಿನಂ ಶತಖಂಡಮಪ್ಪಿನಂ
ಪಿಡಿ[8]ಲೆ[8]ಳಮಿಂಚು ನುಚ್ಚುನುಱಿಯಪ್ಪಿನೆಗಂ ಕಡಿಖಂಡಮಪ್ಪಿನಂ
ಪೊಡೆದಳದೊಂದು ನೀಲಘನಮಂ ಪೊಡೆವಂತಿರೆ ಮತ್ತದಂತಿಯಂ ||೧೨||

ಸೋಗೆಯ ಕಲರುತಿಗಳ್ಕಿದ
ನಾಗರವೊಲ್ ಗಜಱುವವಳ ದನಿಗಳ್ಕಿ ಖಗಂ
ಪೋಗಲ್ ಪಡೆಯದೆ ಖಚರಿಯ
ಮೇಗವನೀಡಾಡಿ ಪೋದನರಸರ ಮಗನಂ ||೧೩||

ವ|| ಈಡಾಡೆ ಬೀೞ್ವ ಬಾಲಭೂಪಾಲಚಂದ್ರನಂ ಪೆರ್ಮೊಲೆಯೊ[9]ಳಾಂತು[9] ಓಡಿದು ಪುಳಕದಿಂ ಕೀಲಿಸಿಕೊಂಡು ಕುಸುಮಸ್ತಬಕಮಂ ಕುಂಭಸ್ಥದೊಳ್ಕೊಟ್ಟುಕೊಂಡ ಕಾಮಕರಿಣಿಯಂತೆ ಪೋಪ ಶಾಲ್ಮಲಿದತ್ತೆಯನೊಂದು ದಿವ್ಯಧ್ವನಿ

---

1 ಮೆ (ಜ) 2 ಸಜ್ಜು (ಚಡಣ) ಸಚ್ಚು (ಟ) 3 ಡವೊಲ್ (ಚಟಡಣ) 4 ಮು (ಝ)
5 ಮುಂ ಪೆ (ಚಟಡಣ) 6 ಪ (ಜ) 7 ದಡೆವಾಲಿಯುಂ (ಚಟ) ದೊಡೆದಾಳಿಯುಂ (ಜ)
ದೊಡವಾಲಿಯುಂ (ಡ) 8 ದೆ (ಜ) 9 ಳ್ಳಾನು (ಜ)

ಇದು ವಾಣೀಮತ್ತಹಂಸೀಸ್ವನಮಿದು ಮದನಜ್ಯಾಲತಾಸಿಂಜಿತಂ ಮ
ತ್ತಿದು ನೃತ್ಯದ್ವಾರತೀ ನೂಪುರ ರು[1]ತಮಿ[1]ದು ಪುಷ್ಪಾಯುಧಾಮೋದಮುದ್ಯ
ನ್ಮದ ಭೃಂಗೀರಂಜಿತಂ ತಾನೆನೆ ನನೆಗಣೆಯಂ ಕೋಟಿಬಂದಿಂಪು ನುಣ್ಪಿಂ
ದುದಿರ್ವಂತಾ ರಾಜಪುತ್ರಶ್ರುತಿಗತಿಥಿಯದೊಂದಾಯ್ತು ವೀಣಾ ಪ್ರಣಾದಂ ||೧೫||

ವ|| ಆ ವೀಣಾರವಂ ಬಂದ ಬಟ್ಟೆವಿಡಿದು ಪೋಗಿ ಬಸದಿಯೆಂಬಸಿಯ[2]ಳು[2]ಟ್ಟ
ಪಸಿಯ ನೇತ್ರಮನಸಕಟಿವಂತಿರ್ದುಪವನದ ನಡುವೆ ಪೂವಿನ ಪುಡಿಯೊಳೊಟ್ಟ ಬೆಟ್ಟ
ದಂತಿರ್ದೊಂದು ಪೊಂಬಸದಿಯ ಮತ್ತವಾರಣದ ಮೇಲೆ

ಅಳಕಾಸಕ್ತೈಕಹಸ್ತಂ ಪ್ರಿಯಶುಕಪರಿಹಾಸಪ್ರಫುಲ್ಲೈಕಗಂಡ
ಸ್ಥಳಮಾ[3]ದರ್ಶಾರ್ಪಿತೈಕೇ[3]ಕ್ಷಣಮುಚಿತಸಖೀವಾಗ್ವಿತೀರ್ಣೈಕಕರ್ಣಂ
ಕಳವೀಣಾಲಿಂಗಿತೈಕಸ್ತನಮೆಸೆದುದು ಕಾಂತಾಜನಂ ರತ್ನಪೀಠಂ
ಗಳೊಳೇಕೈಕಾಂಗಲೀಲಾಬಲ[4]ಮ[4]ನೆ ರತಿನಾಥಂಗೆ ತೋರ್ಪಂದದಿಂದಂ ||೧೬||

ವ|| ಮತ್ತಮಾ ಬಸದಿಯೊಳಗೆ ಬಿದಿ ಬಯ್ತ ಭುವನಭಾಗ್ಯದೇವತೆಯಂತಿರ್ದ
ಪದ್ಮಾವತಿಯ ಮುಂದೆ ಚಂದ್ರಬಿಂಬಮಂ ತುಂಬಿಮಾಡಿ ಬಿಸತಂತು ಸಿಂಜಿನಿಯಂ
ತಂತಿಮಾಡಿ ಇಕ್ಷುಚಾಪದಂಡಮಂ ದಂಡಿಗೆಮಾಡಿ ಪಂಚಶರಂಗಳಂ ಸಪ್ತಸ್ವರಂಗಳಂ
ಮಾಡಿ ಜಿನಪತಿಯುಮನೆನ್ನ ಗಂಡನೊಳೆ ಪಡೆದು ಕುಡುವುದೆಂದು ದೇವಿಯನಾರಾ
ಧಿಸಿ ಬೀಣೆಯಂ ಬಾಜಿಸುವ ರತಿಯಂತಿರ್ದಳನೊರ್ವಳಂ ಸೌಂದರ್ಯಸುಕುಮಾರಿ
ಯಂ ಕುಮಾರಿಯಂ ಕಂಡು ಆಕೆಯ ವೀಣಾ[5]ವಾ[5]ದನ ವೈದ[6]ಗ್ಧ್ಯ[6]ಗಂ ಸಕಲ ತ್ರಿಭುವ
ನಾತಿಶಯ ರೂಪಾಕೃತಿಗಂ ಕುಮಾರಂ ಮೆಚ್ಚಿ [7]ಮೆಯ್ಮ[7]ಱೆದು ಕಂಬದ ಮಱೆಯಂ
ಸಾರ್ದು ಕೇಳುತ್ತುಮಿರ್ಪುದನಾಕೆಯ ಗುರು ಮನೋಹರನೆಂಬ ಗಂಧರ್ವಾಚಾರ್ಯಂ
ಕಂಡು ವಸುದೇವನಂ ದೇವನೆಂದೇ ಬಗೆದು [8]ಕು[8]ಳ್ಳಿರ[9]ಲ್ಕು[9]ಡಿಸಿ ಕುಮಾರನಾಕಾರ
[10]ಮು[10]ನೇಱೆ[11]ಯಮಿಱಿಯುಂ[11] ನೀಡುಂ ಭಾವಿಸಿ ನೋಡಿ

ಶ್ರೀಯಂ ತಾಳ್ದಿರ್ದ ವಕ್ಷಂ ಕಿಸುಸೆರೆವರಿದಿರ್ದಕ್ಷಿಯುಗ್ಮಂ ಪಯೋಜ
ಪ್ರಾಯಂ ತಾಮ್ರಾಧರೋಷ್ಠಂ ವಡನಮಿಭಕರಸ್ಪರ್ಧಿಗಳ್ ತೋಳ್ಗಳಂಗ
ಯ್ಯಾ[12]ಯೂ[12] ರೇಖಾಭಿರಾಮಂ ಪೊಱೆ[13]ಅಡಿ ಕಮಠಾಕಾರಮಾಕಾರಮತ್ಯಾ[13]
ದೇಯಂ ಸಾಮಾನ್ಯನಲ್ಲಂ ತ್ರಿಭುವನಜನತಾ ಮಾನ್ಯನೀತಂ ನಿಮಿತ್ತಂ ||೧೭||

1 ತಿಯಿ (ಚಟಡಣ) 2 ಳ್ಪು (ಜ) 3 ದರ್ಶಾರ್ಪಿತಕಾ [illegible] 4 ಮೆ (ಜಟಡ) 5 ನಾ ([illegible]) 6 ಗ್ಧಿಕೆ (ಚಟಡ) ಗ್ಧತೆ (ಣ) 7 ಮೆ (ಜ) 8 ಕೆಳ್ಳಿ ಕರೆದುಕು (ಚಟಡಣ) 9 ಲ್ಕೊ (ಚಟಡ) 10 ಮುಮ (ಜ) ಮುಂ (ಟ) 11 ಯುಂ [illegible] ಯುಮಿಂಳಿಯೊಯು (ಜ) 12 ಯುಂ (ಚಟಡ) 13 ನುಡಿ ಮಳರಾಕಾರ ಮಂತ್ಯಾ ಯಿಂಕಂಗಳ್ (ಚಟಡಣ)

ವ॥ ಎಂದು ಮನದೊಳ್ ಮಚ್ಚುತ್ತುಮಿರ್ಪನ್ನೆಗಂ ಪನ್ನಗಪೂಜಿತೆ ವೀಣಾ ವಾದನಪ್ರವೀಣತೆಗೆ ಮೆಚ್ಚಿ ಮನವೊಸೆದು ಪಸಾಯಮಿತ್ತ ಮಕುಟದ ಮುಕುಳಮನಾ ಕುಮಾರಿ ಮುಡಿಯೊಳಿಟ್ಟು [1]ಭಟ್ಟತ್ತಿಗೆ[1] ಪೊಡೆಮಟ್ಟು ಬಂದುಪಾಧ್ಯಾಯಂ ಗೆಱಗಿ ದೇವಿಯೆನಗೆಂದುಮಿಾಯದ ವರಪ್ರಸಾದಮನಿಂದು ಗುರುಚರಣಪ್ರಸಾದದಿನಿತ್ತ ಳೆಂದು ಪೋಪುದುಮುಪಾಧ್ಯಾಯನೀ ಮಹಾನುಭಾಗನ ಬಱಿ[2]ವುಮಿಾ[2] ದೇವತೆಯ ಬರವುಮಿಾಯಿಂದುವದನೆಗಿಂದು ಸಮನಿಸಿದ ಕಾರಣದಿನೀ ಕಾರಣಪುರುಷನೀ ವರಾಂಗನೆಗೆ ವರನಾಗಲ್ವೇೞ್ಕುಮೆಂದು ಮಂದಸ್ಮಿತವದನನಾಗೆ ವಸುದೇವನಱಿದೀ ಕುಮಾರಿ [3]ಯಾ[3]ರ ಮಗಳಾರ್ಗೆ ಕುಡಲಿರ್ದಪಳೀ ಪರಮೇಶ್ವರಿಯ [4]ಪರಿಜನ[4]ಮೇಕೆ ಬಾಳಕರನೆತ್ತಿದಂತೆ ವೀಣೆಯಂ ಕೌಂಕುಳಿಯೊಳೌಂಕಿಕೊಂಡಿರ್ದಪಳೆಂಬುದುಮೋಜ ನೆಂದನೀಕೆ[5]ಯೀ[5] ಪುರಮನಾಳ್ವಂ ಚಾರುಚರಿತಂ ಚಾರುದತ್ತನೆಂಬ ಪರದನ ಮಗಳೀ ವಾಣಿಗೀ [6]ವೀಣೆಯೊಳ್ ವಾಣಿಯಿಂ[6] ಬಲ್ಲಳ್ ವೀಣಾವಾದನದಿಂ ತನ್ನ ನಾವಂ ಗೆ[7]ಲ್ವನವಂಗ[7]ಲ್ಲದೆ [8]ಪೆಂಡತಿ[8]ಯಾಗೆನೆಂದು ಪ್ರತಿಜ್ಞೆಯಂ ಮಾಡಿದಳಿವರ ಯ್ಯನುಂ ರಯ್ಯುಮಾಗಿ ತಿಂಗಳ್ಗೊಮ್ಮೆ ವೀಣಾಸ್ವಯಂವರಮಂ ಮಾಳ್ಪಮೆನ್ನರಪ್ಪ ಕಿನ್ನರರುಮಿಾ ಕನ್ನೆಗೆ ಸೋಲ್ತು ಕನ್ನೆಗೆ ವಂದ ರವಿಯಂತೆ ನಿಃಪ್ರಭರಾಗಿ ಪೋಪರಿದು ವಿಪಂಚೀಪ್ರಪಂಚಮೆನೆ ಕುಮಾರನೊಸೆದು ತನ್ನೊಳಿಂತೆಂದಂ

ಪರದರ ಸುತೆಗಿನಿತು ಕಲಾ
ಪರಿಣತೆ[9]ಯುಂ[9] ರೂಪುಮಾಗ[10]ದೆಳ[10]ಗೊಪಗಿನ ಪೂ
ಮರದಡಿಯೊಳಿರ್ದ ಸಂಪಗೆ
ಯರ[11]ಲಿ[11]ರ್ಪವೊಲಿರ್ದಳೀಕೆ ಯಾವನ ಮಗಳೋ ॥೧೮॥

ವ॥ ಎಂದು ಮನದೊಡನೆ ಮಾತಾಡುವ ಕುಮಾರಂಗೆ ನಿನ್ನನುಮಾನಮನಱಿದೆ ನೆಂ[13]ದು ಮನೋಹರನೆಂದ[12]ನೀ ಪರದನ ಪರಮಮಿತ್ರನಮಿತಗತಿಯೆಂಬನಂಬರಚರ ನಾತನ ಮಗಳೀಕೆ ಗಂಧರ್ವದತ್ತೆಯೆಂಬಳೀ ಚಾರುದತ್ತನ ಚಾರಿತ್ರಕ್ಕಂ ಚತುರತೆ ಗಮುಗಲಲಾಱದಮಿತಗತಿ ವಿದ್ಯಾಧರ ಲೋಕಕ್ಕೊಡಗೊಂಡು ಪೋಗಿ ತನ್ನ ರಾಜ್ಯಮಂ ಕುಡೆ ಕಡೆಗಣಿಸಿ ಗಂಧರ್ವದತ್ತೆಯ ಗಾಂಧರ್ವಗಂಧಿಯಪ್ಪ ಕಳಾಕೇಳಿಗಂ ವಲ್ಲಕೀವಲ್ಲ ಭತೆಗಂ ಬೆಡಂಗಿಂಗೆಡೆಗೊಂಡ ಗಾಡಿಗಂ ಬಯಸಿ [13]ಕೊಳ್ವಗಳ್ಗೊಂ[13]ಡನಿದೀಕೆಯ ವೃತ್ತಕವೆಂದು ವಸುದೇವನಂ ತನ್ನ ಮನೆಗೊಡಗೊಂಡು ಪೋಗಿ ಮಜ್ಜನ ಭೋಜ

1 ಭಟಾರಿಗೆ ಪೋಗಿ (ಜ) 2 ವು (ಚಟಡಣ) 3 ಯು (ಣ) 4 ಪರಿಚಯುಜನ (ಚಟ) ಪರಿಚರಿಯು(ಡ) 5 ಗೀ (ಚಟಣ) 6 ವಾಣಿಯೊಳ್ ವಾಣ (ಜ) 7 ಲ್ಲನಾತಂಗ (ಚಟ) ಲ್ವನಾ ತನನ (ಡಣ) 8 ಮದುವೆ (ಣ) 9 ಯುಂ (ಚಟಡ) 10 ದಿಳೆ (ಜ) 11 ಲಾ (ಜ) 12 ದ (ಜ) 13 ಕೊಳ್ವಗಳ್ ಕಂ (ಚಟಣ) ಕೊಳ್ವಗಳ್ಗೊಂ (ಡ)

ನಾಡಿಗಳಿಂ ಮನ್ನಿಸಿ ಮನೋಹರಂಗೆ ಮನೋಹರನಾಗೆ ಮಱುದಿವಸಂ ವೀಣಾಸ್ವಯಂ ಬರವಾಗೆ ವೀಣೋಪಾಧ್ಯಾಯನೊಡಗೂಡಿ ಸ್ವಯಂವರ ಮಂಟಪದೊಳ್ ಕುಳ್ಳಿರ್ದ ನನ್ನೆಗಂ ನೆರೆವ ಕಿನ್ನರ ಕಿಂಪುರುಷ ಗರುಡ ಗಾಂಧರ್ವ ಸಿದ್ಧ ವಿದ್ಯಾಧರರಂ [1]ಕರ್ವಿ[1]ನ ಬಿಲ್ಲನೇಱಿಸುವಂತೆ ಕಳೆಯನೇಱಿಸಿ ಜೇವೊಡೆವಂತೆ ಮಿಡಿದು ನನೆಗಣೆ[2]ಯಂ[2] ಕೊಳ್ವಂತೆ ಕೋಣಮಂ ಕೊಂಡು ಮು[3]ಗ[3]ಮುಗಿಸುವಂತೆ ಬಾಜಿಸಿ ಮನೋ[4]ಜ ವಿ[4]ಜ ಯಾಧಿದೇವತೆಯಂತೆ ಗಂಧರ್ವದತ್ತೆ ಸೋಲಿಸೆ ವಸುದೇವಂ ಕಂಡು ಮನೋಹರನನು ಮತದಿಂ ಕಳನೇಱುವಂತೆ ವಿದ್ಯಾಪೀಠಮನೇಱಿ ಬೀಣೆಯಂ ಬೇಡುವುದುಮುಪಾಧ್ಯಾಯನೊಳ್ಳಿದುವೆಂ[5]ದಾ[5]ಯ್ದು ತಂದಿತ್ತ ಬೀಣೆಯಂ ಮಿಡಿದು ನೋಡಿ ತಂತಿಯೊಳ್ ತನುರೋಮ[6]ಮಂ ಸೋ[6]ರೆಯೊಳ್ ಶಲ್ಯಮಂ ಪ್ರವಾಳದೊಳ್ ಪಾಷಾಣಮಂ ಕೋಱಿ ಕುಡುವೊಡೆ ನಿರ್ದೋಷಮಪ್ಪ ವೀಣೆಯಂ ಕುಡಿಮೆನೆ ಮನೋಹರನೆಂದನೀ ಲೋಕದೊಳಿವಲ್ಲದಿಲ್ಲ ನಿಮ್ಮ ಮೆಚ್ಚುವ ಬೀಣೆ ಯಾವ ಲೋಕದೊಳುಂಟೆನೆ ವಸುದೇವನೊಂದಾಖ್ಯಾನಮಂ ಪೇೞಲ್ ತಗುಳ್ದನದೆಂತೆನೆ

ನುತಹಸ್ತಿನಾಖ್ಯಪುರದಧಿ
ಪತಿ ಮೇಘರಥಂಗಮೆಸೆವ ಪದ್ಮಾವತಿಗಂ
ಸುತರಾದರ್ ಜಗತೀ ವಿ
ಶ್ರುತ ವಿಷ್ಣುಕುಮಾರ ಪದ್ಮರಥರತಿಸೇವ್ಯರ್ ॥೧೯॥

ವ॥ ಮೇಘರಥಂ ಮೇಘೇ[7]ಕ್ಷ[7]ಣ ದರ್ಶನದಿಂ ವೈರಾಗ್ಯಪರನಾಗಿ ವಿಷ್ಣುಕುಮಾರಂ ಬೆರಸು ತಪಂಬಟ್ಟಂ ಪೆಱಗೆ ರಾಜ್ಯದೊಳ್ ನಿಂದ ಪದ್ಮರಥನ ಮೇಲೆ [8]ಮುಳಿದೆತ್ತಿ[8] ಬಂದ ಪ್ರತ್ಯಂತ ಭೂಪಾಲರ ಬಲಮಂ ಬಲಿಯೆಂಬ ಮಂತ್ರಿಯುಂ ಮಂತ್ರಬಲದಿಂ ಬಾರದಂತು ಬಾರಿಸೆ ಪದ್ಮರಥಂ ಮೆಚ್ಚಿ ಮೆಚ್ಚಿ[9]ತಂ[9] ಬೇಡಿಕೊಳ್ಳೆನೆ ಬಲಿ ಜೋ[10]ಕೋ[10]ರನಂತೀರೇೞು ದಿವಸದರಸುತನಮಂ ಬೇಡಿ ಪಡೆದನನ್ನೆಗಮಾಪುರದ ಪೊಱಪೊೞಲ ಸೌಮ್ಯಗಿರಿಯೊಳ್

ಧೃತಿಯಿಂ ಮಚ್ಚರಿಸುವ ಪ
ರ್ವತಮಂ ತಾನಿಕ್ಕಿ ಮೆಟ್ಟಿದಂತಿರೆ ಯತಿಸಂ
ತತಿವೆರಸಕಂಪನವ್ರತಿ
ಪತಿಯಿರ್ದಂ ಯೋಗ[11]ಧುರ್ಯನಚಲಿತ ಧೈರ್ಯಂ[11] ॥೨೦॥

[illegible]

ವ॥ ಆದು ಕಾರಣದಿಂದಕಂಪನ ಮುನೀಶ್ವರಂಗೆ ಬಲಿಯುಪಸರ್ಗಮಂ ಮಾಳ್ಪ ಮನಮನೆತ್ತಿಕೊಂಡು ಕೋಟಿಹೋಮಮುಮಂ ಬ್ರಾಹ್ಮಣ ಭೋಜನಮುಮಂ ಸೌಮ್ಯಶ್ರೀ ಗಿರಿಗುಹಾಗೇಹಂಗಳೊಳ್ ಮಂತ್ರಿ ಮಾಡಿದಪನಲ್ಲಿಯಲ್ಲದೊಡೆಯುಂ ಗರಗರಿಕೆಯುಮಿಲ್ಲೆಂದು ಡಂಗುರಮಂ ಪೊಯ್ಸಿ ಬಾಯ ಸವಿಗೆ ಪಾರ್ವರೆಲ್ಲಂ ಪರ್ವತಕ್ಕೆ ಮೂಷೆಯಿಡುವಂತೆ ಸುತ್ತಿ ಮುತ್ತಿ ಬೇ[1]ಳ್ವ[1]ಯುಮನಡುಗೆಯುಮಂ ಎಡೆಯುಡುಗದೊಡರಿಸೆ

ಮುಗಿ[2]ಲಗ[2]ಶೃಂಗಮಂ ಮುಸುಱಿ ಮೇವವೊಲುರ್ವಿ ಪೊದಟ್ದು ಪರ್ವೆ ಪೆರ್ಗೆ ಭಗಣಾಂ[3]ಗಳಂ[3] ಬಳಸಿದಿಂದುವಿನಂತೆ ಮಯೂಖಮಾಲೆಯೋಳಗಿಸುವ ಸೂರ್ಯನಂತೆಸೆಯೆ ಸುತ್ತಿಱಿದಗ್ನಿ ಭಟಾರನಂತೆ ಯೋಗಿಗಣಪರೀತನಸ್ಖಲಿತನಿರ್ದನಕಂಪನಯೋಗಿ ಯೋಗದೊಳ್ ॥೨೧॥

ವ॥ ಆ ಮುನಿಜನೋಪಸರ್ಗಮಂ ಮಾಳ್ಪುದುಗಂಡಿಂತೇಕೆಂದು ವಿಷ್ಣುಕುಮಾರನಱಿದು ಪದ್ಮರಥನಲ್ಲಿಗೆ '[4]ವಂದು[4] ಪೊಡೆವಟ್ಟೊಡಂ ಪರಸದೆ ವೀತರಾಗಾಸನಮನಿಕ್ಕಿಕೊಂಡು ಕುಳ್ಳಿರದೆ ಕನಲ್ದಿಂತೆಂದಂ

ಮಂತ್ರಿ ಮುನಿದೀ ಮಹಾಮುನಿ
ಸಂತತಿಗೆ ಮಹೋಪಸರ್ಗಮಂ ಮಾಳ್ಪುದುಗಂ
ಡಿಂತೇಕೆ[5]ಯಣ್ಣ ಮಂತು[5]ವಿ
ನಂತಿರ್ದಪೆಯರಸನಾದುದರ್ಕಿದು ಫಲಮೇ ॥೨೨॥

ವ॥ ಎನೆ ಪದ್ಮರಥಂ ನಡುಗಿ ಮೂಱುಂ ಲೋಕಮುಮನೆಱಗಿಸುವ ನಿಮ್ಮಡಿಯ ತಪೋರಾಜ್ಯಮೆ ಎಡೆಯ ಕಡೆಯ ಬಡವರುಮನೆ[6]ಱಗಿಸಲಾ[6]ಱದೆಮ್ಮ ರಾಜ್ಯಮೇತಱ ರಾಜ್ಯಮಿಂದ್ರೋಪೇಂದ್ರಾದಿಗಳ್ಗಾಸನಕಂಪಂ ಮಾಳ್ಪ ನಿಮ್ಮಡಿಯ ತಪಸ್ತೇಜದ ಪೊರೆಯೊಳ್ ಮನ್ನೆಯ ಮಂತ್ರಿಯುಮಂ ನಡುಗಿಸಲಾಱದೆಮ್ಮನ್ನರಪ್ಪ ನರಕೀಟಕಂಗಳ ತೇಜಮಾದಿತ್ಯನ [7]ತೇಜದ ಪೊ[7]ರೆಯ ಮಿಂಬುಳುವಿನ ತೇಜದಂತಕ್ಕುಮಲ್ಲದೆಯುಂ ಬೇ[8]ಗೆ[8] ಪರ್ವಿದ ಪರ್ವತಂಗಳ ತಾಪಮಂ ಕಳೆವೊಡವಱಿಂದುನ್ನ[9]ತಮ[9]ಪ್ಪ ಜಲಧರಂಗಳೆ ಕಳೆಗುಂ [10]ಕೀೞಿ[10]ವಪ್ಪ ತೊಱೆಯುಂ ಬಾವಿಯುಂ ಬಗರಗೆಯುಂ ಕಳೆಯಲಾಱವೀ ಮಹಾನುಭಾವರುಪಸರ್ಗಮಂ ಪಿಂಗಿಸುವೊಡೆ ಸಾಮರ್ಥ್ಯವಂತರಪ್ಪ

---

1 ಳೆ (ಚಟಡಣ) 2 ಲ್ಗಳ (ಚಟಡ) ಲ್ಗಳೆ (ಇ) 3 ಕರಂ (ಶ) 4 ಪೋದೊಡಂ (ಚಟಡಣ) 5 ಮಣ್ಣ ಮತ್ತು (ಚಟ) ಮಣ್ಣಮಂತು (ಜಡ) 6 ರಸಾ (ಚಟಡಣ) 7 ಪೊ (ಡ) 8 ಗ (ಡ) 9 ತಂಗಳ (ಚಟಡಣ) 10 ಕಿಳ್ಳಿದ (ಜ)

ನಿ[1]ಮ್ಮಂದಿ[1]ಗ[2]ರ[2] ಪಿಂಗಿಸುವರ್ ಮಂದರಪ್ಪೆಮ್ಮಂದಿಗರಿಂದೇನಪ್ಪುದೆನೆ ವಿಷ್ಣು ಕುಮಾರನಂತಾದೊಡಾಮೆ ನಿಯಮಿಸಿದಪೆಮೆಂದು ಪೋಗಿ

[3]ಓ[3]ಗೆಯೆ ಕ[4]ವಿ[4]ಲ್ತ ಕಾಸೆ ಪೊಸಜನ್ನಿವರಂ ಶಿಖಿಕೋವಣಂ ಕರಂ
ಡಗೆ ಕಿಸುವೊನ್ನ ಬಟ್ಟಗೊಡೆ [5]ಬಾರಸ[5]ನಾಮುದ ಜೊಟ್ಟು [6]ಕೊಪ್ಪಿ[6]ನೊಳ್
ನೆಗೆದ ಕುಶಾಂಕುರಂ [7]ಮಿ[7]ಸುಪ ಮುಂಜಿ ಪಲಾಶದ ದಂಡ ಕುಂಡಳಂ
ಬಗೆವುಗೆ ಬಂದನಂದು ಬಲಿಯಲ್ಲಿಗೆ ವಾಮನನಾಗಿ ಕಾಮದಂ ||೨೩||

ವ|| ಆ ಮಾಣಿಕದಂತಪ್ಪ ಮಾಣಿ ಮಂತ್ರಿಯ ಮುಂದೆ ನಿಂದು ಮಂತ್ರಮಂ ಪೇಳ್ದಕ್ಷತೆಯಂ ಕೊಟ್ಟು

ಶ್ಲೋಕ|| ಬ[8]ಲಿಂ ವಿ[8]ಷ್ಣುರಯಂ ಕುರ್ಯಾದವಿಲಂಬಂ ಧನಂ ತವ
ಸಮಾಶ್ಲಿಷ್ಯತಿ ಯತ್ಪಾದಂ ಪ[9]ದ್ಮಾ ಭಾ[9]ತ್ಯಾತಪ[10]ತ್ರಿವಷಾ[10]

ವ|| ಎಂದುಪಶ್ಲೋಕಿಸಿದ ವಟುವಿನ ವಾಕ್ಪಟುತ್ವಕ್ಕಂ ಬ್ರಹ್ಮವರ್ಚ[11]ಸ್ವಿಗಂ[11] ಬೆಕ್ಕಸಂಬಟ್ಟು ಬಲಿ ಬಲಗೊಂಡು ಪೊಡೆವಟ್ಟು ಬೇಡಿಮೆನೆ ವಾಮನನೆಮಗೆ ಕುಳ್ಳಿರ್ದನುಷ್ಠಾನಮಂ ಮಾಡಲ್ತಕ್ಕನಿತನೆಮ್ಮ [12]ಕುತ್ತ[12]ಡಿಯೊಳ್ ಮೂಱಡಿ ನೆಲನನೀವುದೆನೆ ಬಲಿ ಬೆಚ್ಚನೆ ಸುಯ್ದೆನಗದೃಷ್ಟಮೆಯ್ದು[13]ದಿರ್ಕಂ[13] ಕಿಱಿದಂ ಬೇಡಿದಿರ್ ಕೊಟ್ಟೆ ನಳೆದುಕೊಳ್ಳಿಮೆನೆ

ವಟು ಮರದುದ್ದವಾದನನಿತಲ್ಲ[14]ದೊಡಿತ್ತ[14]ಲೆಯುದ್ದವಾದನ
ಕ್ಕಟ ಮದಿಲುದ್ದವಾದನಿವನಾವನೊ ಪೆರ್ಮರದುದ್ದವಾದನಿಂ
ತುಟು ಗಿರಿಯುದ್ದವಾದನಿದು ವಿಸ್ಮಯಮಾ ಮುಗಿಲುದ್ದವಾದನೋ
ವಟವಟಗಂ ದಿಟಕ್ಕೆನೆ ಕರಂ ಬಳೆದಂ ಮನದಂತೆ ವಾಮನಂ ||೨೪||

ವ|| ಅಂತುಮಲ್ಲದೆ

ಮಾರನಂ ಮುಟ್ಟದನಿಲ್ಲ ಮೇಘಘಟೆಯೊಳ್ ಕಾಲ್ಕೋದನಿಲ್ಲಿಲ್ಲ ಭೂ
ಧರಮಂ ದಾಂಟದನಿಲ್ಲ ಬಾಂದೊಱೆಯೊಳಿಟ್ಟಂ ಕಾಲನಿಲ್ಲಿಲ್ಲ ಭಾ
ಸ್ಕರನಂ ಮಾಯದ ಮಾಣಿ [15]ಸೆಂಡೊಡೆದನಾ[15] ಇಲ್ಲೆಂಬಿನಂ ನೀಡಿದಂ
ತರಸಿಂ ಪಾದಮನುರ್ವಿ ಕೊರ್ವಿ ಬಲಿಯಂ ಗೆಲ್ವಾ ಮನಂ ವಾಮನಂ ||೨೫||

1 ವ್ಮಾಡಿ (ಚಟಡಣ) 2 ತೆರಿಗೆ (ಜ) ಲ್ಲಸೆಯುಂ (ಡ) ಳಿ (ಣ) 3 ಬ (ಣ) 4 ವ (ಚಟಡಣ) 5 ಭಾರಸ (ಚಟಡ) ಭಾಸುರ (ಣ) 6 ಜೊಟ್ಟು (ಚಜಟಡ) 7 ಪಿ (ಚಟಡ) 8 ಲಿಗ್ವಿ (ಚಟಡ) ಲಿಂವಿ (ಜ) 9 ದ್ಮಾಭ್ರಾಂ (ಜ) 10 ಸ್ತ್ರಿಷಾ (ಚ) ಸ್ತ್ರಿಷಂ (ಜ) ಸ್ತ್ರಿಷಾ (ಟಡ) 11 ಸಕ್ಕಂ (ಚಜಟ) ಸ್ಕಂ (ಣ) 12 ಕಿಲ್ತ್ರಿ (ಚಡ) ಕಿತ್ತ (ಜ) ಕುಳ್ತ (ಟ) 13 ದಿಕ್ಕ್ರಂ (ಚಟಡಣ) 14 ದೆಲಿತ (ಚಟ) ದಲೆತ (ಜ) ದೆಲ್ಲಿತ (ಡ) 15 ಸೆಂದೊಡೆದನಂ (ಚಟಡ) ಸೇದೊರ್ಗೆದನೇ (ಣ)

ಆದೆ ಪೊಸ ಪೊನ್ನ ಸತ್ತಿಗೆಯುದಲ್ಲದು ರತ್ನಹಟ[1]ತ್ಕಿ[1]ರೀಟವ
ಲ್ಲದು ವರವಜ್ರ ಕುಂಡಳವದಲ್ಲದು ಕೌಸ್ತುಭ ರತ್ನಮಂತದ
ಲ್ಲದು ಕರಚಕ್ರನಲ್ಲದದು ನಾಭಿಸರೋಜಮೆನಲ್ ದಿನೇಶಬಿಂ
ಬವ ನೆಲೆ [2]ಕರ್ಗಿ[2]ತಪ್ಪಿಸವನುಕ್ರಮದಿಂ ಬಳೆದಂ ತ್ರಿವಿಕ್ರಮಂ ||೨೬||

ಇದು ಲೀಲಾಧೃತಭೂಕರೇಣುಕರಮಲ್ತು ಭ್ರೋತ್ಪಟೀಕೇತುವ
ಲ್ತಿದು ಸುವರ್ಗಂಬುಜನಾಳಮಲ್ತು ಶಶಿ[3]ಲೋಕಾ[3]ದೀಪಿಕಾಸ್ತಂಭಮ
ಲ್ತಿದು ತಾರಾಕುಸುಮಾವಳೀ ವಿಟಪಮಲ್ತು ಭ್ರಾವನೀ ಶೇಷಮ
ಲ್ತಿದೆನಲ್ ತಾಂ ಬಳೆಯಿತ್ತನುಕ್ರಮದಿನಾ ಪಾದಂ ಪಯೋಜಾಕ್ಷನಾ ||೨೭||

ತರುವಿಂದತ್ತತ್ತ ನೀಳ್ದಂ ಘನಪಟಲದಿನತ್ತತ್ತ ಮಿಕ್ಕಂ ಹಿಮೋರ್ವೀ
ಧರುವಿಂದತ್ತತ್ತ ಪೋದಂ ರವಿಯ ರಥದಿನತ್ತತ್ತ ಮೆಯ್ವೆರ್ಚಿದಂ ಸು
ಟ್ಟುರೆಯಿಂದತತ್ತಮತ್ತಂ ನಿಮಿರದಿರನಿವೇನೆಂದು ಜಾತಾದ್ಭುತಂ ನೋ
ಟ್ಟರ ಕಣ್ಣಂ[4]ಪೇತಸುಂ[4] ಕಾಲ್ಗಿಡೆ ಕಪುಜವದಿಂ ವಿಷ್ಣು ವರ್ಧಿಷ್ಣುವಾದಂ ||೨೮||

ವ|| ಅಂತುಮಲ್ಲದೆ

ಬಲಗೊಂಡತ್ತಮರಾದ್ರಿ[5]ಗೆ[5]ತ್ತಡೆಯೊಳಾ ಜ್ಯೋತಿರ್ಗಣಂ ಬಂದಿರುಳ್
ತಲೆದೋಱುತ್ತಿಳ ವಿಮಾಂಗಳೊಂದು ದೆಸೆಯೊಳ್[6]ಮೆಯ್ದೋ[6]ರ್ಪಿನಂ ತಪ್ತಕಂ
ದಳಿತಂ ಸಂಪಣೆಗೊಂಡುದೊಂದು ದೆಸೆಯೊಳ್ ಸೂರ್ಯಾತಪಂ ವಿಕ್ರಿಯಾ
ಬಳದಿಂ ತಾಂ ಬಳೆಯಲ್ಕೆ ಭಂಜಿತ ಮಹಾ ಷುತ್ರಿಕ್ರಮಂ ತ್ರಿಕ್ರಮಂ ||೨೯||

ರವಿಯುಶ್ವಂ ದೆಸೆವಾಯ್ದು ಪಾಯ್ದೆ[7]ಚಿ[7]ವಿನಂ ತೇರಂ ನಯಂ ಪೆರ್ಚಿ[8]ಚಿ[8]
ರ್ಚುವಿನಂ ಚಂದ್ರನ ಬೆಳ್ಕೊಗಂ ಬೆದಱಿದಾತ್ಮಸ್ತ್ರೀಯರಂ ಪೇಱಿ ಪಾ
ಱುವಿನಂ ತಾಂ ಪೊಬಗೆಟ್ಟು ಖೇಚರಚಯಂ ದಿಕ್ಪಾಲಕರ್ ಭೋಂಕೆನಂ
ಜುವಿನಂ ವಿಷ್ಣುಕುಮಾರನೇಂ ಬಳೆದನೋ ಬ್ರಹ್ಮಾಂಡಮಂ ತಾಪಿನಂ ||೩೦||

ಈ ವಟುವಿಂಗೆ ಮಿಂಚುವೆಳಮಿಂಚಿನ ವಾರಿದಲೇಖೆ [9]ಮೌಂಜಿ[9]ಯುಂ
ಕೋವಣಮಾಯ್ತು ಮುಟ್ಟೆ ರವಿಗರ್ಘ್ಯಮನೀವ ಪೊಡರ್ಪು ಮಾಯ್ದು ಮಾ
ಯಾವಿಗ [10]ತನ್ನ[10]ಗುಂಡಿಗೆಯಿನಾಗಸಗಂಗೆಯ ದಿವ್ಯತೋಯಮಂ
ತೀವುವ ಬುದ್ಧಿಯೊಳ್ ಬಗೆದನಕ್ಕಟ ವಾಮನನ ಪ್ರಮಾಣಮಂ ||೩೧||

1 ತ್ರಿ (ಜ) ಕ್ಕಿ (ಣ) 2 ತಗ್ಗಿ (ಚಟಡಣ) 3 ಲೇಖಾ (ಜ) 4 ಚಿತ್ರಮಂ (ಜ) 5 ಗ (ಜ) 6 ಕೆಯ್ಪಿ (ಚಟಡಣ) 7 ಳ (ಜ) 8 ಪೆ (ಜ) 9 ಮುಂಜಿ (ಚಜ) ಮುಂಚಿ (ಟಡ) 10 ಮೆಂಬ (ಚಟಡ) ನೊಲ್ದು (ಣ)

ಇಂತಪ್ಪ ಸಿತಗನೀ ವಟು
ವಿಂತಪ್ಪತಿವರ್ತಿ ಮಾಣಿಯುಂ ಕೋಡಗಮುಂ
ಸಂತಮಿಡಲಾರ್ಕುಮೇ ರವಿ
ಯಂತಪ್ಪನ ಪರಿವ ಭಂಡಿಯೊಳ್ ಕಾ[1]ಲ್ಗೊಂದಂ[1] ||೩೨||

ಅಂಬರತಳಕ್ಕೆ ಬಳೆದು ತೆ
ಱಂಬೊಳೆವಚ್ಯುತನ ಚರಣದಂಡಂ ನಕ್ಷ
ತ್ರಂ ಬಳಸಿ ದೀಪಮಾಲೆಯ
ಕಂಬದವೋಲ್ ತೊಳಗಿ ಬೆಳಗುತಿರ್ದತ್ತಾಗಳ್ ||೩೩||

ಬಲಿಹರನ ಚರಣದಂಡದ
ತಲೆಯೊಳ್ [2]ಕಿಱು[2]ಗೊಂಡೆಬಲ್ವ ಬಾಂದೊಱಯೆಲರಿಂ
ಪೊಲಿದುದು ವಿಷ್ಣುಕುಮಾರನ
ಗೆಲವಂ ಕಂಡಮರರೊಸೆದು ಕಟ್ಟಿದ ಗುಡಿವೋಲ್ ||೩೪||

ವಾಮನ ಪದಹ[3]ತ ವಿಗ[3]ಳಿತ
ಜೀಮೂತ ವಿಮುಕ್ತ ಬಹಳ [4]ಜಲಧಾರೆಗಳಿಂ
ದಾ[4] ಮುನಿಜನಾಪಕಾರಕ
ಧೂಮಧ್ವಜನೆಯ್ದೆ ನಂದಿ ಪೋದತ್ತಾಗಳ್ ||೩೫||

ವ|| ಅಂತಾ [5]ಮಹಾಮುನಿ[5]ಜನೋಪಸರ್ಗಮಂ ಮಾಣಿಸಲೆಂದು ವೈಕುರ್ವಣ [6]ಋದ್ಧಿಯಿಂ ಬ್ರಹ್ಮಾಂಡಮನೊಡೆದು ಬಳೆದಾ ತ್ರಿವಿಕ್ರಮನುತ್ಕ್ರಮಾಂಗುಷ್ಠಘಾತದಿಂ ಪ್ರಿದಿವಮಾಡಿರ್ಗುಮೆಂಬ ಭಯಮಾಗೆ ಬಲವಿರೋಧಿ ಪೆಸಸಿದ ಗಂಧರ್ವದೇವರ್ ಬಂದು ಗಾಂಧಾರಗ್ರಾಮಮನಾಳಾಪಿಸಲೆಂದು [7]ಧಾರಾ[7]ವಿಯುಂ [8]ಸಾ[8]ರಿರಿಯುಮೆಂ ಬೆರಡುಂ ಬೀಣೆ[9]ಗಳು[9]ಮನಳವಡಿಸಿ

ಕಳಸಮಂ ಸತ್ತಿಸಿ ಜೀವೆಯಂ ನಿಜಿಸಿ ಮೆಲ್ಪಿಂ ತಂತಿಯಂ ತೀಡಿ ಕಾ
ಕಲ್ಯೊಳ್ ಬೀಣೆಯನಾಗುವಮಾಡಿ ಮಿಡಿಯುತ್ತಾಳ್ದರ್ ನುಣ್ಣಾವರ
ಕ್ಕಳಿ ಪೂವಂ ಗಿಳಿ ಪಣ್ಣನಾಲಿಸಿ ಲಸಚ್ಚೂತಾಂಕುರಾಸ್ವಾದಮಂ
ಕಳಕಂಠಂ ಬಿಡೆ ದೇವ[10]ರಾಲಪಿಸಿದರ್[10] ತ್ರಿಸ್ಥಾನಸಂಶುದ್ಧಿಯಿಂ ||೩೬||

1 ಲ್ಗೊಂಡಂ (ಚ) ಲ್ಗೊಡಂ (ಡ) 2 ನೆಬ್ರಿ (ಜ) 3 ತಿವಿದ (ಚಟಡಞ)
4 ಧಾರೆಗಳಿಂದಂತಾ (ಚಜಟಡ) 5 ಮುನಿ (ಜ) 6 ವೃ (ಚಟ) ರಿ (ಜಡ) 7 ದಾರ (ಜ)
8 ಶಾ (ಜ) 9 ಯು (ಚಜಟಡ) 10 ರೋಲಗಿಸಿದರ್ (ಜ)

ವ॥ ಆ ಗಂಧರ್ವವಾದನಕ್ಕೆ [1]ವಿಷ್ಣುಗಂಧಿಯಪ್ಪ ವಿ[1]ಷ್ಣುಕುಮಾರನತಿ ಪ್ರಸನ್ನನಾಗಿ ನಿಜೋದ್ರೇಕಮುಮಂ ವೈಕುರ್ವಣಮುಮನುಪಸಂಹರಿಸಿ ಬಲಿಯಂ ಬಂಧನದೊಳಿರಿಸಿದನಾ ವೀಣೆಯ ವಂಶದ ವೀಣೆಯುಂಟಕ್ಕುಮ[2]ಪ್ಪೊ[2]ಡೆ ತನ್ನಿಮೆಂದ ವಸುದೇವನಾ ವಿಪಂಚೀಪ್ರಪಂಚವಾಚಾಕ್ವಣಿತಾಕಾರಕ್ಕಮತಿ ಮನೋಹರಾಕಾರಕ್ಕಮತ್ಯಂ [3]ತವಾ[3] ಸಕ್ತೆಯಾಗಿ

ಅತಿಮುಗ್ಧಾಪಾಂಗಭೃಂಗಂ ಮುಖಸರಸಿಜದೊಳ್ ತನ್ನ ಬಾಹಾಭುಜಂಗಂ
ಸುತನು ಶ್ರೀಖಂಡ ಶಾ[4]ಖಾಂತರದೊಳಧರ[4] ಸದ್ವಿದ್ರುಮಂ ದಂತಮುಕ್ತಾ
[5]ವಳಿ[5]ಯೊಳ್ [6]ಪಾಣಿ[6] ಪ್ರವಾಳಂ ಕುಚಕಲಶದೊಳಿಂಬಾಗೆ ತಳ್ತಿರ್ದನಿಂದ್ರ
ಪ್ರತಿಮಂ ಗಾಂಧರ್ವದತ್ತಾ ಮೃದು ಹೃದಯದೊಳಾ ರೂಪ ಕಂದರ್ಪದೇವಂ ||೩೭|

ವ॥ ಇರ್ದೊಂದು ದಿವಸಂ ವಸುದೇವಕುಮಾರಂ ವಿದ್ಯಾಮಂಡ[7]ನ[7]ಮಂಡನೀಭೂತ[8]ಜಗ[8]ತ್ಯಾಗಸಿಂಹಾಸನದೊಳ್ ಸಿಂಹಕಟೀತಟಮನುಪಮೆಗೆ ತರ್ಪಂತುಪವೇಷದಿನಳಂಕರಿಸಿರ್ಪುದುಮಾ ಪ್ರಸ್ತಾವದೊಳ್ ಕುಂಕುಮನುಂ ಕುಚಕಳಸನುಮೆಂಬರಿರ್ವರಕ್ಕರಿಗರ್ ಬಂದು ಶುಭೋದಯಮೆಂದು

ಸಂಸ್ಕೃತ॥ ಕೀರ್ತಾವಾ[9]ಜತಿ[9] ಸೆಜ್ಜೆವಳ್ಳ ಸಚಿವ ಶ್ರೀ ಪದ್ಮನಾಭ ಪ್ರ[10]ಭೋಃ[10]
ತ್ರೈಲೋ[11]ಕ್ಯಾ[11]ಶ್ವಪತೀ ವಿ[12]ಜೇ[12]ಯ ಸುಚಿರಂ ದೃಷ್ಟ್ವಾಸ್ವಸತೀಭಿಸ್ಫುಟಂ
ಕಸ್ತೂರೀತಿಲಕೇನ ಲಕ್ಷ್ಮ[13]ಣ[13]ಕೃತೇ ಚಂದ್ರಪ್ರಸ್ಸಲಕ್ಷ್ಮಾಭೃತೇ
ಕಂಠೇ ಕಾಳಯತಿ ಪ್ರಸಿದ್ಧಮಗಮತ್ ಶೇಷೋ[14]ಹಿ[14]ಭೂಷೋಪಿಚ ||೩೮||

ಪ್ರಾಕೃತ॥ ಸಿರಿಯ ಸರಸಿಯ ಸಯಿಯೆ ವಿರಲಂ
[15]ತ್ರಿ[15]ಯವಚ್ಛೋವ ಮು[16]ಹು[16]ಮಿಹಭಯದಂಡೋ
ಸಂಜೀಯಾ[17]ಯ[17]ಜಿಣಾಸಂ ಜಾಜ್ಜೈಪ[18]ವು[18]ಮಹಣಾಹೋ
ವೀರಬಲ್ಲಾಳದೇವಂ ಪು[19]ತ್ರಿ[19]ಯ[20]ಪುದು[20]ವಿಣಾಹೋ ಸಂಜಳೋ ಸೆಜ್ಜೆವಳ್ಳೋ ||೩೯||

ವ॥ ಎಂದೋದಿದ ಭಟ್ಟರ್ಗೆ ತುಡಲಾರ್ಪನಿತು ಮಣಿಭೂಷಣಂಗಳಮನುಡಲಾರ್ಪನಿತು ಪಟ್ಟಾಂಬರಂಗಳುಮುಂ ಮೊಟ್ಟೆಗಟ್ಟಿ ಪೊತ್ತುಕೊಂಡು ಪೋಗಲಾರ್ಪ

1 ವಿ (ಚಟಡಣ) 2 ದಿಂತಪ್ಪೊ (ಣ) 3 ತಾ (ಚಟಡಣ) 4 ಖಾತರದೊಳಧರ (ಜ) ಖಾಗ್ರದೊಳಧರ ಲ (ಣ) 5 ತತಿ (ಚಟಡಣ) 6 ಹಸ್ತ (ಜ) 7 ಪವಂ (ಜ) 8 ಜಿ (ಜ) 9 ಜಿತ (ಜ) 10 ಭಾ (ಚಟಡಣ) 11 ಕೇ (ಚಟಡ) ಕ್ಯೇ (ಜ) 12 ಚಿ (ಜ) 13 ಣೇ (ಚಜಟಡ) 14 ಪಿ (ಣ) 15 ಥಿ (ಜ) 16 ಹ (ಜ) 17 ದೆ (ಜ) 18 ಟು (ಣ) 19 ಧಿ (ಜ) ಡಿ (ಜಟಡ) 20 ಪುಂಡ (ಜ) ಪುಡು (ಟ)

ನಿತು ಪೊನ್ನುಮನಿತ್ತು ನೀಮೆತ್ತಣಿಂ ಬಂದಿರೆಲ್ಲಿಗೆ ಪೋದಪಿರೆಂಬುದುಂ ಕುಚಕಲಶ [1]ನೆಂದಂ[1] ವಂಶವಿಷಯದೊಳ್ ಮಾಗಧಿಯೆಂಬ ಪೊಟಿಲನಾಳ್ವ ರಕ್ತಾಕ್ಷನೆಂಬರ ಸಂ[2]ಗಂ ಸುಮಿತ್ರೆಯೆಂಬರಸಿಗಂ[3] ರೋಹಿಣಿಯೆಂಬ ಮಗಳಾದಳಾ ತ್ರಿಭುವನ ಸೌಂದರ್ಯ ಸಂಕೇತ ಭೂಮಿಯಪ್ಪ ಭಾಮಿನಿಯ ಶೃಂಗಾರಸ್ವಯಂವರಕ್ಕೆ ಜರಾಸಂಧ ಚಕ್ರವರ್ತಿಯುಂ ಸಮುದ್ರವಿಜಯಂ ಮೊದಲಾದ ಮಂಡಳಿಕರುಂ ನೆರೆದರಿವರಂ ಬೇಡುವೆವೆಂಬ ಬಗೆಯಿಂ ಬಂ[3]ದೆವೀ ಭವ[3]ಕ್ಕೆ ನಾವಾರುಮಂ ಬೇಡದೆ[4]ತುಮಾರ್ಬೇ ಡಿದೊಡಂ[4] ಬೇಡಿದನಿತನಾವು [5]ಕುಡುವಂತುಂ[5] ಕೊಟ್ಟೆ ನೀನೆ ದಾನಿಯೆಂದು ಪೊಗೞ್ದು ಪೋದರಿತ್ತ ವಸುದೇವನಾ ಪೊೞ್ತೆ ಪೊೞ್ತಾಗಿ ಪರ್ಣಲಘುವಿದ್ಯೆಯಿಂ ಸುಪರ್ಣನಿಂ ಬೇಗಮಾಗಿ ಮಾಗಧಿಗೆ ಪೋಗಿ ಪ್ರಾಕೃತ ಕಾವ್ಯದಂತೆ ಸಹಜಸೌಭಾಗ್ಯ ಭಂ[6]ಗಿ[6] ಭಾವಾಲಂಕಾರದಿನಲಂಕೃತನಾಗಿ ಸ್ವಯಂವರ ಮಂಟಪಮಂ ಪುಗುವುದುಂ ಆಗಳಾ ಸ್ವಯಂವರ ಸಭೆಯಾದ ವಾದಕಸಂಪ್ರದಾಯದೊಳೊರ್ವ ಪಾಣವಿಕನ ಪೆಗಲ ಪಣ ವಮಂ ತನ್ನ ಪೆಗಲೊಳ್ ತಗುಳ್ಚಿಕೊಂಡು ಮೂಱುಂ ಕೆೞದ ಲಯಯೊಳಮನಿತೆ [7]ಜತಿಯೊ[7]ಳಂ ವಿವಿಧ ವಾದ್ಯವಿಧಿಯೊಳಂ ಮಧುರಾತಿಮಧುರಮುಂ ಚಿತ್ರಾತಿಚಿತ್ರ ಮುಮಾಗೆ ಬಾಜಿಸುವ ವಾದ್ಯವಿದ್ಯಾಧರನ ನಾದನವೈದಗ್ಧ್ಯಗಂ ಮರುಳ್ಗೊಂಡು ಗಂಡ ಗಾಡಿ ಗಂಡು[8]ವೇಟಂಗೊಂಡು[8] ಸ್ವಯಂವರ ಸಂಭ್ರಮಮುಮಂ ರಾಜಪುತ್ರಿ[9]ಯ[9] ಕೈಗೆ ಮಾ[10]ಲೆಯೊಂ[10]ದು ಬಂದ [11]ಬರವು[11]ಮಂ [12]ಮಱೆದು ಪೆಮಱೆದು[12] ನೆರೆದ ರಾಜ ಲೋಕಮೆಲ್ಲಂ ರಾಜಸುತೆಯನೀಡಾಡಿ ಬಂದು ಮೊನ್ನಳಿಸಿ ಮುಮ್ಮೞಿಗೊಂಡು ನೋಡುತ್ತುಮಿರ್ಪುದುಮಲ್ಲಿಗೆ ಕಾತರಚಿತ್ತೆಯಾಗಿ ಕಿವಿಯೆಯ್ದುವರಿಯೆ ಕೇಳ್ದು ಮನ ವೆಳದುವರಿಯೆ ಬಂದು ಕಣ್ಣೆಳದುವರಿಯೆ ನೋಡಿ

ಪಾಡುವ ಗೀತಮಂ ಜತಿಗಳಂ ಸ್ಮೃತಿ ಸೂಡೆ ವಿಲಾಸ ಲಕ್ಷ್ಮಿಯಂ
ಸೂಡೆ ವಿಲೋಚನೋತ್ಪಲದಳಂ ಪುಳಕಾಂಕುರ ಸಂಕುಳಂಗಳಂ
ಸೂಡೆ ನಿಜಾಂಗವಲ್ಲಿ ಮನಮುತ್ಸವದಿಂ ಕುಸುಮಾಸ್ತ್ರಮಾಲೆಯಂ
ಸೂಡೆ ವಿರೋಧಿರಾಜಕುಳರಾಹುಗೆ ರೋಹಿಣಿ ಮಾಲೆ ಸೂಡಿದಳ್ ॥೪೦॥

ವ॥ ಸೂಡಲೊಡನೆ ರಾಜಕುಮಾರರ ಮನದೊಳ್ ಸೂಡೆರ್ದಂತಾಗೆ ಚಕ್ರವರ್ತಿಗಂ ಮಂಡಳಿಕರ್ಗಂ ಕುಡಲಿರ್ದ ಕೂಸಂ ದೇಸಿಗಂ ಕೊಂಡನಿದೇನೆಂದು ಮಾಮಸಕಂ ಮಸಗಿ ಮುಳಿದು ಬಾಲಭಾಸ್ಕರನ ಮೇಲೆ ಮೊಡ್ಡಿತಪ್ಪ ತಮದೊಡ್ಡು ಕವಿವಂತೆ

1 ರೆಂದರ್ (ಜ) 2 ಗಂ (ಜ) 3 ದೆನಿನ್ನೀಭವ (ಚಟ) ದೆನಿನ್ನೀಭವನ (ಡ) ದೊಂ ನಿನ್ನೀಭವನ (ಣ) 4 ತುಂ (ಣ) 5 ಕೆದುವಂತೆ (ಜ) ಕುಡುವಂತುಂ (ಣ) 6 ಗಿನಿ (ಜ) 7 ಲಯದೊ (ಜ) 8 ವೆಟ್ಟಂಗೊಟ್ಟು (ಚಟ) ವೆಟ್ಟಗೊಂಡು (ಡಣ) 9 ಯುಮಂ (ಜ) 10 ಳ್ಳೆನೆಂ (ಜ) 11 ಭರ (ಣ) 12 ಮೆಱೆದ (ಣ)

ಕಿಶೋರಕೇಸರಿಯ ಮೇಲೆ ದಂತಾವಳದೊಡ್ಡು ಕವಿದು ಮುಸುಱಿ ಮುತ್ತುವಂತೆ
ವಸುದೇವನ ಮೇಲೆ ರಾಜಕುಮಾರರೊಡ್ಡು ಕವಿದು ಮುಸುಱಿ ಮುತ್ತಿದಾಗಳ್

ಕಿವಿ ಕೋಲಂ ಕೋಟಿಯಂ ಕಾಱಿದಪುವೊ ಬೆರಲಿಂ ಬಾಣಮಂ ಭೋರೆನೀದ
ಪ್ಪುವೊ ಚಂಚನ್ಮೌರ್ವಿ ಚುಮ್ಮೆಂದುಗುಟ್ದಿ[1]ಪುವೊ ಶರ[1]ಶ್ರೇಣಿಯಂ ಮಾಣದೆಂಬಂ
ತೆವೊಲಡ್ಡಂ ಕಾಯ್ಪಿನಿಂದಂ ಕವಿಯೆ ಜವಕೆ ಕೆಯ್ವೊಯ್ದು ಪಾಯ್ದಂಬನಂಬ
ಟ್ಟುವವೊಲ್ ಪುಂಖಾನುಪುಂಖಂ ಮೊಟಕಲಿಸೆ ಮನೋವೇಗದಿಂ ಬೇಗಮೆಚ್ಚಂ ||೪೧||

ನೀಡಿದ ನಾಲಗೆಯಂತಿರೆ
ಪೂಡಿದ ಕಣೆ ಕುಣಿದು ತೆಗೆದ [2]ಕೊಮ[2]ರನ ಬಿಲ್ಲೊಳ್
ಮೂಡಿದುದು ನುಂಗಲಹಿತರ
ಪಾಡಿಗಳಂ ಮಸಗಿ ಮಿಟ್ತು ಬಾಯ್ದೆಱದ ತೆಱಂ ||೪೨||

ಅಲಗು[3]ನ[3]ಡೆ ಪರೆದ ಬಿಸಿಲವೊ
ಲಲಗಲಗಿನೊಳೊರಸಿ ಪುಟ್ಟಿದುರಿ ಸುರಿದುವು ಕ
ಟ್ತಿಲಿಸಿದುದು ದೆಸೆ ದಿನೇಶಂ
*ಪೊ[4]ಲಗೆಟ್ಟಂ[4]ಮಸಗಿ ಮಿಸುಕದಿ[5]ಸೆ[5] ವಸುದೇವಂ ||೪೩||

*ಮಱಿದುಂಬಿಯಲರ್ದ ಸಂಪಗೆ
ಗೆಱಗದವೊಲ್ ತಪ್ಪಿ ಪಾಱಿದುವು ಪಿರಿಯಣ್ಣಂ
ಪೊಱಮು[6]ಯ್ವುವರಂ[6] ತೆಗೆದೆ
ಚ್ಚಱಿಕೆಯ ಪೊಸಗಱಿಯ ಕಣೆಗಳವನವರಜನಂ ||೪೪||

ಅದಟರನೊಂದೆ ಶಾತಶರದಿಂ ತುರಗಂಗಳನೊಂದೆ ಬಾಣದಿಂ
ಮದಗಜದೊಡ್ಡನೊಂದೆ ಕಣೆಯಿಂದ ನಿವಾರಿಸೆ ಪೊರ್ದೆ ಪಾದಪ
ದ್ಮದ ಮೊದಲೊಳ್ ನಿಜಾಗ್ರಜನನೆಚ್ಚ ಶಿಲೀಮುಖಮಾಗಳಂಬು ತ
ಪ್ಪಿದೊಡಭಿವಾ[7]ದ್ಯವೆಂ[7]ಬ ತೆಱದಿಂ ಪೊಡೆವಟ್ಟನಪಾರಪೌರುಷಂ ||೪೫||

ವ|| ಪೊಡೆವಡುವುದಂ ನಿರವಿಸಿ ವಸುದೇವನೆಂದಱಿದು

---

1 ವೊಶರನಿ (ಚಜಟಡ) 2 ಕುವ (ಚಟಡ) ಕುಮ (ಣ) 3 ವೊ (ಚಣ) ವ (ಟಡ)
4 ಲಗೆಲ್ಲಂ (ಚ) ಲಿಗೆಲ್ಲಂ (ಡಣ) 5 ನೆ (ಚಣ) 6 ಯ್ವರಂತೆ (ಜ) 7 ದೆಯಂ (ಚಟಡಣ)

ಕೆಯ್ತುಪ್ಪಾದುದು ಕಾದಲೊರ್ವನೆ ಸಮಗ್ರಾನೀಕದೊಳ್ ಕೋದುಕೋ
[1]ಲ್ವೊ[1]ಯ್ದಂ ಬಾಳಕೆನೊಕ್ಕ ತಪ್ಪಮುಡುಗಲ್ಕೇಂ ಬರ್ಕುಮೇ ಗಂಟಲಂ
ಕೊಯ್ದಂ ಕೈತವದಿಂದಮೆಂದೊಗೆದ ನೋವಂ ಸಂತಸಂ ನೂಂಕೆ ಪೇ
ಲ್ವಾಯ್ದಿಂದ್ರೇಭಸಮಂ ಸಮುದ್ರವಿಜಯಂ ತಟ್ಟಿಕ್ಕಿಸಿದಂ ತಮ್ಮನಂ ||೪೬||

ಮಿಸಿಸೆ ಸುಖದಶ್ರು ಪುಳಕಂ
ಪಸರಿಸೆ ಬಿಲ್ಲೊಂದು ಜಾವಮಪ್ಪಿನಂ ಪಸವೋ
ಡೆ ಸಮುದ್ರವಿಜಯನಪ್ಪಿರೆ
ವಸುದೇವನುಮಪ್ಪಿಕೊಂಡು ತೋಳ್[2]ದನಳವಂ ||೪೭||

ವ|| ಬಟ[2]ಯಂ ಬಳಮುಖ್ಯರಪ್ಪ ಜರಾಸಂಧನಂಗಮುಗ್ರಜನ ಬೆಸದಿನೆಱಗಿ ಮಱುದಿವಸಂ ಸ್ವಯಂಬರಕ್ಕೆ ನೆರೆದರಸುಮಕ್ಕಳೆಲ್ಲಂ ನಿಬ್ಬಣಿಗರಾಗೆ ರೋಹಿಣಿಯೊಳ್ ಮದುವೆನಿಂದು ಮಗುಟ್ದು ಸೂರ್ಯಪುರಕ್ಕೆ ಪೋಗಿ ಸುಖಸಂಕಥಾ ವಿನೋದದಿಂದಮಿ ರ್ದನಾ ಮಹಾನುಭಾ[3]ವ[3]ನ ಸೌಭಾ[3]ಗ್ಯಬಾಗ್ಯ[3] ಸಂಭೋಗಮಂ ಪೇಟಿಟ್ವೊಡೆ

ಬರೆ ಭರದಿಂದೆ ನಿಬ್ಬಣಕೆ ಚಿತ್ತಜನುಂ ರತಿಯುಂ ವಸಂತನುಂ
ವರವನಲಕ್ಷ್ಮಿಯುಂ ಶಶಿಯುಮಾತನ ರೋಹಿಣಿಯುಂ ಶಿರೀಷಮುಂ
ಸುರಯಿಯುಮಾಮ್ರಮುಂ ಮಿಸುಪ ಮಲ್ಲಿಗೆಯುಂ ವಸುದೇವನಾಳ್ದನೀ
ಧರೆ ಪೊಗಟಲ್ಕೆ ಷೋಡಶಸಹಸ್ರ ವಿವಾಹಮಹೋತ್ಸವಂಗಳಂ ||೪೮||

ಗುಣನಿಧಿಯುದಯಿಸಿದಂ ರೋ
ಹಿಣಿಗಂ ವಿಧುವಿಂಗಮುದಯಿಪಂತೆ ಬುಧಂ ರೋ
ಹಿಣಿಗಂ ವಸುದೇವಂಗಂ
ರಣರಸಿಕಂ ಪ್ರಬಲನತಿಬಲಂ ಬಲದೇವಂ ||೪೯||

ವ|| ಅಂದಾ ಸ್ವಯಂವರದೊಳ್ ತನ್ನ ಬಲ್ಲ ಬಿಲ್ಲಬಿನ್ನಣಂಗಂಡು ಬಂಟರಾಗಿ ಬಟ[5]ಸಂದು ಬೆಸಕೆ[4]ಯ್ದು ಬೇಡಿಕೊಂಡ[4] ರಾಜಕುಮಾರರ್ಗೆ ಬಿಲ್ಲವಿದ್ದೆಯಂ ಕಲಿಸುತ್ತು ಮಿರ್ಪ ವಸುದೇವನಲ್ಲಿಗೆ

ಸುಡುದಲೆ ಬಿಟ್ಟಕಣ್ ಕಲಿಮೊಗಂ ಕಡಿಗೊಂಡುಡೆ ಬೆಟ್ಟಿತಪ್ಪ ಕೈ
ಯಿಡಿದು ಪೊರಟ್ಟಿ ಮಾಡಿದವೊ[6]ಲಿ[6]ಪ್ಪೊ ತರೊಪ್ಪುವ ರೂಪು [6]ತ್ರು[6]ಷ್ಪಮಂ
ತೊಡೆದವೊಲಪ್ಪ ಮಿಸೆ ಮಿಸುಗುತ್ತಿರೆ ಬಂದನವೊರ್ವನೊಂದು ಬಿ
ಲ್ವಿಡಿದು ಯುವಾನನಲ್ಲಿಗೆ ನವೀನ ನವೀ[7]ರನ[7]ಮೋತ್ಕಟಂ ಭಟಂ ||೫೦||

---

1 ಲ್ವಾ (ಚಟಡಣ) 2 ಗ (ಚಟಣ) 3 ಗ್ಯ (ಣ) 4 ಯ್ವು ಬೇಡಿಕೊಳ್ವ (ಣ) 5 ಲ (ಚಜಡಟ) 6 ಕೊ (ಜ) ತ (ಡ) 7 ನರೆ (ಚ)

ವ|| ಬಂದು ವಸುದೇವಂಗೆ ತುಱುಗ್ಗೆಯ್ವುದುಮರಸನೆತ್ತಣಿಂ ಬಂದೆಯೆತ್ತ ಪೋದಪೆ ನಿನ್ನ ಪೆಸರೇನೆಂಬು[1]ದೆನೆ[1] ಭಟನಿಂತೆಂದಂ

ಜನನಾಥಾ ನಿತ್ಯಚಂದ್ರೋದಯ ಧರಣಿಪತೀ ನಾಡುನಾಡಂ ತೊಟಲ್ದಿಂ
ಧನುವಂ ಕಲ್ವಟ್ಟಿಯಿಂ ಬಿ[2]ಲ್ಲೊ[2]ಜನನಱಿಸಿ ಬಿಲ್ವಲ್ಮೆಯೊಳ್ ದೇವ ನೀಂ ದೇ
ವನೆಯಾನುಂ ಚಟ್ಟನಾಗಲ್ ನಿನಗೆ ಬಗೆ[3]ದು ಯುಷ್ಮ[3]ದ್ವಿಷಧ್ವಂಸನೆಂ ಕಂ
ಸನೆನೆಂಬೆಂ ನಿನ್ನ ವಿಖ್ಯಾತಿಯನಖಿಳ ದಿಶಾಚಕ್ರದೊಳ್ ಕೇಳ್ದು ಬಂದೆಂ ||೫೧||

ವ|| ಎನೆ ಕೈಕೊಂಡು ಕೋದಂಡ ವಿದ್ಯೆಯಂ ಕಲಿಸುತ್ತುಮಿರೆ ಕಂಸಂ ವಸುದೇವಂಗೆ ಚಟ್ಟನಾಗಿ ವಿಕ್ಕಚಾಪಾಚಾರ್ಯಗೋಜನಾಗಿ ಧನುರ್ವಿದ್ಯೆಯಂ ಸಾಧಿಸುತ್ತುಮಿರ್ದನನ್ನೆಗಂ

ಪೌದನಪುರವನಿತೆಗೆ ಸ
ಮ್ಮೋದನಗಶ್ರೀನಿತಂಬ ಕಳಕಾಂಚಿಗೆ ತಾ
ನಾದನಭಿನವ ಪಯೋಧರ
ನಾದಂ ಪತಿತಾಳಹಸ್ತನೆಂಬನಳುಂಬಂ ||೫೨||

ಅವನೊರ್ಮೆ ಪಿದಿದು ಕಂಠೀ
ರವ ಪೋತಮನೋತು ಪೊರೆದು ಪಿರಿದಪ್ಪುದುಮೋ
ಱುವನಾಗಿ [4]ಪರಿಯುತಿರ್ದಂ[4]
ಭುವನದೊಳಾತಂಗೆ ಸಿಂಹರಥನೆಂಬ ಪೆಸರ್ ||೫೩||

*ಕುಱಿಯ ಕಡಿಯಣಕೆ ಬಾಯಂ
ತೆಱೆಯದಿರಿಂ ಬಾಯ ಕರುಳೆ ಕಡಿಯಣಮಾಯ್ತೆಂ
ದುಱಿದೆ ನೃಪಸಿಂಹನೇಱಲ್
ಮಱುಗುವನೇಱನೆ ಕಡಂಗಿ ಸಿಂಹಮನಾತಂ ||೫೪||

ಕರಿಯಂ ಸಂಕ್ರಂದನಂ ಮೇಷಮನಸಿತಪದಂ ಕೋಣನಂ ಕಾಲನಾಳಂ
ಕರಸಾದಂ ಯಾದವೋದಂ ವರುಣನೆರಲೆಯಂ ವಾಯು ಪಾ[5]ಱಂ[5] ಕುಬೇರಂ
ಪಿರಿಯೆತ್ತಿಂ ರುದ್ರನಾರ್ದೇಱಿಯುವೊದವಿದಪರ್ ದೇವರೆಂದೆನ್ನವೋಲ್ ಕೇ
ಸರಿಯಂ ಪಾಯ್ದೇಱಿದಂ[6]ದೇಂ ತೊ[6]ಡರ್ವರೊ ಜಡರೆಂದೇಱಿಪಂ ತಾಳಹಸ್ತ ||೫೫||

---

1 ದುಂ (ಣ) 2 ಲ್ಲೊವ (ಜ) 3 ದೆಯುಕ್ಕಂ (ಚಟಡಣ) 4 ಪರೆದು ಪುದಿದೀ (ಚಟ) ಪರೆದುದೀ ಭೂ (ಜಡ) 5 ವುಂ (ಚಟ) ರುಂ (ಡ) 6 ತೆಂದೊ (ಜಣ) * 'ಜ' ಪ್ರತಿಯಲ್ಲಿಲ್ಲ.

ಹರನೆಟ್ಟಿಂ ಯಕ್ಷನೇ[1]ಳಂ[1] ಪವನನೆರಲೆಯಂ ಸಾಗರಾವಾಸನಂಭ
ಶ್ಚರಮಂ ನೈಋತ್ಯನಾಳಂ ಯಮ[2]ನೆ[2] ಮಹಿಷಮಂ ವಹ್ನಿಯಾ ಮೇಷಮಂ ಕೊ
ಕ್ಕರಿಕುಂ ಸಂಗ್ರಾಮದೊಳ್ ಮನ್ಮೃಗಪತಿಯುಗುರುಂ ತಾಗಲಿಂದ್ರೇಭಕುಂಭಂ
ಬಿರಿವನ್ನಂ ಪೊಯ್ಗುಮೆಂದೇಂ ಗಜಭುವನೊ ನಿಜಾಸ್ಥಾನದೊಳ್ ತಾಳಹಸ್ತಂ ||೫೬||

ಉ[3]ಕ್ಕಿಟ್ಟುದಕ್ಕೆ[3]ನೆಂಬವ
ನು[4]ಕ್ಕಂ ತಾಂ[4] ಬಿಟ್ಟನಾಗಿ ಸಿಂ[5]ಹ[5]ಮಸೇಜಿಲ್
... ................................ ....
.......................................................... . ||೫೭||

....................... ........ ....... ...
....................... ... ................ ...........
ಕೊಟ್ಟನಾ[6]ವಿ[6]ರೆ ಗಜಾರಿ[7]ಯ[7]
[8]ಮಟ್ಟಂ ಬೆನ್ನೇ[8] ಜುವ[9]ಗೆ[9]ಯೆಂ[9]ಟಿದೆ[9]ಯುಂಟೇ ||೫೮||

ನಾಡೊಳಗೆ ಮಿಾಸೆದೆಱಿಯಂ
ಬೇಡಿಸುವಂ ಬೀರರರಸಿಯರವೆಸರಿಂ ಕೂ
ಸಾಡಿಸಲೀಯಂ ಹು[10]ಲ್ಲು[10]ರಿ
ಯಾಡಿಸುವಂ ತೇಜದುರಿಯಿನರಮಿಾಸೆಗಳಂ ||೫೯||

ವ|| ಎಂಬಗುರ್ವಿನ ಗರ್ವಸಿಂಹರಥನಾಂ ಜೀವಿಸುತ್ತುಮಿರೆ ಮತ್ತೊರ್ವನ ನೆತ್ತಿಯೊಳ್ ಸತ್ತಿಗೆಯುಂ ಕಯ್ಯೊಳ್ ಕೈದುವುಂಟೆಂಬುದೆ ಮದೀಯ ರಾಜವೃತ್ತಿಗಂ ವೀರವೃತ್ತಿಗಂ ಭಂಗಮೆಂದು ಸಿಂಹದ ಸಹಾಯ ಬಲಮುಂ ಕೂರ್ಪುವಡೆದ ಕೈದುವಿನ ಬಲಮುಂ ಮುಪ್ಪುರಿಗೂಡಿದಂತಾಗೆ ಮೇಗೆ ಮೆಯ್ಯಱಿಯದೆ

ಬಿಡುವೆಸರ ಚಕ್ರಿಯಪ್ಪೊಡೆ
ಮಡಕೆಗಳಂ ಮಾಡಿ ಕಳಿಪುಗಲ್ಲದೊಡೀಗಳ್
ಮಡಕೆಗೆಡೆ ಮಾಡಿ ಕೊಳ್ಗೆಂ
ದಡರ್ದು ಜರಾಸಂಧ ಚಕ್ರಿ[11]ಗಾತಂ ಭೂ[11]ತಂ ||೬೦||

---

1 ಱಿಂ (ಚಟಡ) ಳ್ತಂ (ಜ) 2 ನು (ಜಡ) ನ (ಟ) 3 ಟ್ಟುದಕೀರ್ಜೀವ (ಜ) ಕ್ಕಿದಕ್ಕೆ (ಟ) 4 ಕ್ಕರ್ಗಂ (ಜ) 5 ಗ (ಜ) 6 ನಿ (ಜ) 7 ಯು ಬೆನ್ನಂ (ಜ) 8 ಮೆಟ್ಟುವ ಮಿಾ (ಜ) ಮಟ್ಟುಂ ಬೆನ್ನೀ (ಙ) 9 ಗೆಂ (ಜ) 10 ಳ್ಲ (ಙ) 11 ಗಂತಾಂ ಬೂ (ಜ) ಗಾತಂ ದೂ (ಜ)

*ವ॥ ಅಟ್ಟುವುದುಂ ಪೋಱಿಮಟ್ಟಾಸುರಂ ಮಸಗಿ .ಮಿಾಸೆಯಂ ಕಡಿದು ಕಿಡಿ ಪೋಗಿ ಕಡೆಗಣ್ಣ ಕೋಪದುರಿ ಪೊತ್ತಿ ಪರಕಲಿಸಿ ಪರ್ವಿದಂತೆ ತಳತ್ತಳಿಸುವ ಚಕ್ರವರ್ತಿಯ ಕಯ್ಯಂ ನೀಡುವುದುಮಾತನಿಂತೆಂದಂ*

ಖಳನಂ ಗೆ[1]ಲ್ವುದೆ[1] ಭಂಗಂ
ಕೆಳೆಗೊಳ್ವುದೆ ಕಷ್ಟಮವನೊಳಾಗದು ಪಗೆಯುಂ
ಕೆಳೆಯುಂ [2]ಶರಮುರಿ[2]ಯನೆ ನೀಂ
ಮುಳಿವನ್ನಂ ನೃಪತಿಮೌಳಿಮಣಿಖಚಿತಪದಾ ॥೬೧॥

ಕರಿಗೆ ಹರಿ ಹರಿಗೆ ಶರಭಂ
ಶರಭ[3]ಕ್ಕೆಲೆ[3] ನೃಪತಿ ಮುಳಿಗುಮಾ ಭೇರುಂಡಂ
ನರಿ[4]ಗೆ ಹರಿ[4] ಕರಿಗೆ ಶರಭಂ
ಹರಿಗೆಂದುಂ ಮುಳಿಯಲಱಿಯದಾ ಭೇರುಂಡಂ ॥೬೨॥

ವ॥ ಎಂಬುದುಮನಂತ ಚಾತುರ್ಬ[5]ಲಮಂ[5] ಬೆ[6]ಸಸೆ[6] ನೆಲಂ ಬೆಸಲೆಯಾದಂತೆ ಪೋಗಿ ಪೌದನಪುರದ ಪೊಱಗೊ[7]ಡ್ಡಿ ನಿಲು[7]ವುದುಂ ಅಟ್ಟತಿಂಬ ದೈವಕ್ಕೆ ಪಾಟಿಂ ಬಟ್ಟಂತಾದುದೆಂದು ಸಿಂಹರಥಂ ಬಲದ ಕಳಕಳಕ್ಕೆ ಕೆಳರ್ದು

ತುಱಿಯೆ ಪದಾತಿಯಂ ತವೆ ತುರಂಗದಟಿಂ ತುರಗಂಗಳಂ ರಥಂ
ತುಱಿಯೆ ರಥಂಗಳಂ ತುಱಿಯೆ ದಂತಿಗ[8]ಳಿಂತರಿ ಸೇನೆ[8]ಮಿಟ್ಟು ತೊ
ತ್ತುಳಿದುಱಿದಂತೆ ತಮ್ಮೊಳಗೆ ಮುಮ್ಮುಱಿಯಾಗಿರೆ ಗರ್ಜಿ[9]ಸಿತ್ತು[9] ಸೊ
[10]ಕ್ಕಿ[10]ಱಿಪಿ ದಿಗ್ಗಜಂ ರಣದೊಳೇಱಿದ ಕೇಸರಿ ತಾಳಹಸ್ತನಾ ॥೬೩॥

ವ॥ ಆದನೊರ್ವಂ ಮಾರಿಯುಱಿದಾಡಿನಂತೋಡಿ ಪೋಗಿ ಪೇೞೆ ಕೇಳ್ದುಂ ಜರಾಸಂಧಂ ಜರಾಜರ್ಝರನಂತೆ ಜಕ್ಕನೆ ಜಱಿದು ಸ್ವಯಂಬರದನುವರದೊಳ್ ವಸುದೇವನ ಕೂರ್ಪಂ ಕಂಡನಪ್ಪುದಱಿನವನಲ್ಲದಿವನ ಮಿತ್ತುವಂ ಮಿದಿ[11]ಯಲಾ[11]ರ್ಪರಿಲ್ಲೆಂದು ಶೌರಿಪುರಕ್ಕೆ ಪುರುಷರಂ ಕಳಿಪಿ ಸಿಂಹರಥನಾವೊಂ ಪಿಡಿದು ತಂದನವಂಗೆ ತನ್ನ ಮಗಳುಮಂ ಬೇಡಿದ ನಾಡುಮಂ ಚಕ್ರವರ್ತಿ ಕೊಟ್ಟಪನೆಂದು ಗೋಸಣೆ

1 ಲ್ವಡೆ (ಡ) 2 ಕರಿಮುರಿ (ಡ) ಶರಮುರಿ (ಟ) 3 ಕ್ಕಿರೆ (ಚಣ) ಕ್ಕರೆ (ಟ) ಕ್ಕುರೆ (ಡ) 4 ಹರಿಗೆ (ಚಟ) 5 ಲಂ (ಚಣ) 6 ಸಿ(ಜ) ರಸು (ಡಣ) 7 ಡ್ಡು(ಚಟಡಣ) 8 ಳಂದಮೆಸೇನೆ (ಚಡಣ) ಳಿಂತರಿ ಸೈನ್ಯ (ಜ) ಳಿಂದಮೆ ಸೇನೆ (ಟ) 9 ಸುತ್ತೆ (ಚಣ) ಸುತ್ತ (ಟಡ) 10 ಕ್ಕ (ಚಡಣ) 11 ಯಾ (ಚಟಡಣ) * ಈ ಭಾಗ 'ಜ' ಪ್ರತಿಯಲ್ಲಿಲ್ಲ.

ಯಿಡಿಸೆ ಕಂಸಂ ಪಿಡಿದು ವಸುದೇವನಲ್ಲಿಗೆ ತಪ್ಪುದುಮಾನಕ ದುಂದುಭಿಧ್ವನಿಯಿಂ ಚಟ್ಟರೊಳಗೆ ಪೆಸರಂ ನಿಲಿಸಿದೆಯೆಂದು ನಲಿದು ಪ್ರಸ್ಥಾನಭೇರಿಯಂ ಪೊಯ್ಸಿ ಪೋಱ ಮಡು[1]ವಾಗಳ್[1] ನೀಂಬರಮಿದಾವ ಭರಮೆಂದು ಕಂಸಂ ನಿವಾರಿಸಿ ಪೇಟ್ಟು ಪಡೆವೆರಸು ಪೌದನಪುರಕ್ಕೆತ್ತಿವರ್ಪುದುಂ ಸಿಂಹರಥಂ ಕೇಳ್ದು ಗಹಗಹಿಸಿ ಬಾಯ ತಂಬುಲಂ ಸೂಸೆ [2]ಸೊರ್ಕಾನೆದಿಂಬಂಗಾಡೆ ಹೋ[2]ಟಿ[2]ಗೆಯೆಂಬಂತೆ ಚಕ್ರವರ್ತಿಯ ಬಲಮಂ ಬಱ[2]ಕೆಯ್ದೆನ್ನ ಸಿಂಹಕ್ಕೆಡೆಯ ಕಡೆಯ ಬಡವರ ಬಲವೊಂದು ಪಲ್ಲಕೊನೆಗಂ ಬಾರ ದೆಂದು ಮದದಿಂ ಮುಂದುಗಾಣದೆ ಕದನಿಕ್ಕಿದಿರ್ವಂದು ಕಂಸನ ಮೇಲೆ ಸಿಂಹ ರಥಂ ಸಿಂಹಮಂ ಪಾಯಿಸೆ

ಕಂಚನಱ[3]ದೆಚ್ಚ ಕೂರ್ಗಣೆ  
ಪಂಚಾಸ್ಯನನುರ್ಚಿ ಪಾಱ[3] ಪೋದುದೆ ನೆಱೆ ಪಾ  
ಯ್ದಂಚೆವೊಲಂಬಿನ ಬಟ[3]ಯನೆ  
[4]ಬಂ[4]ಚಿಸಿ ಗಟಿ[4]ವ[4]ಟ[4]ಯ ಪಾವಿನಂತಿರೆ ಸಿಂಹಂ ||೬೪||

ಮುರಿದಂಗಂ ನೀಳ್ದ ಗಾತ್ರಂ ಮೊಟಕಲಿಸಿ ಕರಂದಂಡೆಯಂ ನೀಡಿದಂದಂ  
ಕರುವಿಟ್ಟಂತಿರ್ಪಿನಂ ಚಪ್ಪರಿಸಿ ಬೆರಸಿ ಕಂಠಾಗ್ರದೊಳ್ ನಾಲ್ಕು ಬಾಯಂ  
ತೆರೆದೇಱಪ್ಪನ್ನೆಗಂ ಕಿಟ್ಟಿಲಗನೊದಱ[5] ಮೇಲ್ವಾಯ್ದ ಪಂಚಾಸ್ಯನಂ ವೀ  
ರರ[5]ಸಾಂಗಂ[5] ಶೂದ್ರಕಂಬೋಲ್ ಕದನದೊಳಿಱ[5]ದಂ ಕಂಸನತ್ಯುನ್ನತಾಂಸಂ ||೬೫||

ಕೇಸರಿಯುಗುವೊರ್ಯಿಲ್ಲಿಂ ಪೊಸ  
[6]ಬಾ[6]ಸುಟಿವೇಂ ಕಂಸನಂಗದೊಳ್ ನೆಗೆದುವೊ ಕೂ  
ರ್ತಾಸತ್ತು ನೆರೆದ ವೀರ  
ಶ್ರೀ ಸೆಳೆದೊಂದಸಿಯ ಪಸಿಯ ಕೂರುಗುರಿನವೋಲ್ ||೬೬||

ವ|| ಅಂತು ಸಿಂಹಮಂ ಸಂಹರಿಸಿ ಸಿಂಹದಿಂ ಮುನ್ನಮೆ ನೆಲದೊಳ್ ಬಿರ್ದಿರ್ದ ಸಿಂಹರಥನಂ ಮೇಗಟ[7]ವಕ್ಕುಮೇಕೆ ಬಿ[7]ರ್ದೆ[7]ಯೆರ್ದುರ್ *ನಿನ್ನ ಸಿಂಹದ ಪಲ್ಲನೆಣಿಸಿ ನೋಡೆಂದದಱ ಪಲ್ಗಳಂ ಕಳೆದು ತಲದೊಳಿಕ್ಕಿ ಮಂದಮತಿಯ ಮುಂದೆ ತಲೆಯ ಚುಂಚಂ ಪಿಡಿದು ಚರಿಯಕ್ಕೆ ಬಿಟ್ಟ ಗೂಂಟನೆಟಿದು ತಪ್ಪಂತೆ ತಂದು ನಿಮ್ಮ ಸಿತಗ ನಪ್ಪ ಸಿಂಹರಥನಿವನಪ್ಪನೆ ಬೆಸಗೊಳ್ಳಿಮೆಂದು ಬೆಸನನೊಪ್ಪಿಸಿದ ಕಂಸಂಗೆ ವಸು

---

1 ಪುದುಂ (ಣ) 2 ನಾಕಾನೆ ತಿಂಬಗೆಗ್ನಡೋ (ಚಟ) ನಕ್ಕಾನೆತಿಂಬಗಾರ್ಡೋ (ಜಡ) 3 ಪಂ (ಣ) 4 ಬ (ಚಟ) 5 ಸಾರ್ದಂ (ಡ) 6 ವಾ (ಚಜಟಡ) 7 ಟ್ಟಿ (ಜಡ)

* ಇಲ್ಲಿಂದ ೬೯ ನೆಯ ಪದ್ಯದ ಮುಂದಿನ ವಚನದ ಅರ್ಧದವರೆಗೂ 'ಡ' ಪ್ರತಿಯಲ್ಲಿಲ್ಲ.

ದೇವನನಂಗಚಿತ್ತಮನಿತ್ತು ಸಿಂಹಮುಮಂ ಸಿಂಹರಥನುಮಂ ಬಂಡಿಯೊಳಿಕ್ಕಿಕೊಂಡುಯ್ದು ಜರಾಸಂಧನ ಮುಂದಿಡುವುದುಂ ಮಂದಸ್ಮಿತಮುಖನಾಗಿ ಚ[1]ಕ್ರಿ[1] ಬೆಕ್ಕಸಂಬಟ್ಟಿತ್ತ ಬಾಯೆಂದು ವಸುದೇವಂಗೋರಾಸನಮನಿತ್ತು ಮೆಚ್ಚಿದಂ ಬೇಡಿಕೊಳ್ಳೆನೆ [2]ವಸುದೇವಂ ದೇವ[2] ಭಿನ್ನಪಮಿದೆನ್ನ ಬೆಸನಲ್ತೆನ್ನ ೞಟ್ಟನ ಬೆಸನೆಂದು ಕಣ್ಸನ್ನೆಯಿಂ ಕಂಸನಂ ಪೊಡೆಮಡಿಸೆ

ಪರಚಕ್ರಹರಿಗೆ ರಣಕೇ
ಸರಿಗೆನ್ನಂ ಕರ್ಚಿ ಪಾಱಿಲಾರ್ಪುದ[3]ಟಿನ ಚ
ಟ್ಟ[3]ರದೆನಿಬರುಮೊಳ[4]ರಿಂದೆ[4]ನೆ
ದೊರೆಯಾನೇಗಣಿತಮವರೊಳಾ ನೇ[5]ವಿರಿ[5]ಯಂ ||೬೭||

ವ|| ಎನೆ ಕಂಸನಂ ನೀನೆತ್ತಣಿನಾರ ಮಗನೆನೆ ಕಂಸಂ ಕೈಮುಗಿದು ಕೌ[6]ಶಂ[6]ಬಿಯ ಕಳ್ಳವತಿ ಮಂಡೋದರಿಯ ಮಗನೆಂಬುದುಮರಸನವನ [7]ನೇಱಿಕೆಯುಮಿಟಿ[7]ಯೆಯುಂ ನೋಡಿ ನೀಡುಂ ನಿರವಿಸಿ ನಿಜಾಂತರ್ಗತದೊಳ್

ಸಿಂಗಮನಿಱಿವ ಸಾ[8]ಸಂ[8]
ಪಿಂಗುಲಿಗರ ಮಗನೊಳಾಗದಾರ್ಪೊಡೆ ಪಿಡಿಗುಂ
ಪಿಂಗ[9]ಳ[9]ನಾಕೃತಿಯೊಳಮು
ತ್ತುಂಗನಿವಂ ರಾಜಪುತ್ರನಾಗಲೆವೇೞ್ಕುಂ ||೬೮||

ಕಾಗೆ ಪೊರೆದನಿತಱಿಂದಂ
ಕೋಗಿಲೆ ತಾನದಱ ಪಿಳ್ಳೆಯಕ್ಕುಮೆ ಬೇಗಂ
ನೀಗಿ ನವಚೂತವನದೊಳ್
ಪೋಗಿರ್ಕುಂ ಕರ್ಮಘಟಿತಮಘಟಿತ ಘಟಿತಂ ||೬೯||

ವ|| ಎಂದು ಮಂಡೋದರಿಯಂ ತರಿಸಲಟ್ಟಿದರಸಾಳ್ಪೋಗಿ ಬೇಗಂ ಪೊಱಮಡು ನಿನ್ನಂ ಚಕ್ರವರ್ತಿ ಚಕ್ಕನೆ ಪಿಡಿದು ತರವೇೞ್ದನೆನೆ ಪಿಡಿವೆತ್ತ ಕಳ್ಳನಂತೆ ಕಳ್ಳವತ್ತಿಗೆ ತಳವೆಳ[10]ಪೋಗೆ[10]ತ್ತಣಮಿಟ್ಟು[11]ಮೇ[11]ನಿಮಿತ್ತಮೆನೆ ಸ[12]ತ್ತೆನಂಜು[12]ವೆಡೆಯೊಳ್ [13]ಬೆಳ[13]ಗಾದುದಾವ ಕಳ್ಳೆಯ ಬಸಿ[14]ಱಿಂ[14] ಬಂದೆನೆಂದಱಿಯನೆನ್ನ ಬಸಿ

---

1 ಕ್ರವರ್ತಿ (ಚಟಣ) 2 ದೇವ (ಣ) 3 ಟಿನ್ನಂ ಬ (ಚಟ) ಟಿಂಬಟ್ಟ (ಣ) 4 ರಾ (ಜ) 5 ವಿಕೆ (ಚಟಡಣ) 6 ಸಂ (ಚಟ) ಶಾಂ (ಣ) 7 ನೆರಲಿಟಿ (ಚಟಣ) 8 ಹಸ (ಚಟಣ) 9 ಗ (ಚಟಣ) 10 ಗಾಗಿ ಒಲಿದು (ಚಟಣ) 11 ವೇ (ಣ) 12 ತ್ತವೆನಂಜ (ಚಟಣ) 13 ಬಳೆ (ಚಟಣ) 14 ಱಂ (ಚಟಣ)

ಱಿಕೊಳ್ ಕಿಚ್ಚಂ ತಗುಳ್ಚಿದನಟ್ಟ ಕಳಿದೊಡಂ ಬೆನ್ನಟ್ಟದಪಂ ಮುನ್ನಿನ ಭವದ ಪಗೆ ಯೆಂದು ಮಂಡೋದರಿ ಮಂದಸಂ ಪೊತ್ತು ತಂದು ಜರಾಸಂಧನ ಮುಂದೀಡಾಡಿ ಬಿಟ್ಟ ತಲೆಯುಂ ಬೆಮರ್ತ ಮೆಯ್ಯುಂ ಬೆಳ್ಕೊಗಮುಂ ಬೆರಸು ಕಾವುದು ದೇವ ಎಂದು ಪುಲ್ಗರ್ಚಿ [1]ಪುಯ್ಯಲ್ಚಿ ಮೈಯಿಕ್ಕಿ[1]

ಸೊಂದಿಯವನೆನ್ನ ಮಗನ
ಲ್ಲಂ ದೇವರ ಪಾದದಾಣೆ ಬಿನ್ನಪಮಾ ಕಾ
ಳಿಂದಿಯೊಳಿರ್ದೀ ಕಂಚಿನ
ಮಂದಸಿನೊಳ್ ಪುಟ್ಟ ಕಂಸವೆಸರಂ ಪಡೆದಂ ॥೭೦॥

ವ॥ ಎಂದು ಮಂದಸಿನೊಳಗಣ ತಾ[2]ಯ[2] ಕಲ್ಗಳೀ ಕೋಲೆಯೊಡವುಟ್ಟದವೆಂದು ತೀವಿತಂದ ಮಾಣಿಕಂಗಳಂ ಮುಂದೆ ಸುರಿದು ಕೊಲ್ವೊಡಂ ಕಾವೊಡಂ ದೇವರೆ ಬಲ್ಲಿ ರೆಂಬುದುಮರಸಂ ವರಹಸಿತಮುಖನಾಗಿ ನಾಗಸಂಪಗೆಯೆಸಟಿಂತಿರ್ದ ಕನಕಪತ್ರಮ ನಲ್ಲಿ ಕಂಡು ಬೀಸುಂಬಟಿ[3]ಯುಮಿಲ್ಲದೆ ನಿಬಿಡಮಾಗಿ ಬರೆದಿರ್ದಕ್ಕರಂಗಳನನುಮಾನಿಸಿ ತಾನೆ ನೋಡಿ

ಶ್ಲೋ॥ ಉಗ್ರಧೀರುಗ್ರಸೇನಾಂಶಾ[4]ನ್ಮಥುರಾನ್ಮ[3]ಧುರೇಶಿತುಃ
ಪದ್ಮಾವತ್ಯಾ[4]ಮ[4]ಭೂ ಚ್ಚಂದ್ರಾದುತ್ಕಾ[5]ಯಃ[5] ಕಾಮವಹ್ನಿಪತ್
ದುರ್ಮುಹೂರ್ತ ಪ್ರಭೂತತ್ವಾದೇಷ ದೋ[6]ಷಾರು[6]ಣೇಕ್ಷಣಃ
ಮಂಜೂಷಾಯಾಂ ವಿನಿಕ್ಷಿಪ್ಯ ಯಮುನಾಯಾಂ ವಿಸರ್ಜಿತಃ

ವ॥ ಎಂದು ವಾಚಿಸಿ ಭಾಗಿ[7]ನೇ[7]ಯನಪ್ಪುದನಱಿದು ಸಂತಸದಂತನೆಯ್ದಿ ಬೇಟಿವ ಕಾಡೊಳಿ ಮಟಿಕೊಂಡುದೆಳಕುಟಿ[8]ಗೊಳ್ವಂಗೆಱಂಗೊಟ್ಟಂ[8]ತಾಯ್ತು ಕವರು ಕತ್ತಿಗೆ ಕಡಿತಂ ಬಂದಂತಾಯ್ತು ಪ್ರ[8]ದ್ಯೋತನಂಗೆ ಪದ್ಮಿನಿಯಂ ಪಣಿದಂಬೊಯ್ದಂ ತಾಯ್ತು [9]ಮುಹೂರ್ತಮೆ ಶುಭಮು[9]ಹೂರ್ತಮೆಂದು ಮಂಡೋದರಿ ಬೆಕ್ಕಸಂ[10]ಬೆಱ[10] ಗಾಗಿ ನೋಡುತ್ತುಮಿರೆ

ನಿಸದಂ ನೀನೆನ್ನ ಕೂಸಿಂಗೊಡೆಯನೆಯೆನಗಿನ್ನುಂಟೆ ತೇಜಂ ಭವತ್ಸಾ
ಹಸ ಸಿಂಹಕ್ರೀಡೆಗಾಂ ಸಂಗಿಗನೆನಱಿದಿರೆಂದುತ್ಸವಾತೋದ್ಯಗೀತಾ
ನುಸರಂ ಟಂಕಾರಮಂ ಮುಂದಿಡೆ ಮದನಧನುರ್ಮಂಜರೀಜೀವೆ ಜೀವಂ
ಜಸೆಯಂ ಕಂಸಂಗೆ ಕೊಟ್ಟಂ ಜಸಮೆಸೆಯೆ ಜರಾಸಂಧನಾನಂದದಿಂದಂ ॥ ೭೧॥

1 ಮೆಯ್ಯಿಕ್ಕಿ (ಚಟಣ) 2 ಯಿ (ಜ) 3 ಮಧುರಾನಾಮ (ಜ) 4 ಯ (ಜ) 5 ಯಾ (ಜ) 6 ಷಗು (ಚಟಣ) 7 ನಿ (ಜ) 8 ಪ್ರ (ಜ) 9 ಮು (ಜ) 10 ಮಾಡಿ ಬೆಱ (ಟ)

ವ|| ಅದಂ ಕಂಡು ಗಲ್ಲದೊಳ್ ಕೈಯನಿಟ್ಟು ಮಱುವಟ್ಟಿರ್ದ ಮಂಡೋದರಿ ಗುಡಲುಂ ತುಡಲುಂ ಕೊಟ್ಟು ಕಳಿಪುವು[1]ದುಂ[1] ಪಡೆದ ಮರೆ ಬೆ[2]ಳ[2]ಗೆಯ್ಗುಂಡಂತೆ ಬದ್ದೆ ನೆಂದು ಕಳ್ಳವತ್ತಿಗೆ ಚಿತ್ತವಡೆದು ಪೇೞುತ್ತ ನಿನ್ನ ಮಚ್ಚಿನ ನಾಡಂ ಬೇಡಿಕೊಳ್ಳೆನೆ ಕಂಸಂ ತನಗೆ ತನಯುಪ್ರಿಯನಪ್ಪ ತಂದೆಯ ನಾಡನೆ ದಯೆಗೆಯ್ವುದೆನೆ ಕಂಸನ ಕೋಪ[3]ನಕೋಪಗ[3]ರ್ಭಗರ್ಭೋ[4]ದೀ[4]ರಿತಮನ[5]ವಧಾರಿಸಿ[5] ಧರಣಿಪತಿ ತನ್ನಂತರ್ಗ ತದೊಳ್

ಬಿಸಮನುಗುೞ್ದಪ್ಪನೀ ಸಾ
ಹಸಿ ತಂದೆಗೆ ಕಾಣ[6]ದೇನೆನಗೀ[6] ಸಂಸಾ
ರ ಸಮುದ್ರದೊಳಗಿದೇ ತಾ
ಮಸವೆಸಡಿಯ ಬಸಿಱನೊಡೆದು ಪುಟ್ಟವೆ ಮಱುಗಳ್ ||೭೨||

ಎನಿತು ಮು[7]ಸಿ[7]ದಳುರ್ದೊಡಂ ನೀ
ರ ಸಿಧಿಯೊಳೊಗೆವಗ್ನಿ ವಾರ್ಧಿಯಂ ತವೆ ಸುಡದಂ
ತೆನಿತು ತನೂಜಂ ತಂದೆಗೆ
ಮುನಿದೊಡನುೞಿವಂತು ಪೊಲ್ಲಕೆಯ್ಗುಮೆ ಪಿರಿದುಂ ||೭೩||

ವ|| ಬಿಸುನೀರ್ ಮನೆಯುಂ ಸುಡುಗುಮೆ [8]ಕು[8]ಡುವೆನೆಂದು ಕೊಟ್ಟು ಕಳಿಪೆ ಕಂಸಂ ಜರಾಸಂಧಚಕ್ರವರ್ತಿ ಪೇೞ್ದ ಚತುರಕ್ಷೋಹಿಣೀಬಲಂಬೆರಸು ವಸುದೇವ ಸಹಿತಮೆತ್ತಿ ಪೋಗಿ ಮಧುರಾಪುರ[9]ಮುಂ[9] ಕೊಳ್ವಂತೆ ಲೀಲಾಮಾತ್ರದಿಂ ಕೊಂಡು

ಅರಣಿಯನುರಿಪುವ ವೈಶ್ವಾ
ನರನಂ[10]ತಿರೆ ನುನಮುನಿ[10]ಸುವ ಮನಸಿಜನಂತಂ
ತಿರೆ ಪಿಡಿದು ಕಟ್ಟಿ ಕಂಸಾ
ಸುರನಿಕ್ಕಿದನಕಟ ಜನಕನಂ ಸಂಕಲೆಯೊಳ್ ||೭೪||

ವ|| ಅಂತು ಪು[11]ೞ್ಕೆ[11] ಪಾಲಂ ಕಿಡಿಸುವಂತುಗ್ರಸೇನನಂ ಕಿಡಿಸಿ ಮಧುರಾಪುರ ದ್ವಾರದೊಳ್ [12]ಸಂ[12]ಕಲೆಯೊಳ್ ಸೆಱೆಗೆಯ್ದುದೆ ಸಂಸಾರ ಶರೀರ ಭೋಗನಿರ್ವೇಗಕ್ಕೆ ಕಾರಣಮಾಗೆ ಯುವರಾಜಲಕ್ಷ್ಮಿಯನುೞಿದ ಯತಿಮುಕ್ತಕಂ ತಪಸ್ಸಾಮ್ರಾಜ್ಯಲಕ್ಷ್ಮೀ

1 ದುಮುಟ್ಟು (ಚಟ) 2 ಳೆ (ಚಟ) 3 ಯಿ (ಜ) 4 ದಿತ (ಚಟ) 5 ಱಿದು (ಣ)
6 ರೇನನೆನಗೀ (ಜ) ದೇನನೇನಂ (ಣ) 7 ೞ (ಜ) ಗಿ (ಟ) 8 ಕೆ (ಚಟ) ಕೊ (ಣ)
9 ಮಹೀನೂಪುರಮುಂ (ಚಟ) 10 ತೆನೆಮುನಮುನೆ (ಚಟ) ತಿರೆ ಮುನ ಮುನಿಸುವ (ಣ)
11 ೞಿಯೆ (ಚಟಣ) 12 ಸ್ತ್ರಂಖಳಕಂ (ಜ)

ಸಂಭೋಗ ಶೃಂಗಾರ ಪಯಃ ಪಯೋ[1]ಧಿ[1]ನಿಮಗ್ನ [2]ಸ[2]ರೋಜನಾಗೆ ಕಂಸಂ ವಸುದೇವನಂ ಬರಿಸಿ ಸಿಂಹಾಸನಾಲಂಕೃತನಂ ಮಾಡಿ ಸಾಷ್ಟಾಂಗ ಪ್ರ[3]ಣ[3]ತನಾಗಿ ನಿಟಿಲತಟಘಟಿತ ಕರಕುಶೇಶಯ ಕುಟ್ಮಲನಿಂತೆಂದು ಬಿನ್ನವಿಸೆ

ಹರಿವಂಶಂ ಹರಿವಂಶದಂತತುಲ ಭೋಗಖ್ಯಾತಮಾಯ್ತುರ್ವರಾ
ಧರ[4]ದಿಂದಂ[4] ಸ್ಥಿ[5]ರ[5]ಮಾಯ್ತು ಶಾಸ್ತ್ರಮಯಮಾಯ್ತಾನರ್ಘಮೆಂಬಂತೆ ಪು
ಷ್ಕರಿಯಂತಾಯತದಾನಮಾಯ್ತು ದಧಿಯಂತುದ್ವೃತ್ತಸುಧಾಧಾಮಮಾ
ಯ್ತರವಿಂದಾಕರದಂತೆ ಲಕ್ಷ್ಮಿಗಿರಲಾಯ್ತೋ ನಿಮ್ಮ ಕಾರುಣ್ಯದಿಂ ||೭೫||

ಆನೆತ್ತರ್ಕಸುತಾ ಪ್ರವಾಹಭರಮೆತ್ತಲ್ಲಿರ್ದ ಮಂಜೂ[6]ಷವೆ[6]
ತ್ತಾನೀಚಾಶ್ರಯವೆತ್ತ ನಿಮ್ಮ ಬರವೆತ್ತೀ ಶಾಸ್ತ್ರ ಶ[7]ಸ್ತ್ರ[7]ಶ್ರಮಂ
ತಾನೆತ್ತಿಕ್ಕುವುದೆತ್ತ ಸಿಂಹರಥನಂ ಚಕ್ರಿಪ್ರಸಾದೋದಯಾ
ಧೀನಂ ರಾಜ್ಯಮಿದೆತ್ತ ದೇ[8]ವುದಿನಿ[8]ತುಂ ಯುಷ್ಮತ್ಪ್ರಸಾದೋದಯಂ ||೭೬||

ಅದಱಿಂದೆನ್ನುಮನೆನ್ನ ರಾಜ್ಯಭರಮಂ ಸಪ್ತಾಂಗಮಂ ಸಸ್ಯ ಸಂ
ಪದಮಂ ವಾರಿದಮಂಬುಜಾತವನಮಂ ತಿಗ್ಮಾಂಶು ನೀಲೋತ್ಪಳಾ
ಸ್ಪದಮಂ ಶೀತಮರೀಚಿ ರಕ್ಷಿಸುವವೊಲ್ ನೀಂ ರಕ್ಷಿಸೆಂ[9]ದಂ[9]ದು ಬೇ
ಡಿದನಾ[10]ತಂ[10] ನತಮೌಳಿರತ್ನರುಚಿಗಳ್ ತಳ್ಪೊಯ್ಯೆ ದಿಗ್ಭಾಗಮಂ ||೭೭||

ವ|| ಅಂತು ಬೇಡಿಕೊಂಡು ತನ್ನಯ ಮನೆಯ ಬಲದ ಕೆಲದೊಳನೇಕ ನೂತ್ನ ರತ್ನರಾಜಿರಾಜಿತ ಚಂಚತ್ಕಾಂಚನಮಯ ಮಹಾರಾಜಭವನಮುಮಂ ಮಾಡಿಸಿ ಕೊಟ್ಟು ಮುನ್ನಮೆ ವಸುದೇವನ ರೂಪವಿಲಾಸ ಸೌಭಾಗ್ಯ ಭಾಗ್ಯೋದಯಮಂ ಕೇಳ್ದು ಕಿವಿವೇಟಂಗೊಂಡು ಕಾಮಕಾ[11]ರ್ಮುಕನಿರ್ಮುಕ್ತ[11]ಶಿಲೀಮುಖ ಸಹಸ್ರ ಸಮಾಘ್ರಾತಮನಃಸರೋಜ ಸಂಭಾವಕಿಯಾದ ದೇವಕಿಯ ಭಾವಮನಂತಃಪುರ ಪರಿಚಾರಕಿಯರಿಂ ಕೇಳ್ದು

ಭೂವರ ವಸುದೇವಂಗೆ ಮ
ಹೀವಿಶ್ರುತ ಕಂಸರಾಜನಿತ್ತಂ ಬುಧಸಂ
ಭಾವಕಿಯಂ ಮನ್ಮಥ ಸಂ
ಜೀವಕಿಯಂ ವಿಹಿತ ವಿಭವದಿಂ ದೇವಕಿಯಂ ||೭೮||

---

1 ನಿಧಿ (ಚಟ) 2 ಮನಃಪ (ಜ) 3 ಣು (ಚಜಟ) 4 ದಂತ (ಚಜಟ) 5 ತ (ಜ) 6 ಷೆಯು (ಜ) 7 ಸ್ತ್ರಾ (ಟ) 8 ವಿಡಿದಿ (ಚಟ) ವಿನಿ (ಜ) 9 ದೆಂ (ಚಜಟ) 10 ತ್ತಾ (ಚಜಟ) 11 ಮುಕ ನಿರ್ಮುಕ್ತ (ಚಟ) ರ್ಮುಕ (ಜ)

ಸರಸಿಜಸಂಭವಂ ಕುಸುಮಸಾಯಕನಾಗಿ ಸುಧಾಂಶು ಚಂದನಂ
ಸರಸಿಜಮುತ್ಪಲಂ ಸರಸಿ ಚಂದ್ರಿಕೆ ಮಾಲತಿ ಚಂದ್ರಕಾಂತ ಬಂ
ಧುರಪರಮಾಣುವೆಂಬಿವಱಿನಾತ್ಮಮನಃಸುಕುಮಾರ ಹಸ್ತದಿಂ
ವಿರಚಿಸಿದಂ ನಿಜೇಶಮುಖಸೌರಭಭೃಂಗಿಯನಾ ಲತಾಂಗಿಯಂ ||೭೯||

ವ|| ಮತ್ತಮಾ ಮನೋಜರಾಜಯೌವನವನವಸಂತಲಕ್ಷ್ಮಿಯ ಚರಣಪಲ್ಲವಾರುಣಿತನಖಮಯೂಖಮಣಿಮಾಲಾಮಂಜರಿಯಾ ರಾಜ[1]ಶಿರೋರತುನಗೆ[1] ಚೂಡಾಮಣಿಯಾಗೆಯುಂ ಆ ರತಿಪತಿ ಕೃತಕಗಿರಿಜಾನು ಕಲ್ಪಲತೆಯಾಜಾನು ಕಲ್ಪಲತೆಯಾ ಹರಿವಂಶಪಾರಿಜಾ[2]ತನ ಪಾರಿಜಾತ[2] ಶಾಖಾನುಕಾರಿಯಾಜಾನುಶಾಖಾದ್ವಯಮನಾವೇಷ್ಟಿಸಿಯುಂ ಆ ಮನ್ಮಥ ಮಹಾರಾಜಭವನ ಮೂಲಸ್ತಂಭಸಾಂಚಾಳಿಕೆಯ ರಂಭಾಸ್ತಂಭಾನುಕಾರಿಯಾಗಿರು [3]ಶಾಖೆ[3]ಯಾದ ಕುಮಾರಕುಂಜರನ ಮನಃಕುಂಜ[4]ರಾ[4]ಲಾನಸ್ತಂಭಮಾಗೆಯುಂ ಆ ಕಂತುಕೇಳೀತರಂಗಿಣೀ [5]ಪುಳಿನಸ್ಥಳಿಯ ನಿತಂಬ ಪುಳಿನಸ್ಥಳಿ ಮಹಾರಾಜ ರಾಜಹಂಸನ ಲೀಲಾರಾಜಹಂಸೀವಿನೋದಕ್ಕೆ ಪುಳಿನ ಸ್ಥಳಮಾಗೆಯುಮಾ ಕಾಮಕಾರ್ಮುಕಾಯಮಾನ ಭ್ರೂಲೇಖೆಯ ಮುಷ್ಟಿಗ್ರಾಹ್ಯಮಧ್ಯಮಾ ಧನುರ್ವಿದ್ಯಾಪಿನಾದ ಪ್ರತ್ಯಾದೇಶನ ಕೋದಂಡ ಮಧ್ಯಪ್ರದೇಶಮಾಗೆಯುಮಾ ಕುಸುಮಾಯುಧಕುಂಭಿ ಲೀಲಾಕುಂಭಿನಿಯ ಕುಚಕುಂಭಮಾರಾ[6]ಜ[6]ಮೂರ್ಧಾಭಿ[7]ಷಿಕ್ತ[7]ನ ಸಾಮ್ರಾಜ್ಯಾಭಿಷೇಕ ಶಾತಕುಂಭಮಾಗೆಯುಮಾ ಶೃಂಗಾರಸಂಭವ ಶರಚ್ಚಂದ್ರ ಚಂದ್ರಿಕೆಯ ಮುಖಚಂದ್ರನಾ ಹರಿವಂಶ ಚಕೋರೀಚಂದ್ರನ ಚಂದ್ರಿಕಾವಿಹರಣಕ್ಕೆ ಸಂಪೂರ್ಣಚಂದ್ರನಾಗೆಯುಮನೂನ ಕಾಮಸಾಮ್ರಾಜ್ಯ ಸುಧಾಪಯೋನಿಧಿಯೊಳೋಲಾಡುತ್ತುಮಿರೆಯಿರೆ

ತನುಸೋಂಕಿಂ ಮಧುರಾಧರಾಮೃತದೆ ಸರ್ವಾಂಗೀಣಸೌಗಂಧದಿಂ
ಘನಲಾವಣ್ಯಸಮೃದ್ಧಿಯಿಂ ಪಿಕನಿನಾದ ಖ್ಯಾತಿಯಿಂದೀಯೆ ಕಾ
ಮಿನಿ ಪಂಚೇಂದ್ರಿಯ ಸೌಖ್ಯಮಂ ತಳೆದನುರ್ವೀಪಾಲಮೌಳಿಪ್ರಭಾ
ದ್ಯುನದೀದ್ಯೋತಪದಾಂಬುಜಂ ಪ್ರತಿದಿನಂ ಸಾಹಿತ್ಯವಿದ್ಯಾಧರಂ ||೮೦||

---

1 ಶೇಖರರತ್ನನ ಚೂಡಾಮಣಿಗೆ (ಚಟಙ) 2 ತ (ಟಙ) 3 ಶೋಭೆ (ಚಟಙ) 4 ರಕಾ (ಜ) 5 ಪು (ಜ) 6 ಜನೆ (ಚಟಡ) ಜನ್ಯ (ಜ) 7 ಷೇಕ (ಜ)

*ಇದೇ ಆಶ್ವಾಸದ ೬೬ನೆಯ ಪದ್ಯದ ಮುಂದಿನ ವಚನದಿಂದ ಇಲ್ಲಿಯವರೆಗೆ 'ಡ' ಪ್ರತಿಯಲ್ಲಿಲ್ಲ.

ಇದು ಮೃದುಪದಬಂಧಬಂಧುರ ಸರಸ್ವತೀ ಸೌಭಾಗ್ಯ[1]ವ್ಯಂಗ್ಯ ಭಂಗಿ[1] ನಿಧಾನ ದೀಪವರ್ತಿ ಚತುರ್ಭಾಷಾ ಕವಿಚಕ್ರವರ್ತಿ ನೇಮಿಚಂದ್ರ ಕೃತಮುಂ ಶ್ರೀಮತ್ಪ್ರತಾಪಚಕ್ರವರ್ತಿ ವೀರಬಲ್ಲಾಳದೇವ ಪ್ರಸಾದಾಸಾದಿತ ಮಹಾಪ್ರಧಾನ ಸೆ[2]ಜ್ಜೆವಳ್ಳ ಪದ್ಮನಾಭದೇವ ಕಾರಿತಮುಮಪ್ಪ ನೇಮಿನಾಧಪುರಾಣದೊಳ್

**ಷಷ್ಠಾಶ್ವಾಸಂ**

ಸಮಾಪ್ತಂ

---

1 ಭಂಗಿನಿ (ಜ) ವ್ಯಂಗ್ಯಭಂಗಿನಿ (ಟ) 2 ಪದವೀ ವಿರಾಜಿತ ಸೆ (ಚಜಟಡ)

# ಸಪ್ತಮಾಶ್ವಾಸಂ

ಶ್ರೀವೆರಸು ಬಂದ ಚಂದ್ರಮ
ನೀವಮೃತವನೀಯೆ ತನಗೆ ಮಧುರಾಧರದಿಂ
ದೇವಕಿಯ ನಗೆಮೊಗಂ ವಸು
ದೇವಂ ದೇವಂಬೊಲಿರ್ದನಪ್ರತಿಮಲ್ಲಂ ॥೧॥

ವ॥ ಒಂದು ದಿನಂ ಮಧ್ಯಂದಿನ ಸಮಯದೊಳ್ ಮಧುರಾಪುರಕ್ಕೆ
ಬಲ್ಲಿಯೆಲ್ ಬೇಱಿರ್ದ[1] ಕುಶಾಳಿಕೆ ಪೆಡತಲೆ[2]ಯಂ[2] ಪೊಕ್ಕ ಕಣ್ ತೋರ್ಪ ಕೆಯ್ಯಾ
ಲ್ಪಿನ ಪಾತ್ರಾವಕ್ಕೆ [3]ಪೊಕ್ಕಿ[3]ರ್ದೊಣವಸಿಱುಡುಗಿರ್ದೊಂದುರಂ ಪೊಟ್ಟಿಬಾಯ್ ಬೇ
ಕುಬಿಯೋದಂತಿರ್ದ ಬಾನಂಗುಟಿ [4]ಗಿಟಿಗಿಟಿ[4] ಜಂತ್ರಂಬೊಲಾಗಿರ್ದ ಮೈ ಮೆ
ಯ್ಸಿರಿ ಚಿನ್ನಾಪಕ್ಕೆ ಪೆಕ್ಕಾಗಿರೆ ಚಲಿಗೆ[5]ಗೊಡ್[5]ಬ್ಬಂದನೊರ್ವಂ ಮುನೀಂದ್ರಂ ॥೨॥

[6]ಬಿಸಿಲಿಂಬಿಟ್ಟುರ್ದೊಡೆದೊಡಲಂ[6]
ಪಸಿಪಿಂಬ ಸ[7]ದ[7]ರ್ಥಿ (?) ರಾಂತರಸದಿಂ ಮುಸಿಯಾ
ಯ್ತುಸದಳಮೆನೆ ಮೆಯ್ಯ ಮಲಂ
[8]ಮಿಸುಗಿದುದಾ ಮದನ ಕರಟಿ[8]ಕಂಠೀರವನಾ ॥೩॥

ಸಿಕೆಳರ್ದುವಿುಳಿದು[F]ರಿದು ಗಗನಮು
ನಕುರ್ದು ತಪೋಧನನ ತಪದ ಸೆಗಳಿ ಕನಲ್ದು
ವ್ವಳಿಸೆ ತನಗೋಡಿ ಕಾಡುವ
ಜಳಧರಮಂಡಳದ ಮಱಿಯನರ್ಕಂ ಪೊಕ್ಕಂ ॥೪॥

ವ॥ ಅಂತುಮಲ್ಲದೆ

ಅಡವಿಯು ಕಿರ್ಚು ಕರ್ಚಿದುದು ಪುಲ್ಗಳನು[9]ರ್ಚು[9]ವ ನೀರ ಕಿರ್ಚು ಪೆ
ರ್ಗಡಲೊಳಡಂಗಿ ಪೋದುದು ಪುರಾಂತಕನಗ್ಗಳಗಣ್ಣ ಕಿಚ್ಚು ಕೆಂ
ಜೆಡೆಯೊಳಗಿರ್ದ ಗಂಗೆಯೊಳಗಿರ್ದುದು ತನ್ನುರಿಪಕ್ಕೆನಲ್ ಕರಂ
ಕಿಡಿಕಿಡಿ [10]ತಾ[10]ಗುತಿರ್ದುದು ಮಹೋಗ್ರತಪಂ ತಪನಂಕಕಾಱ[11]ನಾ[11] ॥೫॥

---

1 ಯೊಳ್ಪೇರೆಳ್ದ (ಜ) ಯೊ ಬೇರೆರ್ದ (ಡ) 2 ಯೊಳ್ (ಚಟಡಣ) 3 ಪತ್ತಿ (ಜ) 4 ಗಿಡಿಗಿಡಿ (ಜ) 5 ಗುಣ (ಚಟಡಣ) 6 ಬಸಿಱಿಂದಳಿದೊರ್ಡಲಂ ತಾಂ (ಜ) ಬಿಸಿ ಲಿಂದಳಿದೊರ್ಡಲಂ (ಡ) 7 ತ (ಚಜಟ) 8 ಮಸುಳಿಸಿತಾ ಮದನರಹನಿ (ಜ) 9 ಕ್ಕು (ಚಟಡಣ) 10 ಪೋ (ಜ) 11 ನಂ (ಚಟ) *' ಜ 'ಪ್ರತಿಯಲ್ಲಿಲ್ಲ

ತೋಱಿಸುಗುಮೆಮಗೆ ತೋರ್ಪೀ
[1]ಕೋ[1]ಱಿಯ ದೇವಕಿಯ ತನಯನಿಂದಂ ನೆತ್ತ
ಗಾಱಿವ ಕಂಸನ ನೆತ್ತರ
ಕೂಱಿಯುಪ ತ[3]ಪ್ಪಿ[4]ದಂದು ನಿನಗುಂ ಮಗಳೇ ||೯||

ವ|| ಎಂದೊಡಾಕೆ [3]ಕೆಕ್ಕಳಗೆಳರ್ದಿಟ್ಟಗಾಱದೆ ಪೆಟ್ಟಿ[3]ಯುಂ ಕಚ್ಚುವಂತೆ ಪುಟ್ಟಿದ ಮನೆ ಪೊಕ್ಕ ಮನೆಯೆರಡುಂ ಕೇಡನಾಡಿ ತೋರ್ಪಂತಾ ಕಪ್ಪಡಮನೆರಲ್ಕುಡಿಯಾಗೆ [4]ಸ[4]ಞ್ರನೆ ಸೀೞ್ದೀಡಾಡುವುದುಮುಪರ್ವಾತ್ತಮಿಂತೆಂದರ್

ಜೀವಂಜಸೆ [5]ಮರ್ಧರ ಯು[5]
ದ್ವಾವನಿಯೊಳ್ ನಿನ್ನ ಗಂಡನಂ ತಂದೆಯುಮಂ
ದೇವಕಿಗೆ ಪುಟ್ಟಿದಾತನೆ
ದೇವಕ್ಕಾದೊಡಮುಡುರ್ತ್ತು ಕೊಲ್ಲದೆ ಮಾಣಂ ||೧೦||

ವ|| ಎನೆ ತನ್ನ ಕಿವಿ[6]ಗೆ ಮಹಾ[6]ಪ್ರಳಯಂ ಕವಿ[7]ದಂ[7]ತಾಗೆ [8]ಕಾಲಮೇಲೆ ಬಿರ್ದ[8]ಱಿಯದೆ ಗೆಯ್ದುಂ ಕ್ಷಮಿಯಿಸುವುದೆಂದ ಜೀವಂಜಸೆಗಸರಿಂತೆಂದನಿಪ್ಪ ಪರಕೆಗೆ ಕೆಱಿವ ಬಾಯುಂ ಬಯ್ಗುಳಿಂಗೆ ತೆಱಿಯಿಸಿದೆ ಕ್ಷಮೆಗೆ ಬಂದ ಮನಮುಂ ಮುನಿಸಿಂಗೆ ಬರ[9]ಯಿಸಿ[9]ದೆ [10]ಇನ್ನು[10] ಕ್ಷಮಿಯಿಸು[11]ವುದೆಂದೊಡಮಿದು[11]ನಿನ್ನ [illegible] ನಗೆ ನಗುವ ಪೊಗಮನಱಿದಪ್ಪದೆ ಮಾಣದು

ದೇವಕಿಗಪ್ಪ ತನೂಜಂ
ಭೂವಳಯದೊಳಾಗಿರಂ [illegible] ಸರೋಜ
ಕ್ಷೇ ವಿಧವೆ [illegible]ತನ
ಭಾವಿ [12][ಶಿ][12] [illegible]ಸಿಂದು ಮುನಿಪತಿ ಪೋದಂ ||೧೧||

ಎಂಬುದುಮಂಬು ಕೊಂಡ [illegible] ನೆಲಕ್ಕೆ ಬಿರ್ದು ಬಾ
[13]ಯಂ[13] ಬಸಿಱಿಂಬಿಮಂ ತವೆನುಕೊಂಡು ಪೋದಳ್ದುಟಿ ನಂಬಿ ತೊಟ್ಟ ಹಾ
ರಂಬೆರಸಿಟ್ಟ ಕಯ್ಯ ಕಡಗಂ ಬೆರಸಿಕ್ಕಿದ ಕರ್ಣತಾಳದ ಪ
ತ್ರಂಬೆರಸಶ್ರುಗಕ್ಕಿಡೆದುಮಾಕೆಯು ಗಂಡನ ಸಾವುಗಂಡವೋಲ್ ||೧೨||

---

1 ಕೋ (ಣ) 2 ಪ್ಪ (ಣ) 3 ಕೆಕ್ಕಗೆ ಕೆಟ್ಟಗಿಳರ್ದಿಟ್ಟಂಗಾರದೆ ಹೆಂಟಿ (ಚಟಡ) ಕೆಕ್ಕಟಗೆ ಕೆಟ್ಟಗಿಳರ್ದಿಟ್ಟಂಗಾಱದೆ ಹೆಂಟಿ (ಣ) 4 ಸಿ (ಜ) 5 ಯುದ್ಧನಿಬ (ಚಟಡಣ) 6 ಗಾವಮಾತು (ಜ) 7 ದುತಾಗಿದಂ (ಜ) 8 ಕವಿದು ಅ (ಜ) 9 ಸ (ಚಜಡ) 10 ಎಂದು (ಚಟಡ) ಎಂತು (ಣ) 11 ವೆಂ ಅದು (ಚಟಡಣ) 12 ಸ (ಚಜಟಡಣ) 13 ಯುಂ (ಜ)

ವ॥ ಅಂತಾಬಾಲೆ ನೀರ್ಪೊಱಗಿಱಿದ ಬಾಳೆಯಂತೆ ಮಿಡುಮಿಡುಮಿಡುಕಿ ಪುಡಿಯೊಳ್ ಪೊರಳ್ದು ಮೂರ್ಛೆವೋಗಿ ಪರಿಚಾರಕಿಯರ್ ಪರಿತಂಪೆತ್ತಿಕೊಂಡು ಪೋಗಿ ಪಾಸಿನೊಳ್ ಪವಡಿಸಿ ಬಿಜ್ಜಣಿಗೆಯೊಳ್ಬೀಸಿಯುಂ ಕಣ್ಬನಿಯಂ ಸೂಸಿಯು ಮೆಂತಾನು[1]ಮೆಚ್ಚ[1]ಱಿಸಿ ಮೂರ್ಛೆದಿಳಿಯೆ ತಾನುಂ [2]ತಿಳಿದು ಪ[3]ಱುಗಱಿದಱಲ ಕೆರ್ಚು ಪೊೞ್ತಿರದ ಕೆರ್ಚಿನಂತೊಳಗೊಳಗಳು[7]ರೆ[8] ಕನ್ನದೊಳ್ಸತ್ತ ಇಳ್ಳನ ತಾಯಂ ತೊಳಗೊಳಗ[4]ಱುತೆ ತನ್ನಗೆಯ್ದು[4] ಪಾತಕ[5][ಮನಂ][6]ತಾರ್ಗನುಸಿರಲಣ್ಮದೆ ತನ್ನೊಳಿಂ ತೆಂದಳ್

ಕಂಜದಳಾಕ್ಷಿ ಮೆಯ್ಮೆಱೆವುದೇಕೆ ಮಹಾವ್ರತಿ ಬರ್ಪುದೇಕೆ ಬಂ
ದಂಜದೆ ಮೂರ್ಖನಂ ಮಿಗೆ [6]ಕೆರಳ್ಚಿ[6]ದಿಸೇಕೆನಗಾ ತಪೋಧನಂ
ನಂಜಿಡಲೇಕೆ ಭಾವಿಪೊಡಿದೆನ್ನ ಪುರಾಕೃತಕರ್ಮಮೆಂದು ಜೀ
ವಂಜಸೆ ಜೀವಮಂ ಪಮುಱಿಮಿಸ್ಟ್ವಿ ನಿಷ್ಠಾನದೊಳಿರ್ದಳಿರ್ಪಿನಂ ॥೧೩॥

ವ॥ ಕಂಸನಾಕೆಯಿರ್ದವಸ್ಥಾಂತರಮಂ ಬಂದು ಕಂಡು ಬೆರ್ಚಿ ಬೆಗಡುಗೊಂಡು

ಮೊಗಮಿನಿತಾದುದೇಕೆ ನಗೆ ಪೋಗಲಿದೇಕೆ ಕಡಂಗಿ ಕಣ್ಣನೀರ್
ನೆಗೆದಪುವೇಕೆ ಸುಯ್ ಬಿಸಿಯುಮಾದುವಿದೇಕೆ ಕದಂಪು ಕೆಂಪನಾ
ಳ್ದುಗುಬ್ಬುವುದೇಕೆ ಗಗ್ಗ[7]ರಿ[7]ಕೆಯುಗ್ಗಳವಾದುದಿದೇಕೆ ನೀಂ ಕರಂ
ಪೊಗೆವಪೆಯೇಕೆ ಸೇಱೆನಗೆ ಪಂಕಜಪತ್ರ ವಿಶಾಲಲೋಚನೇ ॥೧೪॥

ವ॥ ಎಂಬುದುಂ

ನಿಡುಸುಯ್ಗೆ ಮೊಗದ ಕಂಪಂ
ಕುಡಿವಳಿ ಪಾಱೆಮುವು ಮೊಗಮೊಳುಳ್ಳಕ್ಕರಮಾ
ಗಡೆ ಪಾಱಿದಂತಿರಿವು ಪೋದೊಡೆ
ನುಡಿಯುಳ್ಕಱಿಯುದಂತೆ ಮೋನದೊಳಿರ್ದಳ್ ॥೧೫॥

ವ॥ ಅಂತಾಕೆ ಮೂಗಿರ್ ಕಂಡ ಕನಸಿನಂತೇನುಮನೆನಲಱಿಯದೆ ಕಿಱಿದು ಬೇಗಮಿರ್ದಿದು ನಿನಗೆ ನುಡಿಯಲ್ತಕ್ಕ ಮಾತಲ್ಲೆಂದು ತಲೆವೀಸಿಯುಮಪನಸಿಪಕ್ಕಿರ ಲಱಿಪಿನೆಂದು ಬಾರದುದಂ ಬಂದ ಸಿಂದು ಮೆಯ್ಯನಿಸಿ ದೇವ[8]ಕಿ[8]ಯಾನಂದ ವಸ್ತ್ರಮಂ

---

1 ಮುಚ್ಚ (ಚಟ) 2 ಪ (ಜ) 3 ತೆ (ಚಟಡಣ) 4 ಳುತ್ತೆತನಗೈದಿದ (ಚಟ) 5 ದಾ (ಚಜಟಡಣ) 6 ಕೆಳಲ್ಚಿ ಕಳಲ್ಚಿ (ಟಡಣ) 7 ಳಿ (ಜ) 8 ಕಿ ದೇವಿ (ಣ)

ತೋಱಿ ತಱಕಟವಾಡಿದೊಡೆನಗೆ ನಗೆಯೆಂದಱಿಯದತಿಮುಕ್ತಕಮುನಿ ಮುನಿದಿಂ ತೆಂದ[1]ಘೋರ[1]ಕ್ತಿಯೊಳೆ ಮೋನಂಗೊಂಡೆಡೆಗೆಡೆಗೆ ಗುಡುಗುಡನೆ ಕವಿವ ಕಣ್ಬನಿಗಳಂ ಸೆಳ್ಳುಗುರಿಂ ಸಿಡಿದು ಸಿಡಿದು

ತನ್ನನುಜೆಗೆ ನಂದನನ
ನ್ನನ್ನತನಸ್ವಂ ಗಡಾಗಿ ಸೀಂಟೆದವೀ ಮಾ
ತಿನ್ನವಿರೆನ್ನಯ ತಾಯುಮ
ನಿನ್ನುಮನ ನೋಲೆಗಳ[2]ಸು[2]ವಂ ಗಡ ಕೇಳಾ ||೧೬||

ವ|| ಎನೆ ಕೇಳ್ದ ಕಂಸಂ ಮೊಟಗಂ ಕೇಳ್ದ ಹಂಸನಂತೆ ಕುತ್ತುವಡೆದಂತಾಗಿ

ಕದಡೆ ಕಲಂಕವಿರ್ಕುಮೆ ಮರುನ್ನದಿಯುಂ ಪೊಸದಿಕ್ಕೆ ಕಂದು ನಾ
ಱವೆ ಪೊಸಪೂಪುಮೇನಱಿಯೆ ಚಂದನದೊಳ್ ಕಿಡಿಪುಟ್ಟದೇ ಸುರರ್
[3]ನೊಪೆ[3]ಗಡಲಂ ಕರಂ ಕಪೆಯೆ ಪೇಟಿಲ್ ವಿಷ[4]ಮೇಟಿ[4]ದೆ ಶಾಂತರಪ್ಪರಂ
ಮದ[5]ಮು[5]ದಿತಾತ್ಮರೇನನೆ ವಿಕಾರಮನೆಯ್ದದದೇಕೆ ಸೈರಿಪರ್ ||೧೭||

ಮರುಳೆ ಕಡುಪೊಲ್ಲಕೆಯ್ವ
ಿರಿಯಂಗಂ ಮರ್ಮವೇದಿಗಂ ಮೂರ್ಖಂಗಂ
ನರಪತಿಗಂ ಧನಪತಿಗಂ
ಗುರುಗಂ ಪೈವಕ್ಕಮಂಜವೇಟ್ಕುಮಮೋಘಂ ||೧೮||

ವ|| ಇದರ್ಕೊಂವಜರೇಕೆ ಜ[6]ನ[6]ಮೆಲ್ಲಮ[7]ಱಗುವರ್ಗೆಱಗದ[7]ವರುರದರನುರದಿರ್ಪುದಸೀ ಮೊಲೆಯುಣ್ಬ ಮಕ್ಕಳೊಳಗಾಗಿ ಬಲ್ಲರ್ "ಸಮಣೋ ಅಮೋಘ ವಯಣೋ" ಎಂಬುದು ನಗುತೆಂದೊಡಂ ಸವಣರ ಮಾತು ಸತ್ಯಮಾದೊಡಮೇನಾಯಿತ್ತಿದರ್ಕೊಂದುಪಾಯಮುಂ ನೆನೆದೆಂ ಕಾರಣಮಿಲ್ಲದೆ ಕಾರ್ಯಮೆಂತಾದಪುದಿದರ್ಕೆ ಕಾರಣಭೂತಮಪ್ಪ ದೇವಕಿಯನೆ ಕೊಲ್ವೆನೆಂದು ಮನದೊಳಿತ್ತಿಕೊಳ್ವುದಮೊಂದು ದಿವ್ಯಗ್ವನಿಯಾಗ[8]ದಾಗದೆನ[8] ಕೇಳ್ದವಧರಿಸಿ ದಿವ್ಯಕ್ಕೆ ಪಲ್ದಿನುತ್ತುಮಾಗಳೆ ವಸುದೇವಸ್ವಾಮಿಯ ಸಮೀಪಕ್ಕೆ ಪೋಗಿ "ವಿನೀತಿರ್ಧೂರ್ತ ಲಕ್ಷಣ "ಮೆಂಬಂತೆ ಭಯಸ್ಥನಾಗಿ ತುಱುಗ್ಲಿಯ್ದು ಕಾಲ ಕೆಳಗೆ ಕುಳ್ಳಿರ್ದು ಕಯ್ಗಳಂ ಮುಗಿದು ಕಂಸನಿಂತೆಂದಂ

---

1 ನೆಂದಘೋರ (ಜ) 2 ಪು (ಜ) 3 ಸುಧೆ (ಚಟಡ) 4 ವೇಗ (ಜ) 5 ನು (ಜ) 6 ಗ (ಜಡ) 7 ಱವಗಱಗುವುದ (ಜ) ಱವರ್ಗೆಱಗುವುದ (ಡ) 8 ನದೊಳೊಗೆದುದನೆ (ಚಟಡ) ನದೊಳಗೊಗೆದುದನೆ (ಣ)

ತವರುಂ ಪೊಕ್ಕಿಲುವಾಗಿ ಮದ್ಗೃಹಮಿವಳ್ಗೀ ಸಂತಸಕ್ಕಿಲ್ಲದು
ಕ್ಕೆವ ಸೌ[1]ಧರ್ಮ್ಮ[1]ಕೆಯಿಂ[2]ದಮೇಂ[3] ಭಗಿನಿಯರ್ಪೆತ್ತುತ್ಸವಕ್ಕಾದ ಬ
ದ್ದವಣಂ ಪೆರ್ಮ್ಮನೆಗುದ್ಭವಂ ಪಡೆಗೆ ಸಾಸಿರ್ಮ್ಮಕ್ಕಳಂ ಪೊತ್ತು ತೀ
ವುವುದುಂ [3]ಪೋ ಕಳಿಸಿಂ[3] ಮದೀಯಭವನಕ್ಕೀ ದೇವಕೀದೇವಿಯಂ ||೧೯||

ಎಂದು ಪಯೋಮುಖಪಿಷಕಂ
ಭಂ ದೈನ್ಯಂಬಟ್ಟು ಬೇಡಿಕೊಂಡೆಂ ದಯೆಗೆ
ಯ್ಯೆಂದೊಡೆ ಮನಮಲ್ಲದ ಮನ
ದಿಂದಾ ವಸುದೇವನಿತ್ರನಾತಂ ಪೆತ್ತಂ ||೨೦||

ಸಿರಿವಂತರ್ ತಂಗೆವಿರಂ
ತರಿಸಿ ತವರ್ಮ್ಮನೆಗೆ ಪಿಂಗಲುಂ ಪೆಱಲುಂ ಬಿ
ತ್ತರಿಪುದೆನೆ ಬಲ್ಲಿ[4]ರೆ[4]ರ್ದೆ ಕ
ತ್ತರಿ ನಾಲಗೆ ಬೆಲ್ಲಮೆಂದು ಬಲ್ಲವರೊಳರೇ ||೨೧||

ವಿನಯಮೆ ಸಾಧು[5]ಚಿಂತೆ[5] ಕರಮುರ್ಫಮೆ ತಾನಪಕೀರ್ತಿಹೇತು ದು
ರ್ಜನನತಿವಾಕ್ಪಟುತ್ವಮೆ ಲಸದ್ಗುಣ ದೂಷಣದಾಯಿ ರೂಪು ಯೌ
ವನಮೆ ಪರಾಂಗನಾಪಹರದಿಂ ಬೆಱಗಾದಪೆನಾತನಿಂದಮಾ
ತನ ಗುಣ[6]ದೊಂ[6]ದು ದುರ್ಜನಿಕೆ ಮಿಕ್ಕುದು ಲೋಕದ ಪಾಪವಲ್ಲವೇ ||೨೨||

ಖ[7]ಲನೇಂ[7] ಕಾಣ್ಗುಮೆ ಗುಣಮಂ
ಕಲಂಕಮಂ ಕಾಣದಂತೆ ಸುಜನನುಲೂಕಾ
ವಲಿ ಬಿಸಿಲಂ ಸೂರ್ಯ್ಯಂ ಕ
ತ್ತಲೆಯಂ ಪುದ್ದಿಂಗಮಱಸಿ ಕಂಡೆಡೆಯುಂಟೇ ||೨೩||

ಜನ[8]ಪ[8]ರ ಕಿವಿಯೊಳ್ ಪಿಸುಣನೆ
ಜಿನುಗುಗುಮದು ಕುಡುವ ಭೀತಿ[9]ಯಂ[9] ದಿಕ್ಕರಿ ಕ
ರ್ಣನಿಕಾಯ[10]ಸ್ಫೋಟನಪಟು[10]
ಘನಕಂಠೀರವ ರವಂಗಳುಂ ಕೊಟ್ಟಪುವೇ ||೨೪||

1 ಧಾಮಿ (ಚಟ) 2 ದೆಯುಂ (ಜ) 3 ಪೊಕ್ಕಳಿಪಿ (ಜ) ಪೊಕ್ಕಳಿಸಿಂ (ಡ) 4 ದೆ (ಚಟಡಣ) 5 ಭೀತಿ (ಜ) 6 ವೊಂ (ಜ) 7 ಳನುಂ (ಜ) 8 ಕ (ಜ) 9 ಯಿಂ (ಚಟಡಣ) 10 ಸ್ಫುಟನ ಪಟುಂ (ಟಡ) ಸ್ಫುಟನ ಪಟಂ (ಚಣ)

ದೇವಕಿಯಮಳಂ ಪೆತ್ತಳ್
ಜೀವಂಜಸೆ ಪೆಱಸೆ ಹರಿಯ ಬೆಸದಿಂದಂ ಮಾ
ಯಾವಿ ಪರಿತಂದು ನೈಗಮ
ದೇವಂ ತಂದಿಕ್ಕೆ ಮುಂದೆ ಮಾಯಾಶಿಶುವಂ ॥೨೯॥

ವ॥ ರಾಹುಮುಖದಿನಮಳ್ವೆಱಿಯಂ ತಪ್ಪಿಸಿಕೊಂ[1]ಡುಯ್ವಂತಮಳರ್ಗ[1] ಮಳಯಾ ಚಳಕ್ಕೆ ಕೊಂಡುಯ್ದನಿತ್ತ ಕಂಸನಾ ಕೂಸುಗಳ ಕಾಳ್ಕಾಳೆಂಬ ದನಿಗೇಳ್ದಲಿಯುಲಿವು ಗೇಳ್ವ ಬೆಕ್ಕಿನಂತೆ ಬೊ[2]ಕ್ಕನೆ ಪಾಱ[3]ಪಾಯ್ದು

ಪಸಿದುಗ್ರವ್ಯಾಘ್ರನೇಣೀ ಶಿಶುಗಳನೆ ಗಡಂ ಕೋಡು ಕೊಲ್ವಂತೆ ಪಲ್ಲಂ
ಮಸೆದತ್ಯುದ್ರೇಕದಿಂ ತನ್ನಯ ಸಿರಿವನೆಯೊಳ್ಪೊಕ್ಕ ಸೆರ್ಮಾರಿಯಂ ಪೂ
ಜಿಸಿ ಬಾಱಿಪ್ಪಂದಂದಮಂ ದಿಗ್ಬಲಿಗೆದಱಿದವೊಲ್ ಸೂಸೆ ಮಾಂಸಾಸ್ಥಿ ಮಾಯಾ
ಶಿಶುವಂ ಕೊಂಡಿಕ್ಕಿದಂ ಪಾಸಱೆಯೊಳಸಗನೋಲ್ ಪೊಯ್ದು [3]ಕಂಸಂ[3] ನೃಶಂಸಂ ॥೩೦॥

*ವ॥ ಮತ್ತಮೊರ್ಮೆ

*ಅಸುರದೊಳಿಂದ್ರಜಾಲದ
ಕೂಸುಗಳಂ ಕಂಸನೊಗೆದನಱ[3]ಯೊಳ್ ನೆತ್ತರ್
ಸೂಸೆ ದೆಸೆದೆಸೆಗೆ ಕೆಂಪಿನ
ಪಾಸಂ ಪಿಡಿದೊಗೆವ ಪಟ್ಟಕಾಱನ ತೆಱದಿಂ ॥೩೧॥

ವ॥ ಮತ್ತಮೊರ್ಮೆ

ದೆಸೆದೇವತೆಯೆ ಕುಸುಂಬೆಯ
ಕುಸುಮಂಗಳಿನಿಂಡೆಯಾಡುವಂತಿರೆ ಕೆಂಗ
ಲ್ಮಸಗಿ ಪರಿತಂದು ಮಾಯದ
ಸಿಸುಗಳನೆಱಿದಱೆಯೊಳೊಗೆದನಱಗುಲಿ ಕಂಸಂ ॥೩೨॥

ಮನೆವಱ[3]ಯೊಳ್ಮಾಡಿದ ಕಂ
ಸನ ಪೊಲ್ಲಮೆ ಮುಟ್ಟಿದತ್ತು ಮುಗಿಲಂ ಪೊಗೆ ಭೋಂ
ಕನೆ ಪೊಱಮಡುವವೊಲಡುಗೆಯ
ಮನೆ[4]ಯಂ[4] ಲೇಸಾಗಿ ಬೆಳಗಿನಂ ತೊಳಗಿರ್ಕುಂ ॥೩೩॥

1 ಡೊಯ್ವಂತಃ ಅಮಳಂ ಅ (ಜ) 2 ಕ್ಕಿಸೆಪಾರಿ (ಚಟ) ಕ್ಕನೆ (ಜ) ಕ್ಕಸೆ ಪೋಗಿ (ಡ) 3 ಕೊಂದಂ (ಚಟಡಣ) 4 ಯಿಂ (ಡಣ) * ಡ ಪ್ರತಿಯಲ್ಲಿಲ್ಲ.

ಪುರುಷರ್ ಮಾಡಿದ ಪುಣ್ಯಂ
ಪರೆಯದು ನೀರೊಳಗೆ ಬಿಟ್ಟ ಘೃತಬಿಂದುವಿನಂ
ತಿರೆ [1]ತೋರ್ಕುಂ ನೀರ ಪೊಯ್ಯಲ್
ಪರೆಗುಂ[1] ಬಿಟ್ಟಂತೆ ತೈಲಬಿಂದುವನದಱಿಕೊಳ್ ||೩೪||

ವ|| ಅಂತು ಮೂಱುಗೆಯ್ದು ಋತುಗಳಂ ಪಡೆವ ಪೃಥ್ವಿಯಂತೆ ಋತುಮತಿಯಾಗಿ ದೇವಕಿ ಪೆತ್ತ ಮಕ್ಕಳನತ್ತ ನೈಗಮದೇವನೆತ್ತಿಕೊಂಡುಯ್ದಂ ಇತ್ತ ನಿಷ್ಕರುಣನಾ ದೇಪಸಿಕ್ಕಿದ ಮಾಂಸದ ಮಕ್ಕಳನೆ ಮೊಕ್ಕಳಂ ಮುಳಿದು ಶಿಲೆಯೊಳೊಗೆದಾರಿ ವರಪಿ ಕಯ್ಯಂ ತೊಡೆದುಕೊಂಡು ಮುನಿಯ ಮಾತಂ ಕೊಡೆದೆನೆಂದು ಕೊಲೆ ಪುಸಿ ಯಿನ್ನದತಿಮುಕ್ತಕನಾದೇಶಮೆ ಪುಸಿಯಾದುದೆಂದವು ತನಗೆ ತಪ್ಪದಪಮೃತ್ಯು ಗೆಯ್ದಱಿಯದೆ[2]ಯುಂ[2] ಕಂಸನತ್ಯಧಿಕಾಂಸನಾಗಿ ನಿಶ್ಚಿಂತಮಿರ್ದಂ, ಇತ್ತ ಕೃತ ಪಾಸ್ಪಂದಕಂದಳಿತಪುಷ್ಕ ಶೋಕಾಕ್ರಾಂತ ಜೀವದ್ಯಶೋವ್ರೀಡಾ ವಿಷಾದ ಸಚಿವ ಸಂಚಿತ ಪ್ರಸೂತಸಮಯ ಸಮುದ್ಭೂತ ಪುತ್ರಾ[3] ವಿದ್ಯಾವರ್ಣ್ಯಯುಮಶರಣ್ಯೆಯು ಮಂತರ್ನಿಗೂಢಗಾಢ ಶೋಕ[4]ಪಾಪ[4]ಕಿಯಪ್ಪ ದೇವಕಿ ತದ್ವೃತ್ತಾಂತಮೆಲ್ಲಮಂ ಜಲಕ್ಕನಱಿದು

ಅಸಕಟಿದಟಲುಂ ಬಸಿಱಿಕೊಳ್
ಕುಸುಂಬಿಪುರಿಯುರಿಯೆ ಸತ್ತಳತ್ತಳ್ ಬಸಿಱಿಂ
ಪೊಸೆದಳ್ ಜಿಗಿದಳ್ ನೀಡುಂ
ಬಿಸುಸುಯ್ದಳ್ [5]ನುಡಿದು ಕೆಡೆದು ಬಿದಿಯಂ ಬಯ್ದಳ್ ||೩೫||

ವ|| ಬಯ್ದಾರುಮಿಲ್ಲದ ಪೊಟ್ಟು ಪೊಯ್ದುಕೊಂಡ ಬಸಿಱ ಬಾಸುಟ್ಗಳ್ ತಗಡಂ ಪತ್ತಿಸಿದಂತಾಗೆ ಮಾಣದೊಳಗೊಳಗೆ ಮೂಗಟ್ಕಿಯಟ್ಟಿಟ್ಟು ಮಕ್ಕಳ ಮೊಗಂ ನೋಡದೆ[6]ಯುಂ[6] ಸತ್ತ ಕೂಸನಾದೊಡಮೆತ್ತಿಕೊಳ್ಳದೆಯುಂ ಬಳಗಂ ಬಳಸಿ ಸುತ್ತಿ ಕೊಳ್ಳದೆಯುಂ ಮೇಲೆ ಪೊರಳ್ದಟದೆಯುಂ ಕರೆಯದೆಯುಂ ಪೂಟಲ್ಕೊಂಡು ಪೋಗ ದೆಯುಂ [7]ಎಂತು ಬಾಟಿಕ್ಕೆಂ[7] ಮಕ್ಕಳ್ಪಡೆದುಮಟ್ಟಿವಡೆಯ[8]ದಿನ್ನುಂ[8] ಮನೆಯೊಳಿ ರ್ಪುದಱಿಂ ಬಂಜೆಯಪ್ಪುದುಂ ಬಿಂಜದೊಳಿರ್ಪುದುಮೊಳ್ಳಿತ್ತೆಂದಿರುಳ್ ನಿದ್ರೆಯುಂ ಪಗಲ್ ಪಸಿವುಮಿಲ್ಲದೆ ಮನ್ಮಾಲಂ ಮಱುಗಿ ಮನ್ಯುಮಿಕ್ಕು ಗದ್ಗದಕಂಠೆಯಾಗಿ ರ್ದೊಂದು ದಿನಸಂ ಅತಿಮುಕ್ತಕ ಮುನಿಯಂ ನಿ[9]ಲಿ[9]ಸಿ ಕಣ್ಣನೀರೊಳ್ಕಾಲಂ ತೊಳೆದು

---

1 ಪರೆಗುಂ ವಿಸ್ತರದಿಂ (ಜ) 2 ಪೋಗಮೋಗಱಿಯದೆಯುಂ (ಜ) 3 ತ (ಜ) 4 ಪಾಂ (ಚಜಟಡ) 5 ಮ (ಚಜಟಡ) 6 ಯಬಂ ಮೊಲೆಯುಣಡದೆಯುಂ (ಜ) 7 ಎಮ್ಮ ಬಾಟ್ಕಿ ಯುಂ (ಚಟಣ) ಎಂದು ಬಾಳ್ವಿಯುಂ (ಡ) 8 ದೆ (ಜ) 9 ರಿ (ಣ)

ನೀರಂ ಕೈಯೊಳಿಕ್ಕಿ ಮುನಿದಂತೆ ಕಾಲಮೇಲೆ ಬಿರ್ದು ಕಾಪರೆ ಕಣೆಗೊಳ್ವರ್[1]
ತಾಯೆ ರಕ್ಕಸಿಯಾದಳ್ ಕರುಳೆ ಹಾವಾಗಿ ಕೊಱಿದು ತಿಂದಪುದುಣ್ಬ ಕೂಟ್
ಕೊಂದಪುದು ಕುಡಿವ ನೀರ್ನಂಜಾಪುದು ಮುಂಜೂರೊಳ್ಕಿರ್ಚೆರ್ದುದು ಕಣ್ಣ ನೀರ್ಕ
ತ್ತರಿವಾಣಿಯಾದುದು ಬಸಿರ್ಬಱಿದಾಗೆ ಪೆತ್ತು ಪುತ್ರಮುಖಂಗಾಣದೆ ಪೊದೇ
ನೊಂಭತ್ತು ತಿಂಗಳ್ ಬತ್ತಿ ಬಾಳಕನಾಗಿ ಪೊತ್ತ ಬೇನೆಯಂ ಸತ್ತ ಬೇನೆಯುಮಂ
ನೀಗಲಾಱೆಂ ನೀವೆನ್ನೀ ದುಃಖಮಂ ಪಱವಡೆ ತಲೆಯಂ ಪಱಯಿಮೆಂದು ಪಱಿದ
ತಲೆಯುಮಾಱಿದ ಬಾಯುಂ ಬೆರಸಟಿಲ್ ಮರುಳ್ಗೊಂಡು ಬಾಯಟಿದಟ್ಟ ದೇವಕಿ
ದೇವಿ[2]ಯನೇಟಿಕೇಟಿ[2]ವೇನುಮಿಲ್ಲ ಶಾಂತಂ ಪಾಪಂ ಪ್ರತಿಹತಮಮಂಗಳಮದೆಂತೆನೆ
ನೀಂ ಬೆಸಲೆಯಾಗಲೊಡನೆ ಮುಂದೆ ಮಾಯಾರಿಸುವನಿಕ್ಕಿ ಪಲ್ಲಟಿಸಿ ಪೆತ್ತ ಮೂಱು
ಮಕ್ಕಳುಮನೆತ್ತಿಕೊಂಡು ಪೋಗಿ ನೈಗಮದೇವಂ [3]ದಾದಿ[3]ಯಾಗಮರ್ದನೂಡಿ ನಡಪೆ
ಮಂದಮಾರುತಾಂದೋಳಿತ ಚಂದನಚಾಮರ ಪ್ರಸೂತ ಶಿಲಾತಳಾಮೋದಮುಗ್ನಪುಷ್ಪ

ಗಿರಿಕೂಟೋನ್ನತಪುಷ್ಪ ಸೌಧ[4]ತಳದೊಳ್ ವಿ[4]ಶ್ವಂಭರಾಖಂಡದಂ
ತಿರೆ ನಿನ್ನಾತ್ಮಜರಿನ್ನು ಪೊರ್ದನಗರಿಂ ಚಾಣೂರ ಗರ್ವಾಪಹಂ
ಮುರಶೈಲಾಶನಿ ಕಂಸಕೇಳಿ ಮಥನಂ ನಾರಾಯಣಂ ಗಾಸಂಧರಿಂ
ಧುರಸಿಂಹಂ ನಿನ[5]ಗಾದಪಂ ಪುಗ[5]ಲಿದಕ್ಕೆ(ರ್)[6] ನಿನ್ನುಟ್ಟಿಗಂ ||೩೬||

ವ|| ಅತನುಂ ತ್ರಿಖಂಡ ಮಂಡಳಾಧಿಪತಿಯಾದಪನೆಂದು ದೇವಕಿಯ ದುಃಖ
ದಹನದ ಮೇಲೆ ದಯಾರಸಮುಮಂ ವಚನಾಮೃತಿಯುಮನತಿಮುಕ್ತ[7]ಕಂ[7] ಪೊಯ್ದು
ಪೋದ[8]ನ[8]ತ್ತಮಿತ್ತ ಕೆಲವಾನುಂ [9]ವಾಸರಕ್ಕೆ[9]

ಒದವಿದ ಲತೆಗಂಕುರಗ
ರ್ಭದ ಚಿಹ್ನಂ ಮೂಡುವಂದದಿಂ ದೇವಕಿಗಂ
ರ್ಭದ ಗರ್ಭದ ಚಿಹ್ನಂ ಮೂ
ಡಿದುದಾ ಕಂಸಂಗೆ ಮಿಱ್ತು ಮೂಡುವ ತೆಱದಿಂ ||೩೭||

ಅಸುರರ ಮೊಗ[10]ಮೊಗ[10]ಸಿಯಳ
ಮಿಸುಪ ಕುಚದ್ವಯ ಮುಖಂ ಕಱಂಗಿದುದವಳೊ
ಳ್ವಸಿಱ ವಳಿರೇಖೆಗೆಟ್ಟುವು
ನೊಸಲಕ್ಕರ ರೇಖೆಯೊಡನೆ ಮಧುರಾಧಿಪನಾ ||೩೮||

---

1 ಯಿದಪರ್ (ಜ) 2 ಗೆನಬ (ಚಡಣ) ಯನಲ (ಟ) 3 ದಾನಿ (ಚಟಡ) ತಾನೆ (ಣ) 4 ದೊಳ್ ಬಳೆದ ಪವಿ (ಜ) ದೊಳ್ ಪವಿಶಿವಿ (ಡ) 5 ಗಾಂಪವಂಗ ನೀ (ಚಟ) 6 ಕ್ಕೆ (ಚಟಡಣ) 7 ರುಂ (ಜ) 8 ರ (ಜ) 9 ದಿವಸಕ್ಕೆ (ಜ) 10 ದವೊಲ (ಣ)

ದಿಕ್ಪರಿವೃತರ್ ಕೃಷ್ಣಂ ಮುಚಿ
ಒಕ್ಕೆ ನೆಲಕ್ಕಾರ್ದು ಬಿರ್ದು ಕಂಸಂ ಮಣ್ಣಂ
ಮುಕ್ಕಿದಪನೆಂದು ಪೇೞ್ವಪ
ಳಕ್ಕುಮೆ ವಸುದೇವನರಸಿ ಮಣ್ಣಂ ಮೆಲ್ವಳ್[1] ||೩೯||

ತವಕದೆ ಕಂಸಂ ಕೈನೀ
ಡುವನಾಪೊಲ್ ನಂಗಲೆಂದು ಗುರುಗರ್ಭಸಿಥಾ
ನವನೇಜ ಶಾವ ಶಾವಾ
ಹಿವ್ರೊಲಿರ್ದುದು ರೋಮರಾಜಿ ದಾನಾತ್ಮಜೆಯಾ ||೪೦||

ಸಿಂಧುಪರೀತ ಭೂತಳಮನೆಯ್ದೆ ಕೊಳಲ್ಕಂಚಕ್ರದಿಂ ಜರಾ
ಸಂಧನ ಕಂಠಮಂ ಕೆಡೆಯ ಕೇಶವನಿಕ್ಕಿಪನೆಂದು ತೋರ್ಪಪೋಲ್
ಗಂಧಗಜೇಂದ್ರಯಾನೆ ಕಡುಮೋಹದ ಗುಬ್ಬ ಕಿರಾತದಾನಮು
ತ್ಕಂಧರಮಂ ಕರಂ ತಿರಿಪಿ ಕಂಕಣದಿಂದಿಡುವಳ್ ವಿನೋದದೊಳ್ ||೪೧||

ವ|| ಆ ಗರ್ಭಶಾಂತಿಕಕ್ಕೆ ಶಾಂತ್ಯುದಕಮಂ ತಳಿವಂತೆ

ಅಲರ್ವಲಗೊರ್ಂಚಲಂತಲುಗೆ ಮಿಂಚು ಪಿಕಂ ನಲಿಪಂತೆ ಚಾತಕಂ
ಜಲಕಣಯಷ್ಟಿಯೊಳ್ ಕಳಿ[2]ಕೆಗೆ[2]ರ್ಬೆ ಕರಂ ಸೊನೆಸೋರ್ವ ಭಂಗಿಯಿಂ
ಬಲವರಿ ಸೋನೆ ಗೊಂ[3]ದಣಿಸಿ[3] ಕೆಂಪಳಿರೊಳ್ಗಿ ಮಿಂಡು ಪಾಯ್ದುದಂ
ಸಲಿಸೆ ಸುರೇಂದ್ರಚಾಪಲತೆ ಬಂದುದು ಕಾರೆಳಮಾವಿನಂದದಿಂ ||೪೨||

ವ|| ಆ ಮಱಿಗಾಲದೊಳಭಿಷೇಕದೊಳ್ಭಮತಮಂ ದಾನದೊಳ್ ಧನಮಂ ಪೂಜೆಯೊಳ್ ಪೊೞ್ತಂ ಕಱಿಯುತ್ತುಮಿರ್ದಾ ಪುಣ್ಯಸತಿಯ ಪುಣ್ಯದಂತೆ ಪು[4]ಣ್ಯ[4] ಯತಿಗಳಂ ಕೇಳೆ ತಿಂಗಳ್ ತೀವೆ ಕಂಸಭಯದಿಂ ಗರ್ಭಂ ಕಲಂಕಿದಂತೆ ಬಸಿರ್ಮಸಗೆ ತನ್ನ ತನಯಂ ಭದ್ರಪದನಕ್ಕುಮೆಂಬುದಂ ಪೇೞ್ವಂತೆ ಭಾದ್ರಪದದೊಳ್ ಮುಳಿಯಿಸಿ ದರ್ಗೆ ವಿಳಯಕಾಳನಕ್ಕುಮೆಂಬುದನಱಿಪುವಂತೆ ಕಾಳದೊಳ್ ದುಷ್ಟಚತುಷ್ಟಯ ಕೃಷ್ಟಮ ಚಂದ್ರಮನಕ್ಕುಮೆಂಬುದಂ ನಿವೇದಿಸುವಂತಷ್ಟಮಿಯೊಳರ್ಧ ಚಕ್ರವರ್ತಿ ಯಕ್ಕುಮೆಂಬುದಂ ಸೂಚಿಸುವಂತರ್ಧರಾತ್ರದೊಳ್

1 ಪ್ಪ [illegible] ಗಳ (ಪಟ) 3 ಚಲಿಸಿದಣ್ಮಿಸಿ (ಚಟಡ) ಚಲಿಸಿ (ಖ) 4 ಣ್ಯವುಂ (ಖ)

ಅಳಿಯಂ ಪದ್ಮಿನಿ ಪಾರ್ಥಿವೇಳೆ ವಿಷಮುಂ ಕಸ್ತೂರಿಯಂ ಪುಲ್ಲೆ ಕ
ಜ್ಜಳಮಂ ದೀಪಿಕೆ ಕಾಳರಾತ್ರಿ ತಮಮುಂ ನೀಲಾಶ್ಮ[1]ಮಂ[1] ರೋಹಣ
ಸ್ಥಳಿ ಭೂದೇವಿ ತಮಾಳಮಂ ಪಡೆದವೋಲ್ ನಾನಾಹಿತಾಂಕೂರಕಂ
ದಳನಂ ದೇವಕಿ ಲೀಲೆಯಿಂದೆ ಪಡೆದಳ್ ಕಂಸೋಷ್ಣನಂ ಕೃಷ್ಣನಂ ||೪೩||

ವ|| ಆ ಪ್ರಸ್ತಾವದೊಳ್ ಕಂಸ[2]ನಱಿಗುಮೇಂ[2] ಬದ್ದವೆಂದು ಬದ್ದವಣಂ ಬಾಜಿಸುವ ದೇವದುಂದುಭಿಧ್ವನಿಗಳೊಳ್ ಘನಾಘನಧ್ವನಿಗ[3]ಳ್ತ[3]ಡಂಗಲಿಸೆ ದೇವಕಾಂತೆಯರ್ ನಿವಳಿಸುವ ಮಂಗಳದೀಪ ಮಂಜರೀಮರೀಚಿಗಳೊಳ್ಮಿಂಚಿನ ಗೊಂಚಲ್ಗಳೊಡಗಲಿಸೆ ಸೂಸುವ ಮುತ್ತಿನ ಸೇಸೆಗಳೊಳಾಲಿಕಲ್ಗಳ್ಕರೆಗಲಸಿ ಕೊಳ್ವ ಮುಟಿಕಿಯೊಳಾನಂದ ಬಾಷ್ಪವರ್ಷವಡಂಗಿ ಪೋಗೆ ಸಮಸ್ತ ತ್ರೈಲೋಕ್ಯೈಕಮಧಿಕೋತ್ಸವಂ ಪುಟ್ಟಿ

ಸೊಡರ್ವೆಳಗಂ ಮುಸುಕಿದನಾ
ಗಡೆ ತನ್ನಯ ತನು ತಮಾಳರುಚಿಯಿಂದಂ ಮೇ
ಲ್ಗೆಡೆದೆತ್ತಾನು[4]ಮ[4]ವೇಟ್ಟಂ
ದೊಡೆ ಕಂಸಂ ಕಾಣ್ಗುಮೆಂಬ ತೆಱದಿಂ ಕೃಷ್ಣಂ ||೪೪||

ವ|| ಆತಂ ಕಾರಣಪುರುಷನಪ್ಪ ಕಾರಣದಿಂ ಸಹಜ ಘನಸಂಹನನಾಗಿ ಸಾಮಾನ್ಯ ಶಿಶುವಿನಂತೆ ಕಲಲಚ್ಛಾಯನಾಗದೆ ಪರಿಣತಚ್ಛಾಯೆ ನಟ್ಟು ಸಿಲೆ ಸೀಲ ಶಲಾಕೆಗೆ ಜೀವಂಬೊಯ್ದಂತಿರ್ದ ಕೃಷ್ಣನ ಮೂರ್ತಿಯಂ ಕಣ್ತೀವಿ ಕಾಣಲ್ಪಡೆದು ಕುರುಡಂ ಕಣ್ಪಡೆದಂತಾಗಿ ನಿಧಾನವನೆತ್ತಿಕೊಳ್ವವೋಲಿರಳುಮೆಯ್ಯೊಳ್ ಬೇಗಮೆತ್ತಿಕೊಂಡು [5]ಕಯ್ಯಿಂ ಪಿ[5]ಡಿವಂತೆ ಪದುಳಮಾಗಿ ಪಿಡಿದು ವಸುದೇವಂ ವಾಸುದೇವ[6]ನಂ[6] ಪೂಜಿಮಡಿಸಿ ಕಾಳಿಂದಿಯೊಳೋಲಾಡಲ್ ಕಲಿಸುವಂತೆ ಕಾಳದ ಕಟ್ಟಲೆಯೊಳ್ ತಳಂಗಳೊಳ್ ತಳೆ[7]ದು[7] ತಳವಾರ್ಗಳ್ ಮುಕುಂದನ ಮೇಲೆ ನಾಗಂ ಸಹಜಸ್ನೇಹ ಸಂಭ್ರಮದಿನೆಟ್ಟಂದು ನೀಲವಸನಮಂ ಮುಸುಂಕಿಕೊಂಡೇಕಕುಂಡಲನೋಲೆಯ ಕೊಡೆವಿಡಿದು ತಾಳಧ್ವಜನಾಗಿ ತೋಱೆ ಪುರುಷೋತ್ತಮನ ಪುಣ್ಯ ಪ್ರೇರಣೆಯಿಂ ತನ್ನ ಮೇಲೆ ಕಾಲೂಱಲಂಜಿದಂತೆ ಜೀಮೂತವ್ರಾತವಾಸಾರಮನುಡುಗಿ ಕಟ್ಟೆ [8]ಕು[8]ಡುಮಿಂಚಿನ ಕೆಯ್ದೀವಿಗೆವಿಡಿದು ಮುಗಿಲ್ಗಳೆ ಮುಂದುಱುವರಿಯೆ ಪರಿವ ಪೊನಲ್ಗಳೆ ಪಡಿಯಱರಾಗೆ ಮಾರ್ಗಂಬಿಡಿದು ನಡೆಯೆ ತಮ್ಮೊಡವೆಗೆ ತಾವೇ ಕಳ್ಳರಾಗಿ ಗಱಗಱಿಸಿ ಪೋಗಿ ಪೆರ್ವಾಗಿಲಂ ತಾಗೆ ಒಂದು ಬಿಯ್ಯಗವಿಕ್ಕಿ

---

1 ಮಾ (ಜ) 2 ನ (ಜ) 3 ಳ (ಚಟಡ) 4 ಮೆ (ಜ) 5 ಕಯ್ಪಿ (ಜ) 6 ನ ಮನೆಯಿಂ (ಜ) 7 ದಂ (ಚಟಡಣ) 8 ಳ (ಚಟಡ)

ಚೆ[1]ಕ್ಕುಟುಂ[1] ನುಸುಳಲ್ಬಾರದಂತಾಗಿ ಬಿಗಿಯೆ ಕೆತ್ತಿದ ಕರ್ಬುನದ ಪಡಿಗಳಂ ಕಂಡಿ ರ್ವರುಮಿನ್ನೇವೆವೆಂದುಮ್ಮಳಿಸಿ ಮಮ್ಮಱಿಗೊಳುತ್ತುಮಿರ್ಪನ್ನೆಗಂ ಸ್ವರ್ಗೌಕಸರ ಸೈಪಿನಿಂ ಸಗ್ಗದ ಪಡಿಗಳ್ ತೆಱೆವ ತೆಱದಿನಾ ಶಕಟಘರಟ್ಟನುಂಗುಷ್ಠಂ ಮುಟ್ಟ ಲೊಡನೆ ಕೆತ್ತ ಪಡಿಗೆ[2]ಳ್ ತಮ[2]ಗೆ ತಾವೆ ತೆಱೆಯೆ ಬೆಱ[3]ಗಾದಂತೆ[3] ಬಾಗಿಲ್ಗಾ ಪಿನ ಜಾವದುಕ್ಕಡದ ಗರವಟಿಗೆಯ ತಾಣಾಂತರದವರೆಲ್ಲಮೆರಡು ಕಯ್ಯನೆತ್ತಿ ಪುಂಡರೀ ಕಾಕ್ಷಂಗೆ ಪೊಡೆವಟ್ಟು ಮಾಟದ ಮಾನಸರಂತೆ ಮಿಳಮಿಳನೆ ನೋಡುತ್ತಿರೆ ಮಾರಿಯ ಬಾ[4]ಯಂ[4] ಪೊಱಮಡುವಂತೆ ಮಧುರೆಯ ಬಾಗಿಲಂ ಪೊಱಮಟ್ಟು ಬಟ್ಟೆಗಾಣದೆ ದಿಗ್ಮೂಢರಾಗಿ ನಿಲಲುಂ ಸರಸರಿಸಿ ಪ್ರೋಗಲುಮಱಿಯದೆ ಕುಱುಕುಱು ಮೆಟ್ಟುತ್ತು ಮಿರ್ಪಿನಂ

ಪೆಡೆವಣಿಯ ಫಣಿಗಳಂತಿರೆ
ಸೊಡರಂ ಪೊತ್ತಿರಡು ಕೋಡು ಕೆಲೆದೇಂ ಮುಂದಂ
ನಡೆದುದು ಧವಳವೃಷಂ ಮಾ
ರ್ಗದೆಡೆಯುಂತಿರೆ ನಾಲ್ಕುಕಾಲಫಣಿಭೀಷಣಮಂ (?) ||೪೫||

ವ|| ಆ ಜಲದುಜ್ಜ್ವ[5]ಲ ದೀ[5]ಪಕಳಿಕಾಂಕುರಿತ ವಿಷಾಣನಪ್ಪ ವೃಷಭನ ಬೆನ್ನನೆ ಪತ್ತಿ ಪೋಗೆವೋಗೆ

ಇದು ನೀಲಾಂಭೋದಜಾಳಂ ಕರೆದಪ್ಪುದೊ ಮಹೀಭಾಗದೊಳ್ ವಾಮನೋದ್ಯ
ನ್ಮದಪೂರಂ ಧಾತ್ರಿಗೆಟ್ಟಿಂದುದೊ ಕವಿದು ವಿಹಾಯೋಮೃಗಂ ಭೂಮಿಗೇನಿ
ಕ್ಕಿದುದೋ ಕಸ್ತೂರಿಕಾಸ್ರೋತಮನೆನಗೆ ತೊಡಂಕಾಯ್ತು ಪೇಟಿಂಬಿನಂ ಬಂ
ದುದು ಘೋರಂದಂದು ಕಾಳೋರಗ ತರಳ ತರಂಗಾಳಿ ಕಾಳಿಂದಿ ಮುಂದಂ ||೪೬||

ಓಲೆಗಱೆವೊಯ್ದು ಜಲಕ
ಲ್ಲೋಲಂಗಳಿನಬ್ಧಿಯೆಂಬ ಬಾಸಿಗದತ್ತಲ್
ಕಾಲಿಂದಿ ಮೊರೆವ ತುಂಬಿಯ
ಮಾಲೆಯವೋಲ್ ಮೊರೆದು ಪರಿಯುತಿರ್ದತ್ತಾಗಳ್ ||೪೭||

ವ|| ಅದಂ ಕಂಡಪೋ ವಿಘ್ನಪರಂಪರಾ ಎನುತ್ತುಮಿರ್ವರುಮುಬ್ಬೆಗಂಬಡು ತ್ತಿಯ್ದೆವರೆ ಮುಂದಾ ಬಸವಂ ಪಸಲೆಯಂ ಪುಗುವಂತೆ ಜಗುನೆಯಂ ಪೊಕ್ಕು ಪಾಯ್ದು ಪೋಗೆ

---

1 ಕ್ಕಡುಂ (ಜ) ಕ್ಕಟುಂ (ಡ) 2 ಳವೋ (ಜ) 3 ಗಾಂತ (ಟಣ) 4 ಯಿಂ (ಣ)
5 ಲಧಿ (ಚಜ)

ಬಾಲಕನ ಮಹಿಮೆಯಿಂದಂ
ಕಾಲಿಂದಿಯ ನೀರ ಪೋಲೆ ನಡೆವುದು ಮುದದಿಂ
ನೀಲದ ಪೊಸನೆಲೆಗಟ್ಟಿನ
ಮೇಲೊಯ್ಯನೆ ನಡೆವ ತೆಱದೆ ಹರಿಕುಲತಿಲಕಂ ||೪೮||

ತರಳತರಂಗಮುಂ [1]ತರಳ[1]ದಂತೆಪೊಲಿಲ್ಪುಗೆಯಾಗೆ ಬೇಗದಿಂ
ಪರಿಯುಡುಗಿರ್ದ ಪೂರ್ಣಯಮುನಾನದಿಯುಂ ವನನಾಥನಿಂ
ಪರಿವ ಪಯೋದಮಾಲೆ ಸರಿನೋಂಪೆ ಪೆಯಿಂದಮಿನಿಬ್ಬು ಪೋದವೆ
ಚರರೆನೆ ಪಾಯ್ದು ಪೋದಪೊ ಹಲಾಯುಧನುಂ ವಸುದೇವಭೂಪನುಂ ||೪೯||

ವ|| ಎಂಬಿನಮಂತಕ್ಕೆ ಪಾಯ್ದುದುಮಾ ತೊಱೆಯ ತಡಿಯ ತುಱುವಟ್ಟೆಯಂ ತೋಱಿ [2]ಗೋಪತಿ[2] ಗೋಕುಲಮುಂ ತೋಱುವುದುಚಿತಮೆನಿಸಿ ಬಸವನ ವೃತ್ತಿಮುಪ್ಪುದುಮವರ ಪುಣ್ಯದೇವತಾಯತನದಂತೆ ಮುಂಪೊಂದು ದೇವಾಯತನಮಿರ್ದುದದನವರ್ಪೊಕ್ಕು ಪೊಱಗಂ ನೋಂಟಪ್ಪಾಗಳಲ್ಲಿಗೆ ಪುತ್ರೋತ್ಸವಂ ದೀವಿಗೆ ವೆರಸು ತೇರ್ರೈಸಿ ಬರ್ಪುದಂ ಕಂಡು ತಮ್ಮ ಪಜ್ಜೆವಿಡಿದು ಬೆನ್ನಟ್ಟಬಂದ ಕಂಸನೆಂದೇ ಬಗೆದು ಭಯಂಗೊಂಡು ಮೆಯ್ಗರೆದಿರ್ಪಿನಮಾತನಾ ತುಱುವಟ್ಟಿಗೆಱೆಯನಪ್ಪ ನಂದನಾದವನುಂ ತಮ್ಮ ತೆಱದಿನಾಗಳೆ ಪುಟ್ಟಿದೊಂದು ಪೆಣ್ಗೂಸಂ ಪಿಡಿದು ಬಂದು ನೇವತೆಗಿಂತೆಂದಂ

ಕಿತಕಂ ದೇವತೆಗೇಕೆ [3]ಪೇಟ್ಟು[3] ಪರಸಿ ಗಂಡಂ ಬೇಡಿಕೊಂಡೆನ್ನ ನಂ
ದತಿಗಿತ್ತ್ರೈ ಪುಟ್ಟಿತೊಂದು ಪೆಣ್ಣನಿವನೊಲ್ಲಳ್ನೀಡೆ ಕೊಂಡ್ಪಾದ ವಾ
ಪತಿಯಕ್ಕುಂ ತುಱುಗಾಱರೇಂ ಪಡಸಿ ಕೊಂಡುಂದಪ್ಪರೇ ಬಲ್ಕಿಕೆಂ
ಳ್ಳಿತು ಪೆಣ್ಗೂಸಿದು ಕಾಯಲೋ [4]ಕಱಿ[4]ಯಲೋ ಬೆನ್ನಟ್ಟಿಪೋ ಬಟ್ಟಲೋ ||೫೦||

ವ|| ನಚ್ಚಿನೆಮ್ಮ ಕೋ[5]ಣನನೀ[5]ದಂತಾದುದು ನೀನುಂ ಪೆಣ್ಣಪ್ಪುದಱಿಂ ಪೆಣ್ಣನೀವೆಯಲ್ಲದೆ ಗಂಡಂ ಕರ್ದು ತಪ್ಪಾ ನಿನ್ನ [6]ಪೆಣ್ಣಂ[6] ನೀನೆ ಕೊಳ್ಳೆನ್ನ ಪೆಂಡತಿ ನೋಂತುಂ ಪಸಿದುಂ ಪಾ[7]ಟಿಂ[7]ಬಟ್ಟುಂ ಕೊಟ್ಟ ಪರಕೆಯುಂ ಮಗುಳೆ ಕುಡು ಕುಡವಂದು ನಿನ್ನನೀ ಮನೆಯೊಳಗೆ ದಿಟದ ದೇವತೆಯಂತೆ ಮುಲಗಿ ಮುಲ್ಲಂತಿಗಿಱಿದು ಕುಳ್ಳಿರಲೀಯೆಂ ವಿಷ್ಣುಗುಪ್ತಂ ಲಿಂಗದ ನೆತ್ತಿಯೊಳಿಕ್ಕಿದಂತೆ ಪಿರಿಯ ಕರಿಯ ಕಲ್ಲನೆತ್ತಿ ತಂದು ನಿನ್ನ ನೆತ್ತಿಯೊಳಿಕ್ಕಿ ತುಱುಕಾರ್ತಿಯರನಾಗೊಂಡು ಸುಣ್ಣನೆ ನುಂಗಿದುದೆಲ್ಲಮಂ ಮೂಗಿಂ ಬಾಯಿಂ ಕಾಱಿಸುವೆನೆಂದು ವಿಸಾಸೆಯುಂ ಜಱಿದು ಕೂಸನೀಡಾಡಿ

1 ದೆ ತೆರ (ಚಜಟಡ) 2 ಪತಿ (ಜ) 3 ಕೇ (ಜಡ) 4 ಕೊಱೆ (ಜ) 5 ಣಂಗೀ (ಚಟಣ)
6 ಪೆಣ್ಣಂಕಳ್ಳಿ (ಚಟಣ) 7 ಲಂ (ಡ) ಖ್ರಂ (ಣ)

ನಂದಂ ಮಗುಟ್ದಿ ಪೋ[1]ಪುದು[1]ಮವರ್ಕಂಡಱಿಸುವ ಬಳ್ಳಿ ಕಾಲ್ತೊಡರ್ದುದೆಂದು ದೇವತೆಯ ಮುಂದೆ ಮಗನನಿರಿಸಿ ಮಗಳಂ ಕಳೆದುಕೊಂಡು ವಸುದೇವಂ ಕಾರ್ಯವಶಕ್ಕೆ ಕತ್ತಿಯ ಕಾಲ್ವಿಡಿದನೆಂಬಂತೆ ಕಾಲ್ವಿಡಿದೇಂ ಕನಲ್ದುಪೋಗದೆ ಬಾ ಗಂಡುಗೂಸಂ ಕೊಟ್ಟಪೆನೆಂದು ಕರೆಯೆ ತನಗಂಜಿ ದೇವತೆ ಕರೆದಳೆಗೆತ್ತು ಮತ್ತೆ ಬಂದು ನಂದನಾನಂದದಿಂ ಕಂಡಳೆಗೆ ಮಾಣಿಕಮಂ ಕೊಳ್ವಂತೆ ಕಳೆದುಕೊಂಡು

ಕಣ್ಬಡೆದ ಕುರುಡನಂತಿರೆ
ಪಣ್ಬಡೆದೆಳವಕ್ಕಿಯಂತೆ ಪುಣ್ಯದ ಫಲದಿಂ
ಪೆಣ್ಬಡೆದ ಸೂಳೆಯಂತಿರೆ
ಜಾಣ್ಬಡೆದೊಕ್ಕಲಿಗನಂತೆ ನಲಿದಂ ನಂದಂ ||೫೧||

ವ|| ಇಂತಾದೊಡೆ ನೀನೆ ದೇವತೆಯೆಂದು ಪೊಡೆವಟ್ಟು ಪೋಗಿ ಯಶೋದೆಗೆ ಕೊಟ್ಟನಿತ್ತಲಾ ಬಾಲಕಿಯಂ ದೇವಕಿಯ ಮುಂದೆ ತಂದಿಕ್ಕಿ ತಂದಿರ್ವರುಂ ತಾಮಱಿಯದಂತಿರೆ ಕಂಸಂ ತನ್ನ ತಂಗೆ ಬೆಸಲೆಯಾದುದನಱಿದಾ ಬೈಗಿರುಳೆ ಬಂದನುಜೆಯ ಮುಂದಣ ತನುಜೆಯಂ ಕಂಡು ಕೊಲಲೊಲ್ಲದೆ ಇವಳೊರ್ವಳಣ್ಮಳಾಣ್ಮನೆತ್ತಾನುಮಪ್ಪೊನಾಡೊಡಾತನೆನಗೆ ಮಾರಿಯಪ್ಪನೆಂದಾಕೆಯ ಮೂಗಿನ[2]ಡಂಗೊತ್ತಿ ಪೋದನಾಕೆಯುಂ ತನ್ನಂ ತಾನಱಿದಿಂ ಬೞಿಕ್ಕೆ ಮೊಗಮಂ ನೋೞ್ಪರ ಮೊಗಕ್ಕೆ ನಾಣ್ಚಿ ವಿಂಧ್ಯಮಂ ಪೊಕ್ಕು ವಿಂಧ್ಯಮಾನಸೆಯೆಂಬ ದೇವತೆಯಾದಳಿತ್ತಲಂದಾನಂದನ ಮಂದಿರದೊಳ್ ಮಹೋತ್ಸವಂ ಮಾಡಿ

ಕುೞಿಯೊಳು ನಾಟಿಸಿ ನೀರಂ
ಗಟಿಗಟನೆಱೆವಂತೆ ಫಲಿತ ಲತೆಗಚ್ಯುತನಂ
ಕುೞಿವೊಕ್ಕು ಕೊಂಡ ಜಸದೆಗೆ
ನೆಟಿಲೊಳ್ಗೋಪಿಯರಿ ಮಾಯಲೊಲವಿಂದೆಱೆದರ್ ||೫೨||

ಅರಿಸಿನದಂಜೆಯನಿನಿಸೋ
ಸರಿಸಲುಮಾಯದೆ ಯಶೋದೆ[3]ಯೀತಂ[3] ಪೀತಾಂ-
ಬರನೆಂದು ಧರೆಗೆ ಪೇೞ್ವಂ
ತಿರೆ ಪೊಕ್ಕುೞಿಕೊಳಿಕ್ಕಿದಳ್ ಪಯೋಜೋದರ[4]ನಂ[4] ||೫೩||

---

1 ಪಲ್ಲಿ (ಚಟಡಣ) 2 ನುಡಿದೊ (ಜ) 3 ಯಿತ್ತಂ (ಚಟಡ) ಯಿತ್ತಲ್ (ಣ)
4 ನಾ (ಜ)

ನಲಿದೊಡವುಟ್ಟಿದ ಮುಂಗೈ
ವಲಚುಂಬೆಳಗೂಸು ಕೂಡೆ ಕಣ್ದೆಱೆದವೊಲಾ
ಜಲಜಾಕ್ಷನ ಮುಂಗಯ್ಗೊ[1]ಳ್
ಜಲಜಲಿಸೆ ಯಶೋದೆ ಕಟ್ಟಿದಳ್ಕವಡಿಕೆಯಂ ||೫೪||

ನಳಿನಿಯ ಬಿರಿಮುಗುಳೊಳ್ಪಾ
ಯ್ದ ಳಿಕಳಭಂ ಬೆಂಡುನೆಗೆದು ಬಂಡುಣ್ಬವೊಲಂ
ದಲೆದಲವಲಿಸಿ ಯಶೋದೆಯ
ಮೊಲೆಯುಂಡಂ ನವತಮಾಲಕೃಷ್ಣಂ ಕೃಷ್ಣಂ ||೫೫||

ಮೃಗದಂತಿರೆ ಮಗಮಗಿಸುವ
ಸುಗಂಧ ವರತೈಲತೃಣದ ಮೇಪಿನ [2]ಸೊಡರ್ವ
ಕ್ಕ[2]ಗಳಿಂದೆ ಬೊಟ್ಟನಿಟ್ಟಳ್
ಮೊಗದೊಳ್ಕತ್ತುರಿಯ ತಿಲಕದಂತಿರೆ ಹರಿಯಾ ||೫೬||

ಪಿಡಿದಡಸಿ ಕಂಸನಿದಿರೊಡ
[3]ಲೊಡೆ[3]ವಿನಮೊದೆದೊದೆದು ಗುದ್ದಿಗುದ್ದಿಯೆ ಕೊಲಲೆಂ
ದಡಹಡಿಸುವಂತಿರಿರ್ದುವು
ಪಿಡಿಕಯಿಸಿದ ಕಯ್ಯುಮೊದೆವ ಕಾಲುಂ ಹರಿಯಾ ||೫೭||

ಅರಗಿಳಿಯಂ ಮಾಣಿಕವಂ
ಜರದೊಳಗಿರಿಸುವವೊಲಿರಿಸಿ ಮಣಿದೊಟ್ಟಿಲೊಳಾ
ಮರಕತವರ್ಣನನುತ್ಸವ
ಭರದಿಂದೆ ಯಶೋದೆ ಪಾಡಿದಳ್ ಜೋಗುಳಮಂ ||೫೮||

ಜೋ ! ನಳಿನಾಕ್ಷ ಜೋ ! ಭುವನವಲ್ಲಭ ಜೋ ! ನಯನಾಭಿರಾಮ ಜೋ !
ಜಾನಕಿಯಾಣ್ಮ ಜೋ ! ಜನಮನೋಹರ ಜೋ ! ಜಗದೀಶ ಕೃಷ್ಣ ಜೋ !
ಜೋ ನರಸಿಂಹ ಬೇಡಟಬಿದಿರಾ ಮೊಲೆಯಂ ಪಿಡಿ ಹೋ[4]ಯಿ[4]ಯೆಂದು ಚಂ
ದ್ರಾನನೆ ತೊಟ್ಟಿಲಂ ತೊನೆದು ತೂಗುತುಮಾಡಿ ಯಶೋದೆ ಪಾಡಿದಳ್ ||೫೯||

---

1 ಳು (ಜಟಡ) 2 ಸೊವಡುಕರ್ವ (ಜ) ಪೊಡರ್ವಕ್ಕು (ಡ) 3 ವೊಡೆ (ಜ) 4 ರಿ (ಜ)
ರ (ಡ)

ಎಳವೆಯ ಮುದ್ದುಂ ರೂಪುಂ
ಬಳೆಯಿಸೆ ಮೋಹನಮನವ[1]ರ[1] ಮನದೊಳ್ ಮದನಂ
ಬಳೆದಂತೆ ಬಳೆದು ಕೃಷ್ಣಂ
ಬಳೆದಂ ಗೋಪಿಯರ ತೋಳೊಳಂ ತೊಟ್ಟಲೊಳಂ ॥೬೦॥

ಚೆಣ್ಣಂ ಪೊಸವೆಂಡಿರ ಕಡೆ
ಗಣ್ಣಲಸದೆ ತೊಡರ್ದ ತಮ್ಮ ಕಡೆಗಳ ಕರ್ಪಿಂ
ನುಣ್ಣನಿರೆ ಕರಿಯ ನೆಯ್ದಿಲ
ಬಣ್ಣಂಬೊಯ್ದಂತೆ ಕರಿಯ ರೂಪಿನೊಳೆಸೆದಂ ॥೬೧॥

ಯುವತಿಯರನೊಲಿಸಿದಂ ಶ್ರೈ
ಶವದೊಳ್ ಕೇಶವನ[2]ದೊಂ[2]ದೆ ಪೂಗಣೆಯಪ್ಪ
ನ್ನೆವರಂ ನಿಂದುದು ಬಗೆ ಬೆದ
ಱುವಿನಂ ನನೆಗಣೆಯೆ ತಾಗಿ ತಾನಟಲಿಸದೇ ॥೬೨॥

ವ॥ ಮತ್ತಿತ್ತ ಮಥುರಾಪುರದೊಳ್

ಪಗಲುಳ್ಕಂ ಬಿರ್ದುದುರ್ವೀರುಹಮೊಳಱುದುವಟ್ಟಾಡಿವತ್ತದ್ರಿಜಾಲಂ
ಪೊಗೆದತ್ತಾ[3]ಶಾಮುಕಂ[3] ಮೇದಿನಿ ಮೊಟಗಿದುದಾಕಸ್ಮಿಕಂ ಭಸ್ಮಮಾಯ್ತಾ
ವಗ ವಹ್ನಿ[4]ಭ್ರಾ[4]ತಮೆರ್ದಾರ್ದುದು ಮರುಳಿರುಳೋರಂತಿರಿಕ್ಕಿತ್ತು ಬಾಷ್ಪಾಂ
ಬುಗಳಂ ಭೋರೆಂದು ದೇವಪ್ರತಿಮೆಗಳ ಪರಿಶ್ರಾಂತ ನೇತ್ರಪ್ರತಾನಂ ॥೬೩॥

ಉಡಿದತ್ತುಗ್ರಾಸಿ ಬೆಂದತ್ತರಮನೆಯುರಿದತ್ತಾತಪತ್ರಂ ತದಶ್ವಂ
ಮಡಿದ[5]ತ್ತೋವೋವೊಬಿಟ್ಟಿ[5]ತ್ತವನ ಕರಿಯುರುಳ್ದತ್ತು ಸಿಂಹಾಸನಂ ಗೋ
ಟ್ಟಿಡೆದತ್ತಾಳಾನಮುಕ್ಕಿತ್ತೆಸೆವ ಕಸವರಂ ಕಂಸನಿಟ್ಟಂಬ ತಟ್ಟೋ
ಗ್ಗುಡಿಸಿತ್ತಟ್ಟಿತ್ತು ಮಂಚಂ ನಡನಡನಡುಗಿತ್ತಾತನೇಱರ್ದ ಮಾಡಂ ॥೬೪॥

ಅಟ್ಟುವು ಗೃಹದೇವತೆಗಳ್
ಮುಟ್ಟುವು ಕಿವಿಯೋಲೆ ಬಱದೆ ಬಾಷ್ಪಾಂಜಲಿಗಳ್
ಬೀಟ್ಟಿಂದುವು ಕಣ್ಗೆಯ್ಯುದು
ವೇಟ್ಟಿಂದುವು ಪೊಲ್ಲಗನಸು ಜೀವಂಜಸೆಯಾ ॥೬೫॥

---

1 ಗ (ಚಟಡಣ) 2 ನೊಂ (ಚಜಟಡ) 3 ಶಾಶವಮುಂ (ಚಡಣ) ನಿಶಮುಂ (ಟ)
4 ಭ್ರಾಂ (ಚಟಡ) 5 ತ್ತಾದೊಲೋವಿರ್ದ (ಚಟ) ತ್ತಾದೊಲವಿರ್ದ (ಡಣ)

ಪೇೞಲ್ಬಾರದ ಮನದೊಳ್
ಪೊೞಲ್ಬಾರದ ಬರುಂಟೆ ಕೇಳ್ದವರಾರುಂ
ಬಾೞಲ್ಬಾರದ ಕನಸಂ
ಬೀೞಲ್ಬಳೆವಂತೆ ಬಳೆಯೆ ಕಂಸಂ ಕಂಡಂ ||೬೬||

ವ|| ಕಂಡೇವಯಿಸಿ ವರುಣನೆಂಬ ನೈಮಿತ್ತಿಕನಂ ಕರೆದು ಬೆಸಗೊಳ್ವುದುಮಾತಂ ಕಿವಿಗೆ ಮಾತಿಕ್ಕದ ಮುನ್ನಮೆ ಕಣ್ಬನಿಯನಿಕ್ಕಿ ದೇವಕಿಯ ಮಗನೊರ್ವಂ ಪೆಱವು[1]ೞ[1] ಬಳೆದಪನೆಂದು ಬಗೆಯೊಳ್ [2]ಪ[2]ಗೆಯನಿಕ್ಕಿ ಪೋಗೆ ಪೊ[3]ಯಿಲ್ವ[3]ಡೆದಂತಾ[4]ಗಿ[4] ತನ್ನೊೞಿಂತೆಂದಂ

ನರನೆಚ್ಚಂಬುಂ ಕವಿಕೇ
ಖರದೇವಂ ಪೇೞ್ದ ಕಬ್ಬಮುಂ ಬಿದಿ ನೊಸಲೊಳ್
ಬರೆದಕ್ಕರಮುಂ ಪರಿಕಿಸೆ
ಪರಮ ತಪೋಧನರ ವಾಕ್ಯಮುಂ ತಪ್ಪುವುದೇ ||೬೭||

ಆವೊಂಗಮಾದೊಡಂ ಮ
ತ್ತಾವುದುಮಂ ಕೞಿವುಪಾಯಮುಂಟೇ ಜಗದೊಳ್
ದೇವಂಗಂ ದೈತ್ಯಂಗಂ
ಸಾವಂ ತಪ್ಪಿಸುವುಪಾಯಮಾವುದುಮುಂಟೇ ||೬೮||

ವ|| ಆಶೌಚಮುಂ ಗೋವಧೆಯುಮುೞಿದುದೆಂಬಂತೆಮಗೆ ಪಾಪಮುಂ ಪೈಶೂನ್ಯಮುಮುೞಿದುದಿಲ್ಲೆಂದುಮ್ಮಳಿಸಿ ಪಟ್ಟಿರೆ ಪೂರ್ವಭವದೆಣ್ಬರ್ ದೇವತೆಯರ್ ಪೇಱಿವೇಱಿ ಬಂದು

ಆರಂ ಬಾರಿಪ್ಪೆನಾರಂ ನಿನಗೆಱಗಿಪೆನಾರಂ ಕೊಲಲ್ಕಾಯ್ವೆನಾರಂ
ಬೇರಿಂದಂ ಕೀೞ್ವೆನಾರಂ [5]ತಿ[5]ಱಿದು ನೋಣೆವೆನಾರಂ ತಿನಲ್ಪೋಪೆನಾಟಂ
ದಾರಂ ಪೊ[6]ಯ್ದಾರ್ವೆ[6]ನಾರಂ ಪಿಡಿದು ಪೊಸೆವೆನಾರಂ ಕರಂ ಪೊೞ್ವೆನಾರಂ
ನಾರಂ ಸೀೞ್ವಂತೆ ಸೀೞ್ವೆಂ ಬೆಸಸು ಬೆಸಸಲೇ ಕಂಸ ರಾಜಾವತಂಸಾ ||೬೯||

ವ|| ನೀನುಮ್ಮಳಿಸುವಲ್ಲಿವರಮೇನೆನೆ ಕಂಸಂ ದೇವಕಿಯ ಮಗನೊರ್ವನೆಲ್ಲಿ ದರ್ಪನೆಂಬುದಂ ಭೇದಿಸಿ ಕೊಲ್ಲಿಮೆಂಬುದುಮವರವನಿರ್ದ ಭಂಗಿಯಂ ವಿಭಂಗಬೋಧದಿನಱಿದು ರಾಕ್ಷಸಪ್ರಕೃತಿಯಪ್ಪ ದೇವತೆ ನಂದಗೋಪಿ ನಂದನನಂ ತೊಟ್ಟಿಲೊಳಿರಿಸಿ ನೀರಂ ತರಲ್ಪೋದ ಪೆಱಗೆ

---

1 ೞಿದು (ಚಜಟಡಣ) 2 ಬ (ಜಡ) 3 ಯ್ದೊ (ಜ) 4 ಗೆ (ಜ) 5 ವಿ (ಚಟಡ) ನಿ (ಜ)
6 ಯ್ಪೊರ್ವೆ (ಚಟ) ಯ್ಪುಪೆ (ಡ) ಯ್ದೊಯ್ವೆ (ಣ)

ಪೆಱನೊಸಲಾಗೆ [1]ನೆ[1]ಕ್ಕ ನೊಸಲೊಳ್ನಿಲೆಯಪ್ಪೊಡಲಾಗೆ ನಿಟ್ಟೊಡ
ಲ್ನಿಱಿದಲೆಯಾಗೆಯೊಪ್ಪು[2]ದಲೆ ತೋಳ್ ತ[2]ನಗಾಗೆ ಪೊಲ್ದದೋಳ್ ?
ತುಱುಗೆವೆಗಣ್ಗಳಾಗೆ ಬಿಡುಗಣ್ಗಳೆ ತೆಳ್ವಸಿಱಾಗೆ ಪಾಟ್ವಸಿಱ್
ಸಱ[3]ಮೊಲೆಯಾಗೆ ಬಿರ್ದವೊಲೆ ಪೂತನಿ [3]ಗೋಪಿ[3]ವೊಲಾಗೆ ಬೇಗದಿಂ ||೭೦||

ವ|| ಬಂದು ನೀರನಿೞಿಪಿ ಎತ್ತುವರಿಲ್ಲದೆ ಮಾಯದ ಮಗ[4](ಳಾಂ)[4] ತಳ್ವದೆ [5]ನೆ[5]ನ್ನೆ ಹೋರಿ ಹಸಿದನೆ ಬಾಬಾಯೆಂದು ಪಾಪಿಯ ಕೂಸನೆತ್ತಿಕೊಳ್ವಂತಟುವ ಕೂಸ ನೆತ್ತಿಕೊಂಡು

ಮುನಿಸಿಂ ನಂಜೂಡಿ ತಾ[6]ಯೂ[6]ಡಿದ ಮೊಲೆಗಳನಾ ನಂಜಿನಂತಪ್ಪ ನೀಳಾಂ
ಜನವರ್ಣಂ ಮುನ್ನೆ [7]ಕ[7]ನ್ನೆತ್ತರನೆ ಜಿಗುಱಿ [8]ಪೀರ್ವಂ[8]ದದಿಂ ಪೀರ್ದು ಹಾಹಾ
ಯೆನುತುಂ ಪುಯ್ಯಲ್ಚಿ ಬಾಯಂ ಬಿಡಿಸಿ ಬಿಡದೆ [9]ಭಲ್ಲೂ[9]ಕ ಬಾಲಂಬೊ[10]ಲಾ[10] ಪೂ
ತನಿಯಂ ಕಾಳಾಹಿ ಪೀರ್ವಂತಸುವನಸದಳಂ ಪೀರ್ದು ಕೊಂದಂ ಮುಕುಂದಂ ||೭೧||

ವ|| ಮತ್ತಮೊರ್ವಳತಿಪ್ರಚಂಡೆ ಚಾಂಡಾಳ ಪ್ರಕೃತಿಯಪ್ಪ ದೇವತೆ ಕಾಕಾ ಕೃತಿಯನಪ್ಪುಕೆಯ್ದು

ಕಾಕಂ ಪಂಜರದೊಳಗಣ
ಕೋಕಿಳಮಂ ನೋಡಲೆಂದು ಬರ್ಪಂತಿರೆ ಬಂ
ದಾ ಕೃಷ್ಣನ ಮಣಿದೊಟ್ಟಿಲ
ನೇಕಾಕಿಯ ಕಣ್ಣನಿಱಿವೆನೆಂದೆಱಗಲೊಡಂ ||೭೨||

ಆಡರ್ದು ಕಮಂಡಲುಜಳಮಂ
ತುಡುಂಕೆ ಕಂಡೊಳಗಣೆಸಡಿ ಕಾಗೆಯ ಮೂಗಂ
ಪಿಡಿದುಱದಿಱಿಂಕಿ ಮುಱಿದವೊ
ಲೆಡಗೆಯ್ವಿಡಿ[11]ದೊತ್ತಿ[11] ಮುಱಿಯೆ ಮೂಗಂ ಬೇಗಂ ||೭೩||

ಪೊಡೆದಗ್ರಾಂಗುಳಿ ಪಕ್ಷದಿಂದುಡಿವಿನಂ ಪಕ್ಷದ್ವಯಂ ಕುತ್ತಿ ಕ
ಣ್ಣೊಡೆವನ್ನಂ ನಖಚಂಚುವಿಂದೆಱಗೆ ಮತ್ತಂ ಪೊಯ್ದು[12]ಪಂಗಾ[12]ಗೆವೊಂ
ದೊಡಲಂದೊಂದಡಗಾಗೆ[13]ಮೇ[13]ಗೆ ಕರೆಯುತ್ತಾ ಕಾಗೆ ಬೀೞ್ತರ್ಪಿನಂ
[14]ಗಿಡುಗಂ ಕೊಳ್ವವೊಲಟ್ಟಿ[14] ಕೊಂದುದು ಕರಂ ವಾಮೇತರಂ ಕೃಷ್ಣನಾ ||೭೪||

---

1 ನೊ (ಜ) 2 ವರೊಳ್ತ (ಜ) ತೋಳ್ಕ (ಟಡ) 3 ಗೊಪ್ಪ (ಚಟಡಜ) 4 ಳೆಂ (ಚಟಡಜ) ನೆಂ (ಜ) 5 ಳೆ (ಜ) 6 ಯ್ದಾ (ಜ) ಯ್ಬೂ (ಚಟ) ಯ್ದೂ (ಡ) 7 ಕೆ (ಜ) 8 ಬರ್ಪಂ (ಜ) 9 ಬಲ್ಲೂ (ಚಡಜ) ಬಲ್ಲೂ (ಟ) 10 ಗಲ್ (ಚಟಡಜ) 11 ದೆ (ಚಟಡಜ) 12 ಪೆಱಾ (ಚಟಡಜ) 13 ಕಾ (ಜ) 14 ನಿಡೆಗಣ್ಗಳ್ವೊಳಲ್ಪಿ (ಟ)

ವ|| ಅಂತಾ ಶಾಗೆಯಂಶಕನ ಬೋನಕ್ಕೆರೆ[ಯಾಗೆ] ಮತ್ತೆ ಕೆಲವಾನುಂ ದಿವಸದೊಳ್

ಇಱಿದುದು ನೆಲನಂ ಹಸ್ತದ
ತೆಱದಿಂ ಮುಂದಲೆಯ ನಿಡಿಯ ಜಡೆ [1]ನುಣ್ಗ[1]ರ್ಪಿಂ
ಮಿಱುಗಿದುದು ಬಣ್ಣಮಾನೆಯ
ಮಱಿಯಂತೆವೊಲಂಬೆಗಲಸಿ ನಡೆದಂ ಕೃಷ್ಣಂ ||೭೫||

ಮೊಳೆದಂತೆವೊಲೆಳೆಯ ಮುಗಿ
[2]ಲ್ಗೆ[2]ಳಮುತ್ತುಗಳಂತೆ ಬಳೆವ ಕೃಷ್ಣಂಗೆ ತಳ
ತ್ತಳಿಸಿ [3]ಬೆ[3]ಳಗಿದುವು ಪ[4]ನೆಗಳ್
ಮೊಳೆಗಳ[4]ವೆನೆ ಮಂದಹಾಸ ಬಿಸವಲ್ಲರಿಯಾ ||೭೬||

ವ|| ಆ ಪ್ರಾಯದೊಳ್ ಮತ್ತೊರ್ವ ದೇವತೆ ಲೋಯಿಸರದ ಮೇಲೆ ಬಂಡಿ ಪರಿದಂತು ಮಾೞ್ಪೆನೆಂದಂಗಣದೊ[5]ಳ್ ತೆವಲ್ದಾ[5]ಡುವ ಮಗನ ಮೇಲೆ ಶಕಟಮಾಗಿ ಪರಿತರೆ ಪರಿವ ಬಂಡಿಯೊಳ್ಕಾ[6]ಲ್ಗೋ[6]ವ ಗೋವನೆನಿಸಿ

ಕುಣಿಕಿಲ್ಗಾಲಿ [7]ನೊಗಂ[7] ಪ
ಲ್ಗುಣಿಯ[8]ಚ್ಚಿನಿಸೊಂದ[8]ನೊಂದು ತೆಱೆಯದ ತೆಱದಿಂ
ಗಣಕೆಯ ಬಂಡಿಯನೊದೆವವೊ
ಲಣಿಯರವೊದೆದಂ ಪ್ರತಾಪಿ ಕೃಷ್ಣಕುಮಾರಂ ||೭೭||

ವ|| ಆ ರಥಮುಂ ಕಂಸನ ಮನೋರಥಮುಂ ಭಗ್ನಮಾಗೆ ಮತ್ತೊರ್ವ ದೇವತೆ ಕಿಶೋರವಾಗಿ ಕೇಶವಂಗೆ [9]ಕಿಳಿಱ[9] ಕಿವಿಯುಂ ಬಾಯುಮಂ ತೆಱೆದುಕೊಂಡು

ಬೆದಱದೆ ಬಂದು ಬಾಳಕನ ಕಯ್ಯನೆ ಕಾಯ್ದು ಕಡಂಗಿ ಕರ್ಚೆ ಕೊ
ರ್ವಿದ ಕುಱ ಕೊಯ್ಕೆ[10]ಯುಂ[10] ಮಸಗಿ ಮೇವವೊಲಾತನುಮೇಱ ನೂಂಕಿ ಕು
ತ್ತಿದೊಡದು ನೆತ್ತಿಯಿಂದೊಡೆದು ಮೂಡುವುದುಂ ತೊಳಗಿತ್ತು ಕೆಂದಳಂ
ಕುದುರೆಗೆ ಮತ್ತಮೊಂದು ಕಿವಿ ಮೂಡಿದುದೆಂಬಿನಮಂಬುಜಾಕ್ಷನಾ ||೭೮||

ವ||ಅಂತಾ ಗೂಂಟನ ಬಾಯೊಳ್ಗೂಂಟಮಂ ಬೆಟ್ಟಿದಂತಿರ್ದ ಕೆಯ್ಯನುರ್ಚಿಕೊಂಡು ಕೊಂಡದ ಕಿಚ್ಚಿನಂತಿರ್ದ ಕೋಪದೊಳಾ ದುಷ್ಟಾಶ್ವಮನಿಕ್ಕಿ [11]ಕೊಂದು ಮಾದವನ[11]ಶ್ವ

1 ಸುಂಗಿ (ಚಟಡ) ನುಂಗ (ಣ) 2 ಲೆ (ಟಣ) 3 ಶೊ (ಜ) 4 ವಿಗಳ ವೊಳೆಗಳ (ಚಟಡಣ) 5 ಳ್ ಕಪುಳ್ದ (ಚಟ) ಳ ತೆಪುಳ್ದ (ಜ) ಳ್ ತಳ್ಪ (ಡ) 6 ಲೋ (ಜ) 7 ಮೊಗಂ (ಚಟ) ನೊಗ (ಡ) 8 ಚ್ಚಿಸೊಂಡ (ಚಟ) ಚ್ಚಿಸೊಂದ (ಡ) 9 ಕೇಗಿರಿ (ಚಟಡಣ) 10 ಯೋಂ (ಚಜಟಡಣ) 11 ನ (ಚಟಡ) ಯ (ಣ)

ವೋಧವಂ ಮಾಡಿ ತುಱುಪಟ್ಟಿಯ ಪಾಲುಂ ಮೊಸರುಂ ಬೆಣ್ಣೆಯುಮಂ ಸೂಱೆಗೊಂಡು ಸಹಪಾಂಸುಕ್ರೀಡಿತರಪ್ಪ ಗೋಪಕುಮಾರರ್ಗೆ ದಕ್ಷಿಣೆಗುಡುವಂತೆ ಕೊಟ್ಟು ಪೊರೆಯುತ್ತುಮಿರೆ

ಆಡುವ ಮಕ್ಕಳ[1]ನೊಳ[1]ಕೊಂ
ಡೂಡಿಯುಮೊಳಗಿರ್ದ ಬೆಣ್ಣೆಯಂ ಮತ್ತಮದಂ
ಬೇಡಿದಪಂ ಕಾಡಿದಪಂ
ಬೇಡೆಂದು ಯಶೋದೆ ನಿನ್ನ ಮಗನಂ ಕರೆಯಾ ||೭೯||

ಸಲೆ ಕಾಯ್ದ ಪಾಲ್ ಬರ್ದುಂಕದು
ನೆಲಹಿನ ಪಾಲುಂ ಬರ್ದುಂಕದೆಲೆ ಕಱೆವೀ ಕಂ
ದಲ ಪಾಲುಂ ಮುಂ ಬರ್ದುಕದು
ಮೊಲೆಯೂ[2]ಡ[2] ಯಶೋದೆ ಕರೆದು ನಿನ್ನಯ ಮಗನಂ ||೮೦||

ಕಱೆಯಲಣಮಣ್ಮದಿರ್ದೊಡ
ವಿಱುಂಕೆ ತೊಡೆಯಿಂದೆ ಕಾಲನಾಕಳನಾ[3]ತಂ[3]
ಕಱೆವವೊಲೆಲ್ಲರ ಬಾಯೊಳ್
ಕಱೆದಪನೆಲೆ ಕರೆ ಯಶೋದೆ ನಿನ್ನಾತ್ಮಜನಂ ||೮೧||

ವ|| ಆರ್ಗೆ ಪುಟ್ಟಿಯಾರ್ಗೆ ಮುದ್ದಾದನೆಂದು ಗೋಪಿಯರಿಕ್ಕುವರಕ್ಕ ರಕ್ಕಸ [4]ಗಾ[4]ಣಕ್ಕಿರಲಾಱವೆ ಯಶೋದೆ ಕರೆದು ಕಡೆವ ಕಂಭದೊಳ್ ಪಿಡಿದು ಕಟ್ಟಿದೊಡಾ ಕೆಚ್ಚಿನ ಕಂಭಮುನಂ[5]ಜನ[5]ಗಜವಾಳಣೆಯಂ ಮುಱಿವಂತೆ ಮುಱಿದು ಪೊಱಮಟ್ಟು ಪೋಪ ಕೃಷ್ಣನಂ ಕಂಡು ಕಡುನುಡಿದು ಜಡಿದು

ದಾವಿನೊಳಡಸಿ ಯಶೋದಾ
ದೇವಿ [6]ಕರಂ ಕಟ್ಟಿ[6]ಮುದರದೊರಲುಡೆಗಿಱಿತಂ
ದೇವೇೞ್ವನೊ ದಾಮೋದರ
ದೇವಂಗುಡೆವಣಿವೊಲಾಯ್ತು[7]ಬಿಣ್ಪನಿತಾಯ್ತೇ[7] ||೮೨||

ವ|| ಆನೆಯನೆತ್ತುವಂಗಾಡು ಚಿಕ್ಕಾಡೆಂಬಂತೆ ಗೋವರ್ಧನಾಚಲಮನೆತ್ತಿದರ್ಂಗುಲೂಖಲಮೆಂಬುದಾವ ಲೆಕ್ಕಮೆಂದಱಿವರೆಲ್ಲರುಮೊಂದೆ ಕೊರಲಿಂ ಪೊಗೞೆ ಪೇರೊರಳನೆೞೆದು ಪರಿದಾಡಿದಂ ಮತ್ತಮೊರ್ಮೆ ಮತ್ತಿಯ ಮರಂಗಳಾಗಿ ಮರುಳ್ದೇ

1 ನೆಳ 7 ಬಿಣ್ಪಂತಾಯ್ತೇ (ಚಟಡಣ) ಬಿಣ್ಮತ್ತಾಯ್ತೇ (ಜ) (ಚಟಡಣ) 2 ಡು (ಜ) 3 ಡಂ (ಜ) 4 ಕಾರ (ಚಟಡಣ) 5 ಗಜ (ಚಟಡಣ) 6 ಯಃ ಕಟ್ಟಿರ್ದು (ಚಟಡಣ)

ವತಿಗಳಾಡುತುಮಿರ್ದ ಕೃಷ್ಣನಂ ಕರಿಯ ಕುರುಳಿಂ[1]ದು ಬಗೆದು[1] ನೀಲಮಂ ಕತ್ತುರಿ ಯಿಱುಂಕುವಂತಿಱುಂಕಲೊಡನೆ

ಅಮಿತಬಳಂ ಕಿಱ್ತಿಕ್ಕಿದ
ನೌಮುಂಕಿ ಮಾಂ[2]ಕರಿಸಿ ಕಂಭಯುಗಮಂ ಪುರುಷೋ
ತ್ತಮನಾ ಕಂಸನ ಭುಜಯುಗ
ಳಮನವಯವದಿಂದೆ ಕೀೞ್ವುದಂ ಗುಣಿಯಿಪವೋಲ್ ||೮೩||

ವ|| ಮತ್ತಮಾತನದಟಂ ಪೇೞಿಕ್ಕೊಡೆ

ಅಡೆವಂ ಗೋಣ್ಮುಱಿಗೊಂಡು ಬೋಟದಲೆಯಂ ಮುಂಗೆಯ್ಗಳಿಂ ಮೂರಿಗೊಂ
ಡಿಡುವಂ ಕೂಂಕಿ ಕೊಡಂಕೆಯಂ ಮುಱಿವನು[3]ಗ್ಗು[3]ತ್ತಳ್ಳಿಯಂ ಗಲ್ಲಮಂ
ಮಿಡಿವಂ ಮಿಂಡರ ಮೀಸೆಯಂ ಸೆಳೆದು ಮೂಗಿಟ್ಟೇಱುವಂ ಮಕ್ಕಳ
ಟಿಕ್ಕೊಡೆ ಬಾಯ್ವಾಯನೆ ಪೊಯ್ವನೇಂ ಸಿತಗನೋ ಕಾಳಾಹಿಕೋಳಾಹಳಂ ||೮೪||

ಇಡುವಂ ಗುರ್ದುವನುರ್ದುವಂ ಕೆಡಪುವಂ [4]ಮೇಲಿ[4]ಕ್ಕುವಂ ಕುಕ್ಕುವಂ
[5]ಬ[5]ಡಿವಂ ಬಯ್ದು ಚಿವುಂಟುವಂ ಕಿನಿಸುವಂ ಪಾಯ್ದೊತ್ತುವಂ ಕುತ್ತುವಂ
ಜಡಿವಂ ಜ[6]ತ್ತ[6]ಕುಱುಾಡುವಂ ಬಳಸುವಂ ಬೆನ್ನಟ್ಟುವಂ ಮುಟ್ಟುವಂ
ಪಿಡಿವಂ ಮಕ್ಕಳನೇಂ ಕರಂ ವಿಕರಿಯೋ ಕೂಸಾಟದೊಳ್ ಕೇಶವಂ ||೮೫||

ವ|| ಅಂತಾ ತುಱುಪಟ್ಟಿಯ ಕಿಱುಮಕ್ಕ[7]ಳಂ[7] ಮಿಂಡಮಕ್ಕಳುಮನೊಂದೆ [8]ಕೋ[8]ಲೊಳ್ ತಂದು ಪುಯ್ಯಲಿಡಿಸುವ ಕೃಷ್ಣನಂ ತುಱುಕಾರ್ತಿಯರೆಲ್ಲರೞುತ್ತುಂ ಕರೆಯುತ್ತುಂ ಬಂದು ತಂತಮ್ಮ ಮಕ್ಕಳ ತಱಿದ ಮೆಯ್ಯುಮಂ ಮುಱಿದ ಕೆಯ್ಯುಮಂ ಪಱಿದ ಕಿವಿಯುಮಂ ಒಡೆದ ಮೂಗುಮಂ [9]ಅಡೆ[9]ದ ನೆತ್ತಿ[10]ಯಂ ಬುಗುಟೆ[10] ಮಂಡೆಯುಮಂ ಯಶೋದೆಗೆ ತೋಱಿ ದೂಱಿ ಗೋಪಿಯಿಂತೆಂದಳ್

ಏಗೆಯ್ವೆಂ ಕೊಂದೊಡಮೆನ
ಗಾಗಂ ಬಸಮಲ್ಲನೆನಗೆ ಕಿಚ್ಚಿಲ್ಲದೆ ತಾ
ನೇಗಂಡುರಿದಪನಱಿಯೆಂ
ಪೋಗಿಂ ನೀಂ ಮೆ[11]ಚ್ಚೆ ಮೆಚ್ಚುಕಯ್ಯಿಂ ಪೊಯ್ಯಿಂ[11] ||೮೬||

---

1 ದು (ಚಟಡಜ) 2 ಮುಕಿಂ ಮಾ (ಚಟಡ) ಮುಕಿಂ ಮಾಂ (ಜ) 3 ಳ್ಗಿ (ಚಡಜ) ಣ್ಮು (ಟ) 4 ಮಲ್ಲಿ (ಜ) 5 ಜ (ಚಟಡ) 6 ತ್ತ ಕ (ಜ) 7 ಳುಂ ಬಲ್ಮಕ್ಕಳುಂ (ಜ) 8 ಕೊರ (ಚಟ) ಕಾ (ಡ) 9 ವಡ (ಚಟ) ನೆಡೆ (ಜ) ನಡ (ಡ) 10 ಯು ಬುಗುಟು (ಚಟಜ) ಯಂಬುಗೆಯ (ಜ) 11 ಚ್ಚ್ಚ ಮೆಚ್ಚ್ಚ ಕಯ್ಯಂ ಮುಗಿದಳ್ (ಚಟಡಜ)

ವ॥ ಎನೆ ಗೋಪಿಯರ್ದೂಱಲೆವೇೞ್ಕುಮೆಂದು ದೂಱದೆವಲ್ಲದೆ [1]ತರುವಲಿಗೆ[1] ನೆಱೆಯ[2]ಲಾ[2]ಱದೆ ಬಂದೆವಲ್ಲೆವು ನೋಡಿನ್ನು ನಿನ್ನ ಮಗನ ಕೇಡನೆಂದು ಪೋಗಿ ಮಕ್ಕಳೋಪಾದಿಯ ಮಗುವೆಂದೇ ಬಗೆದು ಸೆ[3]ಳೆ[3]ಯಂ ಕೊಂಡು ಕಿಱುಮುಗಿಲ ಬೆನ್ನಂಱ ಟ್ಟುವ ಕುಡುಮಿಂಚುಗಳಂತೆ ಗೋಪಿಯರೆಲ್ಲಮೊಲ್ಲನುಲಿದು ಮಲೆದು ಬೆನ್ನಟ್ಟೆ ಕೃಷ್ಣನುಂ ಕಿಱುನಗೆ ನಗುತ್ತುಂ ಕಿಱುವೆಡೆಯನೋಡಿಯೋಡಲಾಱದಂತೆ ಮಗುೞ್ದು

ಬಡಿಯಿಂ ಮಕ್ಕ[4]ಳೊಳ್[4]ನ್ನೊಡ
ನುಡಿನೊಡವೆಂದಂ[5]ಜಿದಂತೆ[5] ಕಂಜಾಕ್ಷಂ ಕಾ
ಲ್ವಿಡಿದೆತ್ತಿ ಕೆಡಪಿ ಕಾಲಂ
ಪಿಡಿದೆೞೆದೆೞೆದಱಸಿ ಬಿಟ್ಟನಾ ಗೋಪಿಯರಂ ॥೮೭॥

ವ॥ ಮತ್ತಮೊರ್ಮೆ ದೇವತಾವತಾರಮಪ್ಪ

ತಾಳತರು ಪಣ್ಗಳಂ ಬೇ
ತಾಳಂ ಕಲ್ಗೊಂಡು ಕಱೆವವ್ರೊಲ್ಕಱೆದುದು ಗೋ
ಪಾಳರ ತಲೆಯೊಡೆವಿನಮಾ
ತಾಳಂ ಬಳೆಗಳೆದನೊಂದೆ ಪೊಯ್ಲಿಂ ಕೃಷ್ಣಂ ॥೮೮॥

ವ॥ ಇವಂ ಮನೆಯೊಳಿರ್ದೊಡೆಲ್ಲಿಲ್ಲದ ದೂ[6]ಱಿಂ[6] ದುರ್ಯಶಮುಮಂ ತಂದಪ ನೆಂದು ನಂದಗೋಪಂ ಗೋವಳರಂ ಪಸದನಂಗೊಳಿಸಿ ಗೋವಿಂದನಂ ಗೋಕುಳಮಂ ಕಾಯವೇೞ್ದು ಕಾಡ[7]ನೋಡಿ ಕಾಡೆಱೆ[7]ಯಂಗೆಱಗಿ ಗೋಪಾಳ ವೃಂದದೊಡನೆ ವೃಂ[8]ದಾರಕ[8]ವನಕ್ಕೆ ಕಳಿಪೆ

ಉರಗಾನೀಕಮನೆತ್ತಿ ತರ್ಪನಿದು ಬಲ್ನೇಣೆಂದು ತನ್ನಂದಸುಂ
ದರಿಯೋವ್ರೋವೆನುತೋಡೆ ಕಾಡ ಪುಲಿಯಂ ಬೆಕ್ಕೆಂದು ತರ್ಪಂ ಮಹಾ
ಕರಿಯಂ ಕೊರ್ವಿದ ದಂಷ್ಟ್ರಿಯೆಂದು ಪಿಡಿತರ್ಪಂ ನೋಡ ನಾಯೆಂದು ಕೇ
ಸರಿಯಂ ಪಾಸದೊಳಿಕ್ಕಿ ತರ್ಪನಿದು ಬಾಲಕ್ರೀಡೆ ಗೋಪಾಳನಾ ॥೮೯॥

ವ॥ ಮತ್ತಮೊಂದು ದಿವಸಂ

---

1 ತುರುವತಿಗೆ (ಚಟಡಣ) 2 ಪೋ (ಚಟಡಣ) 3 ಳಕೆ (ಚಜಟಡ) 4 ಳನಿ (ಚಣ); ಳಳಿ (ಟ) ಳೀಳಿ (ಡ) 5 ದಂತೆಯಾಗ (ಚಟಡಣ) 6 ಱುಂ (ಚಜಟಡ) 7 ನೂಱಿ ಕಾಡೊಡೆ (ಚಟಡಣ) 8 ದಾ (ಚಟಡಣ)

ಬಸವಕ್ಕೈಕ್ರಿಡ ಬಾಲವೊತ್ತಿದ ರವಂ ಬಳ್ಕಿರ್ದ ಬೆನ್ ಬಿಟ್ಟ ರ
ಕ್ಕಸಗಣಬ್ಬಾಯ್ದೆಱೆದಂತೆ ತೋರ್ಪ ಕಿವಿಗಳ್ಗೋವೃಂದಮಂ ಕೂಡೆ ಬೆ
ರ್ಚಿಸೆ [1]ಕುದ್ದಾ[1]ಳ ವಿಶಾಳ ದೀರ್ಘದಶನಂ ವ್ಯಾದಾನವಕ್ತ್ರಂ ಮಳೀ
ಮಸವರ್ಣಂ ಪರಿತಂದುದೊಂದು ನವದೂರ್ವಾಕರ್ದಭಂ ಗರ್ದಭಂ ॥೯೦॥

ಪೇೞಿಕ್ಕಿದಂತೆ ಬೆನ್ನೊ
ಳ್ತಾಱಿ[2]ಯ ಪಣ್[2] (?) ಕಟ್ತಿ ಕರ್ಚಿ ಬಿ[3]ಟ್ಟು[3]ದು ಪೆಱಗ
ಣ್ಗೇಱಿ ಪಿತೃಪತಿಗೆ ಪೆಣನಂ
ಪೇಱುವ ಪೆರ್ಗತ್ತೆಯಂತೆ ಖರಸಂಕುಳಮಂ ॥೯೧॥

ವ॥ ಅಂತು [4]ಪೆಂಟೆಗಳಂ[4] ದಾಂಟೆ ಕೆಡಪುತ್ತುಂ ಕಡವಂಗಳಂ ಕರ್ಚಿ ಕೆಡಪುತ್ತುಂ ಬೆಗಡುಗೊಂಡೋಡುವ ಗುಂಡನುರುಳೆವಾಯ್ದು ಕೆಡಪುತ್ತುಂ ತಾನೆ ತನ್ನ ಬೀರಕ್ಕೆಟ್ಟ [5]ಱು[5]ದ ಕಟ್ತಿಯಂತೆ ಬೆಬ್ಬಸಬೆಸೆದು [6]ಬ್ರಹ್ಮ[6]ನಂ ಕೂರಿಸಿದ ಕತ್ತೆಯಂತಾರುಮಂ ಕೈಕೊಳ್ಳದಿದಱ ಬಾಯ್ಗೆ ಬ್ರಹ್ಮಾಂಡಮೆಯ್ದದೆಂಬಂತೆ ಬಾಯಂ ತೆಱೆದು ಕೇಳ್ದರ್ದ ತೆಱೆವಿನಮೊಳಱ[7]ಪೆಂಟೆ[7]ಯ ಪೊಟ್ಟೆಯಂ ಕರ್ಚಿ ಸೆಳೆಯೆ ಬಾಯೊಳೆಟಲ್ವ ಕರುಳಿಂ ಕ[8]ಪ್ಪೆಯು[8] ನೇಣಂ ಕರ್ಚಿ ಪರಿವ ಕುದುರೆಯಂತೆ ಬೀದಿವರಿದು ಮಾಮುಸಕಂ ಮಸಗಿ ತುಱು ಪಳ್ಳಿಯೆಲ್ಲಮುಮನೊಕ್ಕಲಿಕ್ಕಿ ಕೊಲ್ವ ಕಟ್ತಿಯ ಕೋಳಾಹಳ[9]ಕ್ಕಂತೆ[9] ಕುಣಿ ವಂಗೆಱೆಯಪ್ಪನಾದಂತೆ ಗೋವಳಗಾವಳಿಗೊಂಡು ಗೋವಳಗೋಲನೆತ್ತಿಕೊಂಡೊ ದಱ[9] ಧೀರ[10]ನದಿರ[10]ದೆ ಬರ್ಪುದಬ್ಬೆಯ ಬೇಟ್ಪುದವರೆ[11]ವಿಟ್ಟಂ[11]ಬಂತೆನ್ನ ಬೇಟ್ಪಾ ತನುಮಿಾತನೆಂದು ಕಟ್ತಿ ಮೇಲ್ವಾಯಲೊಡನೆ (?)

ಹರಿ ಹರ್ಯಕ್ಷನ ಬಾಯಂ
ತಿರೆ ಕಟ್ತಿಯ ತೆಱೆದ ಬಾಯನೊರಹಾಯ್ತೆನಗೆಂ
ದೆರಡುಂ ಕಯ್ಯಂ ಪಿಡಿದಾ
ಸುರಮಾಗಿ[12]ರೆ[12] ಸೀೞ್ದು ಬಿಸುಟನೆರಡುಂ ದೆಸೆಗಂ ॥೯೨॥

ವ॥ ಆಗಳ್ ಕೃಷ್ಣನ ಕಯ್ಯ ಕೋಲಿಂದುದಿರ್ದ ಪಲ್ಗಳಾ ಕಟ್ತಿಯ ನೆಗಟ್ತಿಯಂ ಕಟ್ತಿಯೊ[13]ಳುಟ್ತು[13] ಕವಡಿಕೆಯಂ ಬಿತ್ತಿದಂತೆಸೆಯೆ ಮುರಾರಿಯ ವೀರವೃತ್ತಿ ದೆಸೆಗೆ ಬೆಸೆಯೆ ಮೂಗಿನ ಮೇಲೆ ಕಯ್ಯನಿ[14]ಟ್ಟು ಜನಮೆಲ್ಲಂ[14] ಚೋದ್ಯಂಬಡೆ ತಾಯುಂ ತಂದೆಯುಂ ಸಂತೋಷಂಬಡೆ (?)

---

1 ಕೂಳ್ಪ (ಜ) 2 ಪೆಣಂ (ಚಜಟ) ಪೆಂಣಂ (ಡ) 3 ಸುಟು (ಜ) 4 ಪಟ್ಟೆ (ಚಟಡಣ) 5 ರೇಱು (ಚಜಟಡ) 6 ದುರ್ವ (ಜ) 7 ಪೆಟ್ಟೆ (ಚಟಡಣ) 8 ಯ್ಯ (ಜ) 9 ಕ್ಕಂ (ಡ) 10 ನಂಧೀರನ (ಜ) 11 ಯಲಿಟ್ಟಂ (ಚಟಣ) ಯಲಿಟ್ಟಂ (ಡ) 12 ಯೆ (ಜ) 13 ಳ್ (ಜ) 14 ಟ್ಟು (ಜ)

ನಿಯತಾಹಂಕೃತಿ ಪೂತನಾ ಪ್ರತಿಭಯಂ ಲೋ[1]ಲಾತ್ಮ[1]ಕಾಕಾಂತಕಂ
ಲಯಶಂಕಾಶಕಟಾಪ[2]ಹಾ[2]ರಿ ಖರತಾ ಚಕ್ರೀವ ಜೀವಾಪಹಂ
ಭಯ ಲೋಭಾರ್ಜುನ ಭಂಜನಂ ನುತಯಶೋದಾನಪ್ರಿಯಾತ್ಮೋದ್ಭವಂ
ಜಯಮಂ ತಾಳ್ದಿದುದಾತ್ಮಸನ್ನಿಭಗುಣಂ ಶ್ರೀಗಂಧಗೋಪಾಳ[3]ನಾ[3] ॥೯೩॥

ಇದು[4]ವ್ಯ[4]ದುಪದಬಂಧ ಬಂಧುರ ಸರಸ್ವತೀ ಸೌಭಾಗ್ಯ ಭಂ[5]ಗಿ[5]ನಿಧಾನ ದೀಪವರ್ತಿ ಚತುರ್ಭಾಷಾ ಕವಿಚಕ್ರವರ್ತಿ ನೇಮಿಚಂದ್ರಕೃತಮುಂ ಶ್ರೀಮತ್ಪ್ರತಾಪ ಚಕ್ರವರ್ತಿ ವೀರಬಲ್ಲಾಳದೇವ ಪ್ರಸಾದಾಸಾದಿತ ಮಹಾಪ್ರಧಾನ ಪದವೀವಿರಾಜಿತ ಸೆಜ್ಜೆವಳ್ಳ ಪದ್ಮನಾಭದೇವ ಕಾರಿತಮುಮಪ್ಪ ನೇಮಿನಾಥಪುರಾಣದೊಳ್

ಸಪ್ತಮಾಶ್ವಾಸಂ

ಸಮಾಪ್ತಂ

---

1 ಚಾತ್ಮ (ಚಟಡ) ಲೋತ್ಮ (ಣ) 2 ಶಾ (ಚಟಡಣ) 3 ಳಂ (ಚಟಡಣ) 4 ವಿದಿತವ್ಯಾ (ಚ) 5 ಗಿನಿ (ಚಟ)

# ಅಷ್ಟಮಾಶ್ವಾಸಂ

ಶ್ರೀಯಂ ಪಡೆದಂ ವಿಬುಧ
ಗ್ರಾಯಲ್ಪಡೆದಂ ಪ್ರತಾಪಮಂ ಧಾರಿಣಿಯಂ
ಕಾಯಲ್ಪಡೆದಂ ಪ್ರತಿಭೆಯ
ನಾಯಮನಱಿಯಲ್ ಯಶೋರ್ಧಿಮೂರ್ತಿ ಮುಕುಂದಂ ||೧||

ವ|| ಆ ಗಂಡಗೋಪಾಳನ ಗೋಕುಳಕ್ಕೆ ಪುಲ್ಲುಂ ನೀರುಮಂ ಸಲಿಸಿ ಬೆರ್ಚಿ ಬೆಸಕೆಯ್ಯಲೆಂದು

ನೀರಂ ನೀರಂಧ್ರಮೇಘಂ ಸುರಿಯೆ ಮೊರೆಯೆ ಭೀಮಾರುತಂ ಮಾರುತಂ[1]ಕೊ
ಳ್ಗ[1]ರಂಗಾರಂಬೊಲಾ[2]ಯ್ತೆಂ[2]ದಗಿಯೆ ಪಥಿಕರುಚ್ಚಾತಕಂ ಚಾತಕಂ ಕಾ
ಸಾರಾಸಾರಾರ್ಥಿ[3]ಗೋಲಂಗು[3]ಡಿಯೆ ನಲಿವೆನ್ನೋ ಜಂಬುವಂ ಜಂಬುವಂ ಸೋ
ಕೀರಂ ಕೀರಂ ಕರ್ದುಂಕುತ್ತಿರೆ ಕೆರಳಿಸಿದತ್ತೋವಿ ಕಾರಂ ವಿಕಾರಂ ||೨||

ಎಳಮಿಂಚಂ ತಱಿಯಿಕ್ಕಿ ಚಾದಗೆಗಳಂ ಬಿ[4]ಟ್ಟೋ[4]ಡಿ ಬಲ್ಗೆಚ್ಚಲಿ
ಟ್ಟಳಿ ನೀಳಾಂಬುದದಿಂ ಬಱಲ್ದ ಗಗನಶ್ರೀ[5]ಧೇನುವಂ[5] ಕೋಮಳಾ
ಮಳ ದೀರ್ಘಾಮೃತ ಧಾರೆಗಳ್ಸುರಿಯೆ ಭೋರ್ಭೋರೆಂಬಿನಂ ಶಕ್ರಚಾ
ಪಳತಾದಾಮಕದಿಂದೆ ಕಟ್ಟಿ ಕಱದಂ ಕಾರೆಂಬ ಗೋಪಾಳಕಂ ||೩||

ವ|| ಅಂತುಮಲ್ಲದೆ

ಕಳಕೇಕಾರುತಿ ಪೋಲೆ ವೇಣುರುತಿಯಂ ಬೀಸುತ್ತ ಮಿಂಚೆಂಬ ಗೋ
ವಳಿಗೋಲಂ ಪೊಡೆಸೆಂಡುವೊಯ್ದು ಸಿಡಿಲಂ ಗೀರ್ವಾಣಬಾಣಾಸನ
ಚ್ಛಳದಿಂ ಕತ್ತರಿವೀಲಿಯೊಂದು ಪಣೆಕಟ್ಟಂ ಕಟ್ಟಿಕೊಂಡಭ್ರಕಂ
ಬಳಮಂ ಗೋವನವುಂಕಿ ಬಂದೊದಱದಂ ಕಾರೆಂಬ ಗೋಪಾಳಕಂ ||೪||

ವ|| ಅಂತು ಬಂದ ಕಾರ್ಗಾಲಮಂ ಕಂಡು ಮನಂಗೊಂಡು ಮತ್ತಮಾ ದೇವತೆಯರ್ ಭೇತಾಳನ [6]ಪೆ[6]ಣದಂತೆ ಬೆನ್ನಕಯ್ಯಂ ಬಿಡದೆ [7]ಕೊಂ[7]ದ ಕೊಲೆಯಂ ತಲೆಪ ಮನುಱಯದುದಕಮೂರ್ಮಿರದಿಂ ಕೆಟ್ಟುಂಕೆಡದಂತೆ ತಮ್ಮಗುರ್ವಿನಗುರ್ವಣೆಯ

---

1 ಕೊಳ್ಗ (ಚಜಟ) ಕೊಳ್ಳ (ಡ) 2 ಯಂ (ಡ) 3 ಗೊಲ್ಲಂ ನು (ಜ) 4 ಟ್ಟೊ ೯ (ಚಟಡಣ) 5 ದೇವನುಂ (ಜಟಡ) 6 ಪ (ಚಟಡ) 7 ಕೊ (ಜ) 8 ಡರೆ (ಚಡಣ) ಡೆರೆ (ಟ)

ಕಾಕಾವಿಕಾರದಿಂ ಸತ್ತುಂ ಸಾಯದೊಂದೆ[1]ಡೆಗೆ[1]ವಂದು ಪರಿವ ನೀರಂ ಪರಿಯೆ ಪೊಯ್ಯಲುಮುರಿಯನಿಱಿದೇರ್ಪಡಿಸಲುಂ ರಸಮಂ ಸೋಯಿಸಲುಂ ನಮ್ಮಂ ನೋಯಿಸಲುಂ ಇನ್ನುಮೊರ್ವಂ ಪುಟ್ಟುವನುಂಟೆಕ್ಕುಮೆ[1]ಯೆಂದೋ[1]ರೊರ್ವರಂ ಕಯ್ಯಂ ಪೊಯ್ದು ಕಹಕಹಾಟ್ಟಹಾಸದಿಂ ಕರುಳ್ ಪಱಿಯೆ ನಕ್ಕು

ಆದ[2]ಟಂ[2] ಮಂಡೆಯಮಾ[3]ಸಾ[3]
ಱದ ತರುವ[4]ಲಿ ನ[4]ಮಗಮರಿಯನಾದನವಂ ಪೆ
ರ್ಚಿದೊಡಾ ಭವನುಂ ಜವನುಂ
ಕದನದೊಳಾನಲ್ಕೆ ನೆಱೆ[5]ಯರೆಂಬನಿತಕ್ಕುಂ ||೫||

ವ|| ಆದೊಡಮಿನ್ನುಮೊರ್ಮೆ ಎಮ್ಮೊಳಪ್ಪುದು ಮಲ್ಲನಂತೆ ಮೆಯ್ವ[5]ತ್ತಿರೆ[5] ಧನುರ್ಧರನಂತೆ ದೂರಿದನೆಚ್ಚು ನೋಲ್ಪಮೆಂದು ಕೃಷ್ಣಂ ತುಱುಗಾಯಲೆಂದು ಪೊಲಕ್ಕೆ ಪೋದಲ್ಲಿ

ಪಡೆದರ್ದೇವತೆಯರ್ಮಿಗೆ
ಕಡುಮುಳಿಸಿಂದುರಿದು ದಹನ ಶಿಖಿಗಳ ಪೊಗೆ[6]ಯಂ
ಪ[6]ಡೆವಂತೆ ಪತ್ತು ದೆಸೆಗಂ
ಗುಡಿ[7]ಗ[7]ಱಿದಂತಾಗೆ ನೀಳಮೇಘಾವಳಿ[8]ಯಂ[8] ||೬||

ಕಡಲೊಳ್ ಪಟ್ಟಿರ್ದವಂ [9]ಪೆ[9]ಟ್ಟಿರದಿರೆ ಬನಪೊಳ್ ಬಂದ ಸಪ್ತಾರ್ಣವಂ ಮೇಗೊಡೆವಿರ್ದಂತಾಗೆ ಮಿಂಚೆಂಬುರಿ ಮಿಗೆ ನ[10]ಭ[10]ಮಾಶಾಮುಖಶ್ರೇಣಿ[11]ಯಿಂ[11] ಗೋಟಿಡುವಂತೋರಂದದಿಂದಂ ಮೊಟಗಿ ಮುಸುಱಿ[3] ಮೇಘೌಘವಜ್ರಾಕ್ಷನಂ ಬಲ್ಸಿಡಿಲಿಂದಿಟ್ಟಾಲಿಕಲ್ಲಿಂದೆಱಗಿ ಕಱಿದುದಾ ಗೋಕುಲಂ ತೇಂಕುವನ್ನಂ ||೭||

ಉತ್ಸಾಹರಗಳೆ|| ಮೊಟಗಿ ಮಿಂಚಿ[12]ಮುಂಚಿ[12]ಕೊಳ್ವ
ಮೞೆ[3]ಗಳಂಬುರಾಶಿ[13]ಯಲ್ಲಿ[13]
ಕಱಿಯೆ ನೀರನುಂಡು ಮೇಘ
ಮೊಱೆ (?) ಕಾಱುವಂತುಟಾಯ್ತು ||೮||

---

1 ಯ್ಯದೋರ್ವ (ಚಟಡಣ) 2 ಟಂ (ಚಣ) 3 ನಾ (ಚಟಡಣ) 4 ರಿಯೆ (ಜ) ರಿನ (ಟ) 5 ತ್ತರೆ (ಚಟಡ) ತ್ತಡೆ (ಜ) 6 ಯಿಂ ಪೊ (ಜ) 7 ಯಿ (ಜ) 8 ಯಿಂ (ಜ) 9 ಕೆ (ಚಟಡಣ) 10 ವ (ಣ) 11 ಯಂ (ಚಟಣ) 12 ಸಂತೆ (ಜ) 13 ಯೊಳ್ (ಚಟಡಣ)

ಪೊಡೆವ ಸಿಡಿಲ್ಗಳನೆಳೆಯೊಳ್
ಕೆಡೆದೇೞಿಂಟಣಿಕು ನೆಗೆದು ನುರ್ಗಪ್ಪಿನೆಗಂ
ಪೊಡೆದಂ ಗೋವಳಿಗೋಲಿಂ
ಪೊಡೆಸೆಂಡಾಡುವವೊಲೇಂ ಬಲಸ್ಥನೊ ಕೃಷ್ಣಂ ||೯||

ಕರಗದ ಮುಗಿಲಂ ಪರೆಯದ
ಸುರಧನುವಂ ಮಿಂಚಿ ಕಿಡದ ಮಿಂಚಂ ಪೊಡೆದೋ
ಸರಿಸದ ಸಿಡಿಲಂ ಸಮೆಯದ
ಸರಿವೞೆಯಂ ಕಂಡು ಬೆಗಡುಗೊಂಡರ್ ಗೋವರ್ ||೧೦||

ವ|| ಆಗಳಂ[1]ಜಲಿಮಂ[1]ಜಲಿಮೆಂದು ಬೆಗಡುಗೊಂಡ ಗೋವಳಿಗರನೊಡಗೊಂಡು ದೊಮ್ಮಳಿಸಿ ಮಮ್ಮಱಿಗೊಳ್ವ ಗೋವುಗಳನಟ್ಟಿಕೊಂಡು ಕಿಱಿದಂತರದೊಳಿರ್ದ ಗೋವರ್ಧನ ಗಿರಿಯ ಮಱಿಗೆ ಪೋಗಿಯದೊಂದೆ ಸಱಿಯಪ್ಪುದಱಿಂ ಪಶುಶಿಶು ಪ್ರವೇಶಕ್ಕಂ ತಕ್ಕ [2]ಗುಹೆ[2]ಯಂ ಕಾಣದೆ

ಪರಲಂ ಬಾರ್ ತೆಗೆಮಿಾಂಟುವಂತೆ ಚರಣಾಂಗುಷ್ಠಾಗ್ರದಿಂ ಮಿಾಂಟೆ ಝು
ಲ್ಲರಿವೊಲ್ ಝುಲ್ಲನೆ ಸೂಸಿ ನಿರ್ಝರಜಲಂ ಬಿಟ್ಟೆರ್ಪಿನಂ ಕಾವಿನಂ
ತಿರೆ ಕೊಂಡೆತ್ತಿದ ಕೆಯ್ ಮುರಾರಿ ಕೊಡೆಯಂ ಕ್ರೀಡಾರಸಕ್ಕೆತ್ತುವಂ
ತಿರೆ ಕಿೞ್ತೆತ್ತಿದನೊಂದೆ ಕೆಯ್ಯೊಳೆ ಮಹಾಗೋವರ್ಧನಾದ್ರೀಂದ್ರಮಂ ||೧೧||

ಪೋಲೆ ಬಲಗಯ್ಯ ಗೋವಳಿ
ಗೋಲೊಡ್ಡಿಸುವ [3]ರ್ದವಾ[3]ಗನವಯವದಿಂ ಗೋ
ಪಾಲನೆಡಗಯ್ಯೊಳೆತ್ತಿದ
ಶೈಲಂ ಸೆಂಡಿನವೊಲಿರ್ದುದೇನಚ್ಚರಿಯೋ ||೧೨||

ಹರಿ ಗಿರಿಯ ಪರ[4]ಲ್ಮೇಗು[4]ಗು
[5]ತ್ತ[5]ರೆ ತಲೆ[6]ಯಿಂ[6] ತೆಗೆದು ಕಮಠನಂ ಕಮಠಂ ಪೊ
ತ್ತುರಗನನಾತನ ನಳಿತೋ
ಳುರಗಂ [7]ಪೋಲ್ತೆ[7]ಳೆಯನದ್ರಿ [8]ಪೋಲ್ತಿರೆ[8] ಪೋಲ್ತಂ ||೧೩||

---

1 ಜಯಂ (ಚ) ಬಿಜಯಂ (ಟ) ಜಿಯಂ (ಡಣ) 2 ಮಹಿ (ಚಟಡಣ) 3 ರ್ದವಾ (ಚಟ) ರ್ದವಾ (ಜ) ಧ್ವವಾ (ಡಣ) 4 ಲ್ಮಿನು (ಣ) 5 ತ್ತ (ಚಟಡ) ತ್ತಿ (ಣ) 6 ಯಂ (ಜ) 7 ಪೊತ್ತೆ (ಜ) ಪೊತ್ತಿ (ಡ) 8 ಪೊದ್ದಿರೆ (ಡ)

ಕರಿಕಳಭಪತಿ ಬಯಲ್ದಾ
ವರೆಯಂ ಕಿೞ್ತಿತ್ತುವಂತೆ ಕಿೞ್ತೆತ್ತಿದನಾ
ಹರಿ ತರುಣಂ ಗೋವರ್ಧನ
ಗಿರಿಯಂ ಗೈರಿಕರಜೋವಿರಾಜಿತ [1]ದರಿಯಂ[1] ||೧೪||

ಶೈಳಮನೆತ್ತುವುದುಂ ಗೋ
ಪಾಳಂ ಫಣಮಣಿಗಳೆಸೆಯೆ ಮ[2]ಣ್ಮೆ[2]ಸುವ ಪಾ
ತಾಳಾಹಿವಿತತಿ ಪಾವಿನ
ಪೇಳಿಗೆಯಂ ತೆಱೆದ ತೆಱದಿನೇಂ ತೋಱಿದುವೋ ||೧೫||

ಕೆಂಡದ ಮೞೆಗಳ್ತಂಡದೆ
ಕೊಂಡಪುವೆನೆ ಪುಟ್ಟಪಾಱೆ ಕಿಡಿಗಳ್ ಕೃಷ್ಣಂ
ಕೊಂಡೆತ್ತಿದಗದ ಮೇಗಾ
ಚಂಡಿಕೆಯರ್ಮುೞಿದು ಕಲ್ಲ ಮೞೆಯಂ ಕಱೆದರ್ ||೧೬||

ವ|| ಅಂತೆಣ್ಬರುಂ ದೇವತೆಯರೇೞು ದಿವಸಮಾವರ್ತನ ಪರಿವರ್ತನಂ ಬಂದು ನಿರ್ವರ್ತಿಸಿದ ಸಂವರ್ತನ ಸಮಯ ಪರಿವರ್ತಿತ ಪುಷ್ಕಳಾವರ್ತಂಗಳಂತೆ ಕಗ್ಗನೆ [ಕ]ನಿತು ನೆಗೆದ ನಿಜಜಳಧರಂಗಳ್ ನೀಳ ಮಹೀಧರಂಗಳೆ ವಿಪುಳ ಪಾಷಾಣ [3]ಜಾಲನಿರ್ಝರಂಗಳಂ[3] ಕಱೆವಂತೆ ಪೆರ್ಮೞೆಗಳಂ [ಕಱೆಯೆ] ಗೋವರ್ಧನಂ ಗೋವರ್ಧನ ಗಿರಿಯ ನೆತ್ತುವಂತೆತ್ತಿ ಗೋಕುಳಮಂ ಕಾದುದಂ ಕಂಡು ಗೋವರುಂ ಸೀವರುಂ ಜಕ್ಕರುಂ [4]ಮ[4]ಕ್ಕಳುಂ ಮಱಿಗಳುಂ ಬೆಕ್ಕಸಂಬಟ್ಟವಂ ದೇವನುಂ ದಾನವನುಮಲ್ಲೆಂದು ಪೊಗೞ್ದು ಪುರುಷೋತ್ತಮನನೆವೆಯಿಕ್ಕದೆ ನೋಡಿ ಪರಮಾನಂದಾಮೃತಮನೊಂದೆ ಮೆಯ್ಯೊಳೆ ಪೀರ್ದ ನಂದನನುಮಂ ಯಶೋದೆಯುಮಂ ದೇವನುಂ ದೇವಿಯುಮೆಂದು ಪೂಜಿಸಿ ಪೊಡೆವಟ್ಟು ಪೋಗೆ ನಾಡುಂ ಬೀಡುಂ ಜಾತ್ರೆವೋಗೆ ಕೇಳ್ದು ಕಂಸನಾಶಂಕೆಗೊಂಡು ಎನಗೆ ಬಂದ ಮಾರಿಯಾಗದೆ ಮಾಣದೆಂದು ಮನದೊಳೇವಯಿಸುತ್ತುಮಿರ್ಪನ್ನೆಗಮಾ ದೇವತೆಗಳ್ ಪಾೞ್ದ್ದೀಗುಲದ ದೇವತೆಗಳಂತೆ [5]ಖಿನ್ನರಾಗಿ[5]ಬಣ್ಣಂಬೆತ್ತು ಬಂದು ನಿಂದಾ ಪಗೆ [6]ಎಮ್ಮ ಪವಣಲ್ಲೆಂ[6]ದು ಪೋಪುದುಂ ಹೆಲ್ಪ್ಪೇದ ಪಾವಿನಂತಾಗಿ ತಲೆಯಂ ತೂಗಿ

---

1 ಧೈರ್ಯಂ (ಚಟಡಣ) 2 ಣ್ಮೆ (ಜ) ಣ್ಮಪ (ಞ) 3 ಜಾಲ ಜರ್ಝರಂ ಕೆಱೆವಂತೆ ಕಱೆವ ಕಲ್ಲಮೞೆಗಳಂ (ಚಟಡಞ) ಜರ್ಝನಿರ್ಝರಂಗಳಂ (ಜ) 4 ಚಕ್ಕಳುಂ ಪು (ಞ) 5 ಬಿನ್ನನಾಗಿರೆ (ಚಟಞ) 6 ಯೆಂವಣಲ್ತೆಂ (ಜ)

[1]ಮೊ[1]ಳೆಯೊಳೆ ಪೆರ್ಗೊಡಲಿಗಳುಂ
ಕೊಳಲಾಱದೆ ಮುಕ್ಕುವೋದುವೆಂದೊಡೆ ಮುಂದಿಂ
ಬಳೆದು ಮರನಾದ ಕಾಲಂ
ಕೊಳಲುಂ ಕಡಿಯ[2]ಲ್ಕ[2]ಮಾರ್ಪುದಾವುದುಮುಂಟೇ ||೧೭||

ವ|| ತನಗಿಷ್ಟನಪ್ಪರಿಷ್ಟನೆಂಬ ದಾನವನ ನಡುವಣಕ್ಕರಮಿಲ್ಲದ ದಾನವನಂ ಪ್ರತ್ಯ[3]ಕ್ಷೀಕದ[3] ವನಕ್ಕೆಂದು ಬರಿಸಿ " ಯಾವದಸ್ತಿ ಪ್ರತೀಕಾರಸ್ತಾವತ್ಕುರ್ಯಾತ್ ಪ್ರತಿಕ್ರಿಯಾಂ " ಎಂದೋದಿ ವಿರೋಧಿಯುಮಂ ವ್ಯಾಧಿಯುಮಂ ಬಳೆಯದ ಮುನ್ನಮೆ [4]ಕಿಱು[4]ದೆಂದು ಕಡೆಗಣಿಸದೆ ಕಿಡಿಸುವುದು ಕಜ್ಜಮೆಂದು ಕೃಷ್ಣನ ಮೇಲೆ ಪೇಟಿಲೆಂದಿರ್ದನನ್ನೆಗಂ ಗೋಕುಲದೊಳ್

ಅಡೆಯಂ [5]ಕೋ[5]ದೆತ್ತುತುಂ ಮಾರ್ದನಿಗೆ ಮಸಗುತುಂ ದರ್ಪದಿಂ ಛಾಯೆಯೊಳ್ [6]ಕೋ[6]ಡಿಡುತುಂ ಪೋರ್ದಲ್ಲಿ ಪುಣ್ಚೆತ್ತಿಣಿಗೆಱಗೆ ನೋಣಂ ಶೀರ್ಣಶೃಂಗಾಗ್ರದಿಂ ಮಾ[7]ದೋ[7]ಡೆಯುತ್ತುಂ ಪಾಯ್ದು ಪಿಂಡಂ ಕಲಕಿ ಕೆಲೆಯುತಂ ಬೆರ್ಚಿ ಬಲ್ಲಾಳಿಗಳ್ ಬೆಂಗುಡೆ ಗಂಡಂ ಸೂಸುತುಂ ಬಂದುದು ಮದವಿದಳತ್ಪಿಂಗಳಾಕ್ಷಂ ಮಹೋಕ್ಷಂ ||೧೮||

ಆರಣಿಗೊಂಡು ಮುರಾರಿಯ
ನೀರದ ಸನ್ನಿಭನ ವಿಷಮುಕರ ವೀರರಸಾ
ಸಾರಕ್ಕಿದಿರಂ ನಡೆದತಿ
ವಾರಣ ವೃಷಮಿಱಿವ ಕೋಡನೇಂ ತೋಱಿ[8]ದು[8]ದೋ ||೧೯||

ವ|| ತೋಱಲೊಡನೆ

ದಿಟ್ಟಿ ಪೊಱಪಾಯೆ ಗುಱುಗುಱು
ಗುಟ್ಟಿ ವೃಷಂ ಮಡಿದು ಕೆಡೆಯೆ ಗೋಣ್ಮುರಿಗೊಂಡಂ
ತೊಟ್ಟಜೆಯಿಂದವೆ ಸುಟ್ಟಿಪ
ಬೊಟ್ಟಂದವೆ ಮೂಗನೂಱ ಬಿಟ್ಟಂ ಕೃಷ್ಣಂ ||೨೦||

ವ|| ಅಂತು ಶಾಕ್ವರವರನಾಗಿ ಕೆಕ್ಕಳಿಸಿ ಕೆಳರ್ದಟ್ಟಿಕೊಂಡು ಬಂದ ಕಂಸನಟ್ಟಿದರಿಷ್ಟನಂ [9]ಅಂದಿ[9]ನರಿಷ್ಟನಂ ಕೊಂದಂತೆ ಕೊಲ್ಲದೆ ಪಶುವೆಂದು ಪೇಸಿ ಪಶುಪಾಲನಪ್ಪ ಕಾರಣದಿಂ ಕರುಣಿಸಿ ಕಾದು ಸೋ[10]ದು[10]ಕಳೆದನದೆಲ್ಲಮಂ ಕೇಳ್ದು ಮೂಱುಂ ಲೋಕ

---

1 ಪೊ (?) 2 ಲ್ಕೆ (ಚಜಟಡ) 3 ಕ್ಷಸಾ (ಜ) 4 ಕಿಱಿ (?) 5 ಕೊಂ (ಚಟ) 6 ಕೊಂ (ಚಟ) ಕಾ (ಜ) 7 ದೊ (ಚಟ) 8 ವೋ (ಚಟಡ) 9 ಅಧೀ (ಚಟಣ) ಅದಿ (ಡ) 10 ದುರ್ (ಚಟಡಣ)

ಮನಾಳ್ದನಿತು ಸಂತೋಷಂಬಟ್ಟು [1]ನೋ[1]ಡಲೆಂದಟ್ಟಿವಟ್ಟು ಗೋಮುಖಿಯೆಂಬ ನೋಂಪಿಯ ನೆವದಿಂ ದೇವಕಿಯುಂ ವಸುದೇವನುಂ ಬಲದೇವನುಂ ವಾಸುದೇವನು ಮಿರ್ದ ತುಱುಪಟ್ಟಿಗೆ ಪಿರಿದಪ್ಪ ವಿಭವಂಬೆರಸು ಬಂದು ಸೌಖ್ಯದ ಸೀಮೆಗಾಣ್ಬಂತೆ ಕೃಷ್ಣನಂ ಕಂಡು ತೆಗೆದು ತಕ್ಕೈಸಿಕೊಂಡು

ಕಡುದೊರೆದ ಮೊಲೆಯಿನಂಬಿರಿ
ವಿಡುತಂದುವು ಪಾಲ ಧಾರೆ ಪಲಕಾಲಮುಗ
ಲ್ದೊಡನೆಯನಮೃತ ಕಳಾಳಿಗ
ಳೊಡರಿಸಿ ಶಶಿಕಾಂತವೊಸರ್ವುದೊಂದಚ್ಚರಿಯೇ ||೨೧||

ವ|| ದೇವಕಿ ಕಡುಗಂದಿಯಪ್ಪುದಱಿಂ ತೊರೆದೆಚ್ಚು ಪಾಯ್ವ ಮೊಲೆವಾಲಿಂ ಮಗನಂ ಮಜ್ಜನಂಬುಗಿಸಿ ಪುಗುಳ್ನಗೆ[2]ಯ[2] ಮುತ್ತುಮಂ ಬೆರಸಿ ಸೇಸೆಯನಿಕ್ಕಿ ಯಕ್ಷಕರ್ದಮದೊಳಣ್ಪನಿಕ್ಕಿ ಕಣ್ಣಂಜಲಕ್ಕುಮೆಂದು ಸೊಡ[3]ರ್ವಕ್ಕನಿಕ್ಕು[3]ವಂತೆ ಗಾಳಿಸೋಂಕದ ಸೊಡರಂತಿರ್ದ ಪೊನ್ನ ಸಿಪ್ಪಿನ ಕತ್ತುರಿಯಂ ಕೊಂಡು ಬೊಟ್ಟ ನಿಟ್ಟು ಬೆಲೆಗೆ ಬ[4]ಣ್ಣಿ[4]ದುವುಂ ಮೆಯ್ಗೆ ನೊಚ್ಚಿದುವುಮಪ್ಪ ದೇವಾಂಗಮನುಡಿಸಿ ಮಾಣಿಕದೊಡಿಗೆಯಂ ತೊಡಿಸಿಯಮೃತಾನ್ನಮನೂಡಿ ತನಯನ ಪಂತಿಯೊಳ್ ಗೋಪಕುಮಾರರ್ಗೆಯುಡಲುಂ ತುಡಲುಮುಣಲುಮಿತ್ತು ಯಶೋದೆ ಮೊದಲಾದ ಗೋಪಿಯರ್ಗೆಲ್ಲಂ ಪೊನ್ನರನ್ನದ ಬಾಯಿನಂಗಳಂ ಕೊಟ್ಟು ನೋಂಪಿಯ ನೋಂಪ ವಿಧಾನಮಿಂತುಟೆಂದು ತನ್ನ ಮಗನಿದಾರ ಮಗನೀತಂ [5]ಪೊಂ[5]ಗಮಾದಿತ್ಯಂಗಂ ದೇವಂಗಂ ದೇವಿಗಂ ಪುಟ್ಟಿದಂತಿರ್ದಪನೆಂದು ತೊಡೆಯನೇಱಿಸಿಕೊಂಡು ನೋಡು ವಾಗಳ್

ಉಡುಗಣದ ನಡುವೆ ಮೃಗಧರ
ನೆಡೆಗೊಂಡಿರ್ಪಂತೆ ಕಮಳನಯನಂ ಸಲೆ ತ
ನ್ನೊಡನಾಡುವ ಗೋವರ್ಕಳ
ನಡುವೆ ಕರಂ ತನ್ನ ಬೆಳಗೆ ಬೆಳಗಾಗಿರ್ದಂ ||೨೨||

ವ|| ಅನ್ನೆಗಮುತ್ತಾ ನಂದಗೋಪಂ ಗೋಪವೃದ್ಧಿಯರ್ವೆರಸು ವಸುದೇವ ಬಲದೇವರನೊಡಗೊಂಡು ಪೋಗಿ [6]ಪಂಕ[6]ಜಾಕ್ಷನುಮನಾಂಕೆ ಗೊಂಕೆಯಂ ನುಲಿದ ಕಾಗೆಯಂ [7]ಕ[7]ನ್ನೆತ್ತರನುಂಡ ನೆಲನೆಲ್ಲಂ ಕೆಮ್ಮಣ್ಣ ನೆಲನಾಗಿ [8]ವಾಸಿ[8]ಸಿದೊಡೆ

1 ಬನನುಂ ನೋ (ಜ) 2 ಯುಂ (ಚಟ) ಯಂ (ಡಣ) 3 ರಕ್ಕೆ ನೀಡು (ಚಟಡಣ) 4 ಣ್ಮ (ಜ) 5 ಪೆಂ (ಜ) 6 ಕಂ (ಚಟ) 7 ಕೆ (ಣ) 8 ರಾಗಿ (ಜ)

16

ನೆತ್ತರ್ನಾಱು[1]ಮಾಗಿ ಪೇಸಂ[1] ಪಡೆದುರ್ವಿಯುಮಂ ದೇವಕೀಪುತ್ರಂ [2]ಪೀ[2]ರ್ದ ಪೂತನಿಯ ಸತ್ತ ನೆತ್ತರ ಪ[3]ಲ್ಲೆಗ[3]ಳಿಂ ಜಾದುಕಲ್ಲಕಣ[4]ಯಂದಮಂ [4]ಮೆ[4]ಱಿದು ಮೆಟ್ಟೆ ಬಾಣತಿಯ ಮೊಲೆವಾಲ್ ನಂಜಪ್ಪ ವಿಷಮೃತ್ತಿಕೆಯೆಂಬಿವಂ ತಗುಳ್ದು ಗುಱಿಗೊಂಡೆ ಕಾಗೆಗಳೆ ಪೊಱಮಟ್ಟು ಪಾಱುವ ಕಾಕಗರ್ಭೆಯೆಂಬ ನಾಮಮನಾಳ ಭೂಮಿಭಾಗಮುಮಂ ಶಕಟ ಕುರಾರನ ಕಾಲ [5]ಕೋಳಿಂ[5] ನುರ್ಚುನೂಱಾಗಿ ಪಾಱಿ ಕೆಡೆದ ಕಠಿನ ಶಕಟದೀಷಾದಂಡಹತಿಯಿಂ ಪೃಥ್ವೀತಳಂ ಪಾತಾಳಕ್ಕೆ ಕೂತುವೋಗೆ ಬಾಗಿ ನೋಡಿದರ್ಗೆ ಛಾಯಾಭಗವತಿಯಂತೆ ಶಕಟಚ್ಛಾ[6]ಯೆಯೆ[6] ತೋಱುವ ಶಕಟದ್ವಾರಮೆಂಬ ಬಿಲದ್ವಾರಮುಮಂ ಯಮಳಾರ್ಜುನಭಂಜನಂ ಕಾಕೇಭಕುಂಜಂ ಗಳಂ ಕಿೞ್ತೀಡಾಡೆ ಕೂಪದನಿತು ಕುೞಿಯಾಗೆ ನೆಲದನಿತು ಮಣ್ಣು ನಡಕಿ ಪೊಯ್ದೊಡ ಪಾತಾಗರ್ತದಂತೆ ಪೂೞಿದರ್ಜುನಗರ್ತಮೆಂಬ ನೆಗೞ್ತೆವಡೆದ ಗರ್ತಮುಮಂ ಮುಂಜ ಕೇಶಿ ಕಿಶೋರನ ಬಾಯಿಂ ಸೀಱಿ ಸುರಿದ ರುಧಿರದಿಂ ಧರಣೀರೇಣುಸಿಂದುರಂ ಬಿರ್ದುದು ಪುಸಿಯೆಂದು [7]ಮೆ[7]ಟ್ಟಿದ ಮೊಗಂಗಳ್ಕಾ[8]ಲಿ[8]ನ ಮೊಗದಂತೆ ಕುದುರೆ ಮೊಗ ಮಾಗೆ ತುರಗಮುಖಿಯೆಂಬಾಖ್ಯಾನಮನಾಂತ ಭೂತಳಮುಮಂ ಮುರಾರಿ ಮು[ಂ]ಖರನಂ ಸಜ್ರನೆ ಸೀೞ್ದೊಱೆದ ಮುನಿಸಿಂದೊಗೆದಾಱಿ[3] ಪರಪೆ ಧಾತು ನಿರ್ಝರ ದಂತಶ್ರು[9][ಜ][9]ಳಮೊಱಿತು ಜುಱಿಯುತ್ತುಮಿರ್ಪ ಧಾತ್ರಿಯಪ್ಪುದುಂ ಕಿೞ್ತು ಗಱಿವ ಕೞ್ತೆಗಲ್ಲೆಂಬಂಕದ ಕಲ್ಲುಮಂ ನಗಧರಂ ಕಿೞ್ತಿಕ್ಕೆ ಮುನ್ನಿರ್ದಿರವಲ್ಲದೊ ಗುರ್ಡಿಸಿ ಕೆಡೆದು ಗೋವರ್ಧನಮೆಂಬಭಿಧಾನಮಂ ತಳೆದ ಗಿರಿಯುಮಂ ತೋಱುತ್ತುಂ ಬರ್ಪುದುಮವರ ಪೆಱಪೆಱಗೆ ಗೋಪೀಜನ ಪರಿವೃತೆಯಾಗಿ

ಕಡುಪಿಂದಾ ಕಾ[10]ಕ[10]ನಂ ಕುಪ್ಪಳಿಸಿದೆಡೆಯಿದಾ ಪೂತನೀರಕ್ತಮಂ ಪೀ
ರ್ದೆಡೆಯಾ ತೇರಯ್ಪ ತೇರಂ ಪರಪಿದೆಡೆಯಿದಾಮತ್ತಿಯಂ ಲೀಲೆಯಿಂ ಕಿ
ೞ್ತೆಡೆಯಾತಾಟಿಂ ಕುಮಾರಂ ಕೆಡಪಿದೆಡೆಯಿದಾ ಗರ್ದಭಾಶ್ವಂಗಳಂ ಸೀ
ೞ್ದೆಡೆಯೆಂದಾ ದೇವಕೀದೇವಿಗಮನಿತೆಡೆಯಂ ತೋಱಿದಳ್ಗೋಪಿಯಾಗಳ್ ||೩೩||

*ನೀಂ ಬೆಸಗೊಳ್ವುದದೇನಾ
ಣಂಬಿಯನವಯವದೆ ಕೀೞ್ವ ತೆಱದಿಂ ಕಿೞ್ತೀ
ಯಂಬುಜಲೋಚನನೇೞುದಿ
ವಂಬರಮೆತ್ತಿರ್ದ ಗಿರಿಯಿದಂಬುಜವದನೇ ||೩೪||

---

1 ವ ಪೇರಂ (ಜ) ವಾಗಿ ಪೇರಂ (ಪ) 2 ಪಿ (ಣ) 3 ಲ್ಲಿಳ (ಚಟ) ಲ್ಗೆಳ (ಡಣ) 4 ಳ (ಚಟಡಣ) 5 ಒಳಿಯಿಂ (ಜ) 6 ಯೆತೋಱಯೆ (ಚಟಣ) ಯೆತೋಱಿರೆ (ಡ) 7 ಮಾ (ಜ) 8 ಪಿ (ಜ) 9 ಕಷ್ಟ (ಣ) 10 ನ (ಚಟಡಣ) * 'ಜ' ಪ್ರತಿಯಲ್ಲಿಲ್ಲ

ವ|| ತೋಱಿ ತನ್ನ ಸುತನ ಶಕ್ತಿಗಂ ಸಾಹಸಕ್ಕಂ ವಿಸ್ಮಯಂಬಟ್ಟು ಮನೆದೊಳ್ಗಂಸಂ ಮುನಿದಪನೆಂದೊಡೆ ಮುನಿಯಬೇಡಾ ಎಂದುಪ್ಪಂ ನಿವಳಿಸಿ ತೂಪಿಱಿದು ಮಗನಂ ಬಿಟ್ಟು ಬರಲಾಱದ ದೇವಕೀದೇವಿಯನೆಂತಾನುಮೆಱಿದುಕೊಂಡು

ನಂದನ ವಿಕಸಿತ ಮುಖಮಕ
ರಂದ[1]ಮನು[1]ಗುಱಿಸೆಯುಮಗಿವ ದೃಗುವೃಂದಮನಾ
ನಂದದೊಳಾನಕದುಂದುಭಿ
ದುಂದುಭಿಯಂ ಪೊಯಿಸುತಂದು ಪೊಱಲಂ ಪೊಕ್ಕಂ ||೨೫||

ವ|| ಆ ಪ್ರಸ್ತಾವದೊಳಾ ಪೊಱಲ್ಗೆ ಕಾರಣಭೂತಮ[2]ಪ್ಪ[2] ಚೈತ್ಯಾಲಯದ ಮುಂದಣ ದೇವತಾಯತನಮಪ್ಪ ಬಿಲದ್ವಾರದೊಳ್

ಸುಚಿರ ರುಚಿಗಳ್ ಜಯಶ್ರೀ
ಸಚಿವಂಗಳ್ ಹರಿಯದೊಂದು ಪುಣ್ಯೋದಯದಿಂ
ಶುಚಿನಾಗಶಯ್ಯೆಯುಂ ಶಾ
ರ್ಙ್ಗಚಾಪಮುಂ ಪಾಂಚಜನ್ಯಮುಂ ಪುಟ್ಟುವುದುಂ ||೨೬||

ಸುರದುಂದುಭಿರವಮೆಸೆದುದು
ಸುರತರುವಿಂ ಸುರಿದುದಲರ ಸರಿ ಸೂಸಿದುದಾ
ಸುರಮುಖ ಸರಸಿಜದಿನಹೋ
ಪುರುಷೋತ್ತಮ ಪುಣ್ಯಮೆಂಬ ನಾದಾಮೋದಂ ||೨೭||

ಭೂವಿವರದಿನೊಗೆತಂದಾ
ಪಾವೆಸೆದುದು ಸಪ್ತಫ[3]ಣ[3]ಮಣಿ ಪ್ರಭೆಯಿಂ ಭೂ
ದೇವಿ ಫಣಿರಾಜ ಸಂಭೋ
ಗಾವಸ್ಥಿತೆ ಬೆಸಲೆಯಾದ ಪಾವೆಂಬಿನೆಗಂ ||೨೮||

ಪಸರಿಸಿ[4]ದ ಮೂರ್ಮಿ[4] ವಿದ್ಯು
ದ್ವಿಸಿತಮನದು ತನಗೆ ತಾನೆ ಶಾರ್ಙ್ಗಂ ಸಿಂಗಂ
ಮಸಕದಿನಯ್ವಾಯಿಂ ಗ
ರ್ಜಿಸುವವೊಲಯ್ವಾಯ ಶಂಖಮೇಂ ಗರ್ಜಿಸಿತೋ ||೨೯||

---

1 ಮುವು (ಚಟಡ) ಮುಮು (ಜ) 2 ಪ್ಪ ಮೂಲ (ಜ) 3 ಣೆ (ಜ) 4 ಯೌರ್ವಿ (ಜ) ಮೂರ್ವಿ (ಡ)

ಭುಜಂಗಪ್ರಯಾತ ವೃತ್ತಂ॥ ಅವಂ ಕಂಡು ಕಂಸಂ ಭಯಂಗೊಂಡು ಪೋತಂ
ದವಂ ಮೂಲ ಚೈತ್ಯಾಲಯಕ್ಕಲ್ಲಿ ಪಾದಾ
ರವಿಂದಂಗಳೊಳ್[1] ಪೊಕ್ಕು[1]ಯೋಗೀಶ್ವರರ್ಗಂ
ದಿವಾದೊಂದು ವೃತ್ತಾಂತಮಂ ಪೇಱಿಮೆಂ[2]ದಂ[2] ॥೩೦॥

ವ॥ ಉವರಿಂತೆಂದರಿವು ಮೂಱುಂ ಮಹಾರತ್ನಂಗಳ್ ಪರಮ ಪುರುಷ ಪುಣ್ಯಪ್ರೇರಣೆಯಿಂ ಪುಟ್ಟಿದುವಲ್ಲದುತ್ಪಾತಂಗಳಲ್ಲಂ ಆವನಾನುಮೊರ್ವ [3]ಮಹಾಭಾಗನಿ[3] ನಾಗಶಯ್ಯೆಯನೇಱುವನೀ ಶಾ[4]ರ್ಙ್ಗಧರ್ಮವ[4]ನೇಱಿಸುವನೀ ಪಾಂಚಜನ್ಯಮಂ ಪೂರಿಸುವನಾತನರ್ಧ ಚಕ್ರವರ್ತಿಯಾಗಿ ಪೃಥ್ವೀರಾಜ್ಯಗೆಯ್ವುದೆಮೆಸೆ ಕಂಸನಿದನೀಗಳೆ ನೋಱಿಸೆಂದಾ ನಾಗಶಯ್ಯೆಯನೇಱಿದಂಗೆ [5]ಪಾವಿನ ಪಾಸ್ ಪಸೆಯಾಗಲರಸಂ ತನ್ನ ಮಗಳನಿತ್ತಪನೆಂದು ಸಾಱಿಮೆನೆ ಮಹಾಪ್ರಸಾದಮೆಂದು ಪೆರ್ಗಡೆಗಳ್ ಪೋಗಿ ಗೋಸಣೆಯಂ ಮಾಡೆ

ಪಾವೆಂದೊಡೆ ಪಡೆ ನಡುಗುವು
ದೇವೆಯೊ ಪಸೆಯಲ್ಲಿ ಪಾವು ಕೊಳ್ವೊಸಗೆಯಸೋ
ವೋವೊ ಪುಸಿಮದುವೆ ಮೊದಲೊಳ್
[6]ಸಾವು ದಿಟಂ[6]ಸತ್ತು ಮದುವೆಯಪ್ಪರುಮೊಳರೇ ॥೩೧॥

ವ॥ ನಿಮ್ಮರಸನ ಕನ್ನೆ ವಿಷಕನ್ನಿಕೆಗಾಕೆಗಂಜುವೆವಿಲ್ಲೀ ಸೂಲಮನೇಱಿ ಪಾಲ್ಗುಡಿವರಿಲ್ಲೆಂದು ಬೀರರುಂ ಶೂರರುಮಪ್ಪ ರಾಜಪುತ್ರರ್ ಕಿವಿಯಂ ಮುಚ್ಚಿಕೊಂಡು ಪೋದರಾ ಗೋಸಣೆಯಂ ಘೋಷದೊಳಿರ್ದ ಕೃಷ್ಣಂ ಕೇಳ್ದು

ಏನಿಂ ಪಾಸುರಗನೆ ಬಿ
ಲ್ಲಾನ[7]ದು ಶೃಂ[7]ಗಜಮೆ ಶಂಖಮೈವಾಯದೆ ಪೋ
ಗಾನೇಱುವೆನಾನೆತ್ತುವೆ
ನಾನೊತ್ತುವೆನೆಂದು ಪಿಡಿಸಿದಂ ಡಂಗುರಮಂ ॥೩೨॥

ವ॥ ಪಿಡಿಸಿ ಮನೆಗೆ ಪೋಗದೆ ಗಱಿವಱಿಯ ಪಾವಿನಂತೆ ಗೋಸಣೆಯಱಿಯನರಮನೆಗೆ ಪೋಪುದುಂ ಕಂಸಂ ಕಂಡಿದೆನ್ನ ಪಗೆಯುಂ ಬಗೆಯುಂ ಸಾಧ್ಯಂದುದು ನೋಂತರ ಪಗೆಯನೆಟ್ಟಿಱಿದಂತೆ ಪಾಟ್ಸೇಡು ಚೈತ್ಯಾಲಯದ ಮುಂದೆ

---

1 ಳವೊಳ್ (ಚಟ) ಳುಪೊಳ್ (ಡ) 2 ಡೂ (ಚಟಡ) 3 ನಿ (ಜ) 4 ಜ್ಞಾರ್ಗಯು ು (ಜ) 5 ಹಾವಿನ (ಜ) 6 ಸಾವುದು ಧೀರಂ (ಚಟ) ಸಾವುದು ಧೀರಂ (ಡ) ಸಾವುದಿವಂ 7 ದೃಶಂ (ಜ)

ಮಹಾಸ್ಥಾನಮಂ ಮಾಡಿ ವಸುದೇವಬಲದೇವ ಮಂಡಳಿಕ ಮಕುಟ ಬದ್ಧ ಸಾಮಂತ
ಮಂತ್ರಿ ಸಮೇತನಾ[1]ಗಿ ಕುಳ್ಳಿರ್ದು[1] ಮಂತ್ರವಾದಿಗಳಿನವನಾಹ್ವಾನಂ ಮಾಡಲೊಡನೆ

ಮೊದಲೊಳ್ಕಾಳಾಹಿಯಂ ಕಾಱುವವೊಲೊಗೆಯೆ ಧೂಮಾಳಿ ಫೂತ್ಕಾರದಿಂದಂ
ತಿದಿಯಂ ಕೊಂ[2]ಡೊ[2]ತ್ತಿದಂತುಚ್ಚಳಿಸೆ ಬಟ[3] ವಿಷಜ್ವಾಲೆ ವಕ್ತ್ರಂಗಳಿಂ ಪಾ
ಱಿದ ಕೆಂಡಂ ನೆತ್ತಿಯೊಳ್ಬಿರ್ದವೊಲಿರೆ ಫಣಿಮಾಣಿಕ್ಯಸಂದೋಹದಿಂ ತಂ
ದುದೊ ಕೋಪಾಟೋಪದಿಂ ವಾಸುಗಿಗೆ ವಿಷಯಶಃಶೋಷಮಂ ಲೇಲಿಹಾನಂ ||೩೩||

ವ|| ಆ ಕುಂ[3]ಭೀನಸ ವಿ[3]ಜೃಂಭಣಕ್ಕೆ ನೆರೆದ ನೆರವಿಯೆಲ್ಲಮೊಲ್ಲದೇ ನುಲಿದೋಡೆ
ಕಂಸನೊಳಂಗೊಂಡು (?) ನೋಡಿ ಗದಗಂಪಂಗೊಂಡು ಮಹಾಮಂತ್ರವಾದಿಗಳಪ್ಪ
ಮುನಿಮುಖ್ಯರ ಸುತ್ತಿಗೊಂಡು ಪಂಚನಮಸ್ಕಾರಮಂ ಜಪಿಯಿಸುತ್ತುಮಿದನೇಱುವೆ
ನೆಂದುಬಂದ ಕಲಯಂ ಕರೆಯಿಮೆಂಬುದುಮಾ ಮಾತಿಂ ಮುನ್ನಮೆ

ಗರುಡಧ್ವಜನೆಟ್ಟಿರ್ದು
ಮುರಿವುರಿನಂಜುರಿಯ ಮೇಲೆ ನೀರ್ವೊಯ್ದವೊಲಾ
ಯ್ತುರಗಂಗಂ ನವಿಲಂ ಕಂ
ಡೊರಗನ ತೇಜನಾಯ್ತು ನೆರವಿಗಾಯ್ತತಿಚೋದ್ಯಂ ||೩೪||

ಸೂಸೆ ಮುಗಮಗಪ [4]ಕಂಪಿ[4]ನ
ವಾಸನೆ ಪಾಯ್ದೇಱಿದಂ ತದುರಗೇಂದ್ರನ ತ
ಣ್ಪಾಸನರೆವಿರಿದ ಜಾದಿಯ
ಬಾಸಿಗದೊಳ್ ಪಾಯ್ದ ತುಂಬಿಯಂತಿರೆ ಕೃಷ್ಣಂ ||೩೫||

ಮಂಡಳಿಸಿದ ಮುಕ್ತಾಫಲ
ಪಾಂಡುರ ಫಣಿಪತಿಯ ಮೇಲೆ ಶರದದ ಹಿಮ ಕೃ
ನ್ಮಂಡಲದ ಮೇಲೆ ಚೆಲ್ವಂ
ಕೊಂಡೆಸೆವ ಕಳಂಕದಂತಿರೆಸೆದಂ ಕೃಷ್ಣಂ ||೩೬||

ಆ ಜಳಜಲೋಚನಂಗೆ ವಿ
ರಾಜಿಸೆ ಜಯಲಕ್ಷ್ಮಿ ತನ್ನದೊಂದೊಲವಿಂ ನೀ
ರಾಜಿಸುವಂತೆಸೆದುವು ಫಣಿ
ರಾಜನ ಬಿಡದೊಲೆವ ಪೆಡೆಯ ಮಣಿದೀಪಿಕೆಗಳ್ ||೩೭||

---

1 ಗಿ (ಜ) 2 ಡೆ (ಜ) 3 ಭಿನೀಸ (ಚಟ) ಭೀವಿಷವಿ (ಜ) 4 ನಂಜಿ (ಜ)

ಒಡೆವಂತಾಗಿರೆ ಭೂತಧಾತ್ರಿಯೆರ್ದೆ ಕಾಲ್ಕೇಲಾಗಿ ದಿಗ್ದಂತಿಗಳ್
ಕೆಡೆವಂತಾಗಿರೆ ಲೋಕಪಾಲಿವರಲೆಂದಾರಯ್ದುಮಾಕಾಶದಿಂ
ಬಿಡುವಂತಾಗಿರೆ ತಾರಕಾನಿಕರವೀ ಬ್ರಹ್ಮಾಂಡಭಾಂಡಂ ಸಿಡಿ
ಲ್ದೊಡೆವಂತಾಗಿರೆ ಪಾಂಚಜನ್ಯ ನಿನದಂ ಪರ್ವಿತ್ತು [1]ದಿಕ್ಪಾ[1]ರವಂ ||೩೮||

ವ|| ಈ ಶಂಖಮನಿನ್ನುಂ ಪಿಡಿದೊಡೆ ಜಗಂ ಪಿಡುಗಿ ಕೆಡುಗುಮೆಂದು ಕರುಣಿಸಿ ದಂತೆ ಮನಿವರ್ ಮನಮಿಱು[2]ಪೆ ಶಾರ್ಙ್ಗಶಂಖಮನಿಱು[2]ಪಿ ನಾಗಶಯ್ಯೆಯಿಂದಿೞಿದು ಪೋಪುದಂ ಕಂಡು ಕರೆದು ಕಂಸನಿಂತೆಂದಂ

ತೊದಳೇನೊ ಮೆಚ್ಚಿದೆಂ ನಿ
ನ್ನದಟಂಗೆಲೆ ಗೋಪ ತರ್ಪುದೀ [3]ಬಸದಿಗೆ ನೀ
ನುದಯಕ್ಕೆ ಮುಂಚೆ ನಾ[3]ಗ[3]
ಹ್ರದದೊಳಗಣ ಸಾವಿರೆಸಟ ತಾವರೆಯಲರಂ ||೩೯||

ವ|| ತಂದು ದೇವರ ಶ್ರೀಪಾದಪದ್ಮದೊಳೇಱಿಸಿದೊಡೆ ನಿನ್ನ ನಾನೆ[4]ಯೇ[4] ಱಿಸುವೆನೆಂಬುದುಮದರ್ಕೊಂಪು ಕಯ್ಯನೆ ತಂದಪೆನೆಂದಾ ಕಯ್ಯೊಳೆ ಕೃಷ್ಣನಾ ಯಮುನಾ ನದಿಯ ನಾಗಹ್ರದಕ್ಕೆ ಪೋದನದೆಂತಿರ್ದುದುದೆಂದೊಡೆ

ಬಳೆದು ವಿಷಾಗ್ನಿಯಗ್ಗಿವಳಿದೆಣ್ಣೆ ಯೊ[5]ಳೆಟ್ಟು[5]ರಿವಗ್ನಿಯಂತೆ ನೀ
ರೊಳಗುರಿದೇೞ್ತಿ ಪರ್ವಿ ಬಡಬಾಗ್ನಿವೊಲಾ ಮಥನಾದ್ರಿ ಪೀಡೆಗು
ಮ್ಮಳಿಸಿ ಲಯಾಗ್ನಿ ಘೋರ ಗರಳಾಗ್ನಿಯನೀ ಭುವನತ್ರಯಂ ಭಯಂ
ಗೊಳೆ ಕೆಳದರ್ಾಸುರಕ್ಕುಗುಟ್ವ ವಾರ್ಧಿವೊಲಿರ್ದುದು ಕಾಳಿಯಹ್ರದಂ ||೪೦||

ಮಿಗೆ ನಂಜು ತಾಗೆ ನೀ[6]ರ್ಗಂ[6]
ಪು[7]ಗಳೊ[7]ಗೆದವೊಲೊಗೆಯೆ ಬುದ್ಬುದಾವಳಿ ಕಾಳೋ
ರಗ ನಿಶ್ವಾಸಾನಿಳನಿಂ
ಜಗುನೆಯ ಮಡು ತೆಕ್ಕತೆಕ್ಕನುಕ್ಕುತ್ತಿರ್ಕುಂ ||೪೧||

ಕಾಳಿಯನ ವಿಷದ ಪೊಗೆ ಮಿಗೆ
ಕಾಳಿಂದಿ ಕೞಿಂಗಿ ಕೂಡಿ ಕಾಡಿಗೆಗೊಂಡೀ
ಭೂಲಲನೆಯ ಬಾಸೆವೊಲಾ
ಯ್ತಾಲೋಕಿಗೆ ಕೞ್ತಿಯ[8]ತ್ತೊ[8]ೞ್ತಿಯ ಪರಿದೆಡೆಯುಂಟೇ ||೪೨||

1 ದೀಕ್ಪಾ (ಜಡ) 2 ಪೆ (ಜ) 3 ರಾ (ಜ) 4 ಱ[3]ಯಾಲೇ (ಜ) 5 ಳಿದರ್ (ಚಟಡಣ) 6 ರ್ಗಳ್ (ಚಟಡಣ) 7 ಗಳೊ (ಚಟಡಣ) 8 ದೊ (ಚಟಡಣ)

ಅನಿಲಂ ಮೇಗ[1]ಡೆ[1] ಪೋಗಲಣ್ಮನಿವನಿಂತಂದಾದೊಡಾ ಶಂಖಚೂ
ಳನನೇಂ ಕಾ[2]ವ[2]ನೆ ಸರ್ಪವೈರಿ ಸರಮಂ ಕೊಂ[3]ಡಂ[3]ದು ಗುಳ್ಕಿಂದು ನುಂ
ಗನೆ ದಲ್ ಪೋಳಿಯನೆತ್ತಿ [4]ತು[4]ತ್ತನೆ ಲಯೋಗ್ರಜ್ವಾಳೆಯಂ ತಿಂದು ತೇ
ಗನೆ ಮಾಕಾಳಿಯನುರ್ಚಿ ಮುಕ್ಕನೆ ವಿಯನ್ಮಾಕಾಳಿಯಂ ಕಾಳಿಯಂ ||೪೩||

* ಬಿಷಮಂ ನುಂಗಿದನೆಂದು ಕೇಳ್ದಿನದು ಮುನ್ನೀಗ್ಗಂಟಿ ಮುನ್ನಾ ವಿಷಂ
ಪುಸಿ ಪೋಗಾನುಗುಟ್ದಿಪ್ಪೆನೆನ್ನ ವಿಷಮಂ ತಾಂನುಂಗಿ ನೋಟ್ಕಿಂದು ಗ
ರ್ಜಿಸಿ [5][ದೂ][5]ತಟ್ಟಿದ ತನ್ನ ಪಾವುಗಳನೀಶಂ ಭೂಷಣಂ ಮಾಡಿ ಮ
ನ್ನಿಸಿದಂ ಪೇಟುಟಿದಂದು ತೀಚ್ಚಗನೆ ಕನಲ್ದಾ ಶೂಲಿಯಂ ಕಾಳಿಯಂ ||೪೪||

ವ|| ಎನಿಪ ದಂದಶೂಕನ ದಾಡೆಗಳಿನೊಸರ್ತ ವಿಷದ ಮಡುವಿನಂತಿರ್ದ ಜಗುನೆಯ ಮಡುವಂ ಕ್ರೀಡಾಸರೋವರವಂ ಪುಗುವಂತೆ ಪೊಕ್ಕು

† ಆಟಿಲೆ ಫಣಿ ಕಟಿಲೆ ಕೇಸರ
ವೆಟಿಲೆ ರುವನ್ಮಧುಪಮಾಳೆ ಹರಿ ತನ್ನಯ ಪೊ
ರ್ಕುಟಿ ಕಮಳದಂತೆ ಜಗುನೆಯ
ಸುಟಿಯೊಳ್ ಸೊಗಯಿಸುವ ಕಮಳದಲರಂ ಕೊಯ್ದಂ ||೪೫||

§ ವ|| ಕೊಯ್ದು ಗೋಪರ ಕಯ್ಯೊಳ್ಕೊಟ್ಟು ಮಗುಳೆ ಕಾಳಿಯನ್ವೇಷಣದಿಂ ಪೊಕ್ಕು

ಕಾಳಿಂದಿಯ ಮಡುವಂ ಹರಿ
ತೋಳಿಂ ತುಳ್ಕಾಡಿ ಮೊರೆದು ಮೇಲ್ವಾಯ್ದ ಮಹಾ
ಸ್ಥೂಳ ತರಂಗಾವಳಿಯಂ
ಕಾಳಿಯನೆಂದಡಸಿ ಪಿಡಿದು ಪೊಡೆದಂ ತಳದಿಂ ||೪೬||

ಅಡಗಿದ ಪಾವಂ ಜಗುನೆಯ
ಮಡುವಿನೊಳಱಸುವನ ಕರನಖಾರುಣರುಚಿಗಳ್
[6]ಕಡು[6] ಕತ್ತಲೆಯೊಳ್ ಪಲವುಂ
ಸೊಡರಂ ಕೊಂಡಱಸುವಂತಿರೇಂ ತೊಳಗಿದುವೋ ||೪೭||

---

1 ನೆ (ಚಜಟಡ) 2 ಯ (ಚಜಟಡ) 3 ಡೊಂ (ಙ) 4 ಕು (ಡಙ) 5 ಬೂ (ಜ) 6 ಗಡ (ಙ)

* 'ಜ' ಪ್ರತಿಯಲ್ಲಿರುವ ಹೆಚ್ಚಿನ ಪದ್ಯ. † 'ಡ'ದಲ್ಲಿ ಇಲ್ಲ. § 'ಜಡ' ಗಳಲ್ಲಿಲ್ಲ.

ಫಣಾರತ್ನಜ್ಯೋತಿಯಿಂ ಕಾಳಿಯನೆಯಱಿಸಿ ಕಂಡೆಯ್ದಿ ಗೋಪಾಳಚೂಡಾ
ಮಣಿ ಜೀವಂಬೆತ್ತ ಗಾರುತ್ಮತ ಮಣಿಯವೊಲಂಗ ಪ್ರಭಾಮಾಲೆ ದುರ್ವಾ
ಪಣಮಂ ಕಾಳಿಂದಿಯೊಳ್ ಪುಟ್ಟಿಸಿ ಪಿಡಿಯಲೊಡಂ ಕೃಷ್ಣನಂ ಕಾಳಿ[1]ಯಾಂ[1]ಗಂ
ಪೆಣೆದತ್ತಾಪಾದಮಸ್ತಂ ಲತೆಯೊಳೆ ಬಿದಿರಂ ಪರ್ವುವಂತೊಂದಗುರ್ವಂ ||೪೮||

ಬಿಸುಸುಯ್ದೀಕ್ಷಿಸಿ ನುಂಗುವಂತೆ ಮೊಗಮಂ ಪ್ರೋ[2]ದ್ಯ[3]ತ್ಫಣಾ ಹಸ್ತದಿಂ
ಮುಸಕಂಗುಂದವೆ ಪೊಯ್ದು ನುಂದಲೆಯನಂಗೋಪಾಂಗಮಂ ಕೂಡೆ ಬಂ
[4]ಚಿ[4]ಸಿ ನ್ಮೈ ಬೇಱಿರಡಿಲ್ಲೆನಲ್ಕಮರತತ್ಕಾಟೋಪದಿಂ ತಳ್ತು ಪು
ಟ್ಟಿಸಿದಂ ಪಂಕಜಲೋಚನಂಗೆ ವಿಜಯಶ್ರೀ ಕೇಳಿಯಂ ಕಾಳಿಯಂ ||೪೯||

ಮತ್ತಮಯೂರಗರ್ಜನೆಗೆ ಚಂದನಮಂ ಬಳಸಿರ್ದ ಪನ್ನಗಂ
ಸುತ್ತಱುವಂತೆ ತನ್ನ ಗಳಗರ್ಜನೆಗಂಜಿ ನಿಜಾಂಗಮುಷ್ಟಿಯಿಂ
ಸುತ್ತಱುದಿರ್ದ ಪನ್ನಗನ ಗಂಟಲನೊತ್ತಿದನೊತ್ತಿದೊಂದು ಕೆ
ಯ್ಮತ್ತಮುದೊಂದು ಕಾಲಭುಜಗಂ ಪಿಡಿದಂತಿರೆ ಕಾಳಿಯಾ[5]ಹಿ[5]ಯಂ ||೫೦||

ವ|| ಅಂತು ಕಾಳಿಯುಂ ಗಾಳಿಯುಂ ಗರಳಮುಮನೊಳಗಾಗಿ ಕಾಱಿ ಕಾಳಿಂದಿಯ ಸೋರ್ಮುಡಿಯಂ ಪಿಡಿತರ್ಪಂತೆ ಪಿಡಿತಂದು ಗೋಪಾಲಬಾಲಕರ ಕಯ್ಯೊಳ್ಕೊಟ್ಟು ಕಂಸನಲ್ಲಿಗೆ ಕಮಳದೊಡನೆ ಕಳಿಪಿ ಕೃಷ್ಣಂ ಗೋಕುಳಕ್ಕೆ ಮಗುಳ್ದಾಗಳ್

ಅಯನಯ ನಿಧಾನ ತೇಜೋ
ಮಯ ಕೆಂಡಮನೊಱಲೆ ಪಕ್ತಲಾರ್ಕುಮೆ ಜಗತೀ
ಜಯಿಯೆನಿಪ ಕಂಸ[6]ನೆಸ[6]ಗುವ
ಕುಯಕಂ ಕೊಳ್ಗುಮೆ ಪರಾಕ್ರಮೋನ್ನತ ನಿನ್ನಂ ||೫೧||

ವ|| ಎಂದಶರೀರ ವಾಕ್ಯಮಂ ಕೇಳ್ದು ಪೂತನೆ ಮೊದಲಾಗಿ ಕಾಳಿಯಂಬರಂ ಮಾಡಿದಪಚಾರಮೆಲ್ಲಮುವನ ಮಾಟಮೆಂದು ನಿಶ್ಚೈಸಿ ಪಲವು ಮುನಿಸುಮನೊಂದೆ ಮುನಿಸುಮಾಡಿ ಮುನಿದು ಕಂಸಂ ಮಾಡು[7]ವು[7]ಪಾಂಸಮೆಲ್ಲಮನಱಿದುಮಿರ್ದನತ್ತ ಸಹಸ್ರ ಪತ್ರದೊಡನೆ ಕಾವುವೆರಸಿದ ಕರಿಸು ನೆಯ್ದಿಲನಟ್ಟುವಂತೆ ನಾರಾಯಣನಟ್ಟಿದ ಪಾವುಮಂ ಪೂವುಮಂ ಕಂಸಂ ಕಂಡು ಪಾವಡರ್ದ ಪಂದೆಯಂತೆ ಕಿಱಿದು ಬೇಗ ಮಿರ್ದು ತನ್ನೊಳಿಂತೆಂದಂ

---

1 ಯಂ (ಚಜಟಡ) 2 ದ್ಯು (ಜ) 3 ಜಿ (ಚಟಡ) 4 ರ್ಹಿ (ಚಟ) 5 ಬಶ್ಶಾ (ಜ)
6 ನುಂ (ಚಟಜ) ನಂ ನುಂ (ಡ) 7 ವ (ಜ)

ಬಲಯುತನಾದಂ [1]ಪ[1]ಗೆವಂ
ಕೊಲಲಾಱಂ ಕಾಳಿಯಂ ಗಡಿನ್ನಾರ್ಪವರಾರ್
ಸಲೆ ಕೊಲಬಾರದ ಪಗೆಯಂ
ಗೆಲವಾರದದೆಂದುಮೆಂತುಮೆಂಬುದು ಪದನೇ ||೫೨||

ವ|| ಎಂದು ಮಂತ್ರಶಾಲೆಗೆ ಪೋಗಿ ಮಂತ್ರಿಗಳಂ ಬರಿಸಿ ಬೆಸಗೊಂಡೊಡವರಿಂತೆಂದರ್

ಪಗೆವಂ ಬಲ್ಲಿದನಾದನಾದ ರಸದ ಪ್ರಚ್ಛನ್ನ ತೀಕ್ಷ್ಣಾದಿ ಬಾ
ಧೆಗಳಂ ಗೆಲ್ದನದೇಕೆ ಮುಚ್ಚುಮಱೆಯಿನ್ನುರ್ವೀಶ್ವರರ್ತಮ್ಮ ವೈ
ರಿಗಳಲ್ತ್ತಾ[2]ರು[2]ಮನಿಕ್ಕಿ ಬಾರಿಸುವರಾರ್ ಕೇಳ್ಮಂತ್ರಮಂ ಮಲ್ಲಗಾ
ಳಿಗಮಂ ಮಾಡಿಸಿ ಕೊಲ್ವುದುಳ್ಳೊಡರಿಯಂ ಕಂಸಾವನೀವಲ್ಲಭಾ ||೫೩||

ಜಗಮೆಲ್ಲಮಱಿಯೆ ತಂಗೆಯ
ಮಗನನದೆಂತಿಱಿವೆಮೆಂಬೊಡನುಜರ್ತನುಜಾ
ದಿಗಳಲ್ಲದೆ ಭೂಪಾಳರ
ಪಗೆವರ್ಮುತ್ತೊಂದು [3]ದೀವ[3]ದಿಂ ಬಂದಪರೇ ||೫೪||

ಮೊದಲೊಳ್ಮಲ್ಲನೆ ಮಲ್ಲರಿಂ ಮುಱಿಸು ಮಲ್ಲರ್ ಸೋಲ್ತೊಡಾ ಜೇಗದೊಳ್
ಮದವದ್ದಂತಿಯಿನೊಕ್ಕಲಿಕ್ಕಿಸು ಮದೇಭವ್ರಾತ[4]ಮುಂ[4] ಸೋಲ್ತೊಡೊ
ಟ್ಟಿದ ಕೀರ್ತಿರ್ಪವೊಲಿರ್ದ ಖಟ್ಟಿಬಲಮಂ ಪೇೞ್ ಖಟ್ಟಿಗಳ್ ಸೋಲ್ತೊಡೋ
ವದೆ ನೀ[5]ನೊರ್ವನೆ[5] ಕಾದಿಕೊಲ್ ಪಗೆವನಂ ಕಾಳಾಂತಕಂ ಕೊಲ್ವವೊಲ್ ||೫೫||

ವ|| ಎಂಬುದುಮಿದೇ ಮಂತ್ರಮೆಂದು ನಿಶ್ಚೈಸಿರ್ದನಾ ಪ್ರಸ್ತಾವದೊಳ್ ಪಡಿಯಱಿಂ ಪೊಡೆವಟ್ಟು ಮಹಾಮಾತ್ಯಂ ಬಾಗಿಲೊಳ್ಪಂದಿರ್ದಪನೆನೆ ಕಂಸಂ ಬರವೇೞಿಂಬುದುಮಾರೋಹಕಂ ಬಂದು ಕಂಡು ಸಾಷ್ಟಾಂಗವೆಱಗಿ ಮುಂದೆ ನಿಂದು

ಕರಿ ಕೋಲೆಯೊಳ್ಜವಂಗೆ ಪುದು ಕಾಯ್ಪಿನೊಳಗ್ನಿಗೆ ದಾಯಿಗಂ ಮಹೋ
ದರವಳವಿಂ ಸಿಡಿಲ್ಗೆ ಮದದೊಳ್ಕಿಳಿ [6]ಕಾ[6]ಳಿಗೆ ಕಾಲತಕ್ಕಿನೊಳ್
ಗುರು ಗರುಡಂಗೆ ಮಾರಿಗೊವಜಂ ಮುಳಿಸಿಂದೆನೆ ನಿನ್ನ ಗಂಧ ಸಿಂ
ಧುರಪತಿಯಗ್ಗದಗ್ಗಳಿಕೆಯಗ್ಗಳಮಾದುದಿಳಾಧಿನಾಯಕಾ ||೫೬||

---

1 ಬ (ಚಟಡಣ) 2 ಗು (ಜ) 3 ದ್ವೀಪ (ಡ) ದೀವ (ಣ) 4 ಮುಂ (ಚಟಡ) ಮೂ (ಣ)
5 ನಾತನೆ (ಚಟಡಣ) 6 ಗಾ (ಜ)

ಗಿರಿ ಪರಮಾಣುವಾಗೆ ಕಡಲೆಯ್ದೆ ಲಯಾನಳನೆಯ್ದೆ ಲೋಕಮಂ
ಧರಿಯಿಸಿ ನಿಂದ ವಾಯುಚಯಮೆಯ್ದೆ ವಿಹಾಯಸಮೆಯ್ದೆ ಕಾರಣಂ
ಕರಗುಱಿದಂತು ದಂತಿಗಳೊಳೀ ಬಲಮೀ ಮದಮೀ ಪ್ರತಾಪಮೀ
ಭರಸಹಸತ್ವ[1]ವಿಖ್ಯಾ[1]ಸ್ಥಿರ ಮಹೋದಯಮಕ್ಕುಮೆ ಕಂಸ ಭೂಪತೀ ||೫೭||

ವ|| ಎಂದು ಬಿನ್ನವಿಸಿ ತನ್ನ ಮನದ ವಿಷಾದಮಂ ಕಳೆದ ನಿಷಾದಿಗೆ ಚಿತ್ತಮು ಮನಂಗಚಿತ್ತಮುಮನಿತ್ತೆನ್ನ ಪಗೆಯುಂ ಬಗೆಯುಮಿಂದು ಸಾಧ್ಯಮಾದುದು ಮಧು ಸೂದನನಂ ಮುನ್ನಂ ಕೊ[2]ಲ್ವೆ[2]ನಿನ್ನು ಕೊಂದಪೆನೆಂದು ತೊಡೆಯಂ ಪೊಯ್ದು ತಡೆಯದೆ ಚಾಣೂರ ಮಲ್ಲನಂ ಕರೆಯಲ್ಕಳಿಪಿ ವೀರಾವೇಶದಿಂ ಮೆಯ್ಯಱಿಯದೆ ಕಂಸನಿಂತೆಂದ ನೆಂದಾನುಮೊರ್ಮೆ ಗಂಡಗರ್ವದ ದೆಸೆಯಿಂ ಕೈಟಭನೆಂಬ ದಾನವಂಗಾಂ ಪ್ರಾಣ ದಾನಂಗೆಯ್ದೊಡಾತಂ ವಿನೀತನಾಗಿ ನೀನೆನಗೆ ಪರೋಪಕಾರಿಯೈ ನಿನಗೀ ಭವದೊಳ್ಬೆ ಸಕೆಯ್ದಪ್ಪೆನಲ್ಲದೆ ಬೆಸೆದಿರ್ಪೆನಲ್ಲೆನೆನಗೆ ಬೆಸನೇನೆಂದೊಡಾನಾ ದಾನವನ[3]ವಂ[3] ಕಡು ಪುಮಂ ಕಾಯ್ಪುಮಂ ಕಂಡೀ ರಕ್ಕಸನಾನೆಯಾಗಲ್ತಕ್ಕನೆಂದು ಬಗೆದು ನೋಡಿ ನೀನೆ ನ[4]ಗೆ ಸಾಂ[4]ಗ್ರಾಮಿಕ[5]ನ[5]ಪ್ಪ ನಾಗನಾಗಿರೆಂದೊಡಾಗೆ ನಿಜಗಲಿಯಪ್ಪಜಿತನೆಂಬ ಗಜಮಂ ಪರಾಜಿತಂ ಮಾಡಿಯಜಿತಂ ಜಯನೆಂಬ ಪೆಸರುಮಂ * ವಿಕಾಸಿಸಿ ತಾನೇಕ ಕುಸುಮ ಕಾಸಾರ ಸರಿತ್ಸರೋವರಂಗಳೊಳಪೊಕ್ಕು ಕುವಳಯಮನೆ ಕಿಱ್ತು ಮಸ್ತಕ ಪಿಂಡದೊ ಳೊಟ್ಟಿಕೊಂಡು ಕುವಳಯಾಪೀಡನುಮೆಂಬ ಪೆಸರುಮಂ* ಪಡೆದುದೆಂದದಱ ಪೂ[6]ರ್ವಾಂ ತ[6]ರಮಂ ತಿಳಿಪಿ ಮಾವಂತನಂ ಕರೆದು ಕಿವಿಯೊಳ್ ನಾಳೆ ನೀನುಂ ನಿನ್ನಾನೆಯುಂ ಗೋಪುರದೊಳ್ ಕಟ್ಟುಗೊಂಡಿರ್ದು ಪುರಮಂ ಪುಗುವ ನಂದನ ಮಗನಂ ಯಮ ಪುರಮಂ ಪುಗಿಸಿ ನೋಂತರ ಪಗೆಯನೆತ್ತಿಱಿದಂತೆ ಮಾಡೆಂದು ಕಳಿಪಿದನನ್ನೆಗಂ ಚಾಣೂರಂ ಬಂದು ಭುಜಾಸ್ಫಾಲನ ಪುರಸ್ಸರಂಬೆ[7]ಸಸು[7] ಬೆಸಸೆನೆ ಕಂಸನಿಂತೆಂದಂ

ಮೆಚ್ಚುಂಟು [8]ನಾಳೆ ನಿನ್ನೊಳ್
ಮ[8]ಚ್ಚರಿಸುವ ನಂದಸುತನ ಮೂಗಿಂ ಬಾಯಿಂ
ದುಚ್ಚಳಿಸೆ ರುಧಿರಮೆನಗಾ
ದಚ್ಚಿಗಮಂ ಮುಱಿವಡೊತ್ತಿ ಮುಱಿ ಚಾಣೂರಾ ||೫೮||

ವ|| ಎಂದ ಕಂಸಂಗೆ ಚಾಣೂರಮಲ್ಲಂ ಮುನಿದು

---

1 ವು (ಚಜಟಡ) 2 ಲ್ವೆ (ಚಜಟಡ) 3 ವುಂ (ಚಜಟಡ) 4 ಗೈಸಾಲ (ಚಟಡಣ) 5 ವು (ಚಟಣ) 6 ರ್ವಾವತಾ (ಜ) 7 ಸ (ಚಟಡ) ರೆಸು (ಜ) 8 ಮೆಚ್ಚುಂ ಜಯೆ ನಾಳೆ ನಿನ್ನೊಳ (ಡ) * ಈ ಭಾಗ 'ಜ' ಪ್ರತಿಯಲ್ಲಿಲ್ಲ.

ಕ್ಷೋಣಿಪ ನೀವೀ ಮಾತಂ
ಮಾಣಕ್ಕಟ ಕೀಡೆ[1]ಯಂ[1] ಕಿಮುಟ್ಟುವುದಕ್ಕೀ
ಚಾಣೂರನೇಕೆ ಮುಳಿದಾಂ
ಪೂಣಿಸಿದೊಡೆ ಕೃಷ್ಣನೆಂಬ ಮಾನಸನೊಳನೇ ॥೫೯॥

ದೆಸೆಯಂ ನುಂಗೆಂಬುದೇ[2]ಕಾ[2]ಗಸಮನುಡುಗಿ ಕಟ್ಟೆಂಬುದೇಕರ್ಕನಂ ನೀಂ
ಪೊಸೆದೀಡಾಡೆಂಬುದೇಕಾ ದಿಗಿಭದೊಡನೆ ಪೋರೆಂಬುದೇಕೆನ್ನ[3]ನೆಮ್ಮಾ[3]
ಪಸುವಂ [4]ಕಾದುಂ[4]ಬ ಪಾಲ್ವಲ್ಗಳ ಹಸುಳೆಯನಿಕ್ಕೆಂದು ಬಾಳರ್ಗೆ ಪೇಟ್ವೀ
ಬೆಸನಂ ಚಾಣೂರಮಲ್ಲಂಗೆನಗೆ ಬೆಸಸಲೇಂ ತಕ್ಕುದೇ ಕಂಸರಾಜಾ ॥೬೦॥

ಭಾವಿಪೊಡಾಂ ಜಟ್ಟಿಯವಂ
ಗೋವಳನೆಂದಂದು ದೇವ [5]ಪೋರ್ತದೊ[ಳ್][5]ವನೆ
ನ್ನಾವೆಡೆಗೆ ವರ್ಪನೆನಗಂ
ದೇವಕಿಯ ಸುತಂಗಮುಜಗಜಾಂತರಮಲ್ತೇ ॥೬೧॥

ವ॥ ಆದೊಡಂ ದೇವರಭಿಪ್ರಾಯಮನಱಿದೆಂ ದ್ರೋಹರನಾನೆಗಿಕ್ಕುವುದು ತಕ್ಕುದಲ್ಲನೆ ತಗದೆನಲಾಗ ನಾಳೆ ದೇವಕಿಯಕ್ಕೆಯನಖ್ಖಡದೊಳೆ ದೇವರ ಕಿವಿಗೆಯ್ದಿಸುವೆನಂತುಮಲ್ಲದೆ

ತ[6]ನ್[6]ತನಗೀ ಜಗತ್ರಯಮುಮಿರ್ಪುದು ತಾಂ ಗಡ ಪೇೞದೆಲ್ಲಿದ
ರ್ಮುನಿವರುಮೆಲ್ಲಮುಳ್ಳಿರದೆ ಪೂತನಿಯಂ ಖರಕೇಶಿಯಂ ಯಮಾ
ರ್ಜುನರನರಿಷ್ಟನಂ ಶಕಟನಂ ಪಟುಕಾಳಿಯನಂ ಕಡಂಗಿ ಕೃ
ಷ್ಣನ ಬಸಿಱಿಂದಮಾಂ ತೆಗೆಯದಿರ್ದೊಡೆ ನೀಂ ತೆಗೆಯೆನ್ನ ಜೋಳಮಂ ॥೬೨॥

ವ॥ ಎಂದು ಚಾಣೂರಂ ಪೋಗೆ ಕಂಸಂ ಗೃಹಮಹತ್ತರನಂ ಕರೆದು ನಾಳೆ ಮಲ್ಲಗಾಳೆಗನೆಂಬುದುಮುವಂ ಮಹಾಪ್ರಸಾದಮೆಂದ[7]ಖ್ಖ[7]ಡಮಂ ಸಮೆಯೆ

ವಿಕಿರನ್ನಾನಾಪತಾಕಾಪಟಳ ಪಟುಪಟೀ ಪ[8]ಕ್ಷ[8]ವಿಕ್ಷೇಪದಿಂ ಮೇ
ಚಕಿತಂ ರತ್ನಾವಳೀ ತೋರಣ ಕಿರಣ ಮರುಚ್ಚಾಪ ಚಾರಂಗಳಿಂ ಚಂ
ದ್ರಕಿತಂ ಪುಷ್ಪೋಪ ಹಾರೋಜ್ವಲ ಮುಕುಳಮಿಲತ್ಕೀರ್ಣ ಕರ್ಪೂರದಿಂ ತಾ
ರಕಿತಂ ತಾನಾಗಿ ಪೋಲ್ತಿರ್ದುದು ವಿಮಳನ[9]ಭೋ[9]ರಂಗಮಂ ಮಲ್ಲರಂಗಂ ॥೬೩॥

---

1 ಯುಂ (ಚಟ) 2 ರಾ (ಚಟಡ) ನಾ (ಙ) 3 ನಯ್ಯೋ (ಚಟಡಣ) 4 ಕೊಯ್ದುಂ (ಜ) 5 ಪೋತಕದೊಡ (ಚಟಣ) ಪಾದೋರ್ಡವು (ಜ) ಪಾದ್ಧರ್ದೊ (ಡ) 6 ನು (ಚಟಡಣ) 7 ಖಂ (ಚಟಡಣ) 8 ಕ್ಷಿ (ಚಜಟಡ) 9 ಭಾ (ಚಟಡ)

ಪಿರಿದುಂ ಪೊತ್ತಿರ್ಪಿನಂ ಕಟ್ಟಿದ ಪಟಿಗೆಗಳ ಕ್ಷೂಣನಕ್ಷತ್ರ ಮಾಳಾ
ಭರ[1]ಮಂ ಮು[1]ದಿರ್ದ ಕಂಭಂ ಕರಮೆನೆ ಕಳಶಂ ಕುಂಭದಂತಾಗೆ ಬೇಗಂ
ಕರೆದತ್ತುತ್ಪಾತಮಂ ನಿರ್ಗತ ವಿಪುಳ ತಳಾಸ್ಥೂಳವಂತಂ ಗವಾಕ್ಷ
ಸ್ಫುರಿತಾಕ್ಷಂ ಪಕ್ಷಕೇತು[2]ಶ್ರುತಿ[2] ಧರಣಿಕರೇಣೂತ್ತಮಾಂಗಂ ತಪಂಗಂ ||೬೪||

ವ|| ಆ ತಪಂಗಮಂ ತೋಱತುಱುಂಬುಂ ಪೆಡೆಯಂ ಸ್ಫೋಱಿ ಕೊಂಡ ಖೇಟಕಮುಂ ಕಿಱ್ತಿ ಕರವಾಳುಂ ಭಯಂಕರಾಕಾರಮಾಗೆ ಪೂಸಿದ ಸಿರಿಖಂಡದ ಕಂಪುಂ ಸೂಡಿದ ಕೇದಗೆಯ ಸೊವಡುಂ ದೆಸೆದೆಸೆಗೆ ಸುಟ್ಟುರೆಗೆ ಗರುಡಧ್ವಜನೆಂಬ ಗರುಡನ ಬಾರಿಗೆ ವಧ್ಯಶಿಲೆಯನೇಱುವ ನಾಗಕುಮಾರನಂತೆ ವಿಷಮುಖನಪ್ಪ ಕಂಸಂ ಬಂದೇಱಲೊಡನೆ

ಕೊನರಿಸೆ ಕೇಶಪಾಶರುಚಿ ಕಱ್ತಲೆಯಂ ಮಣಿಭೂಷಣಾಂಶುಗಳ್
ಘನಕುಚಕೋಕಮಂ ಬಿಸಿಲನಾಗಿಸೆ ಚಂದ್ರಿಕೆಯಂ ತುಳುಂಕೆ ಲೋ
ಚನಮೊಡನೇಱಿ ನೂಪುರ ಝಣತ್ಕೃತಿ ನೆತ್ತರ ಪಾನಗೋಷ್ಠಿಗಾ
ತನ ಬಱಿಸಲ್ಪ ಯೋಗಿನಿಯರಂತೆವೊಲೇಱಿದುದಂಗನಾಜನಂ ||೬೫||

ಪೊಳೆದು ಪಳಂಚಿ ಮಿಂಚಿ ಮಣಿಮಂ[3]ಗಳ ದೀಧಿತಿಯಲ್ತು ತಾರೆ ಬಾ
ಳ್ವೆಳಗಿನ ಬಂಬಲೊಳ್ಸಕಳ ನಾಯಕದಾಯಕ ದಂಡನಾಥ ಮಂ
ಡಳಿಕ ಮಹಾಪ್ರಧಾನ ಮಹಿಪಾಳ ಕುಮಾರಕರೋಳಿಗೊಂಡು ಚಾ
ಪಳಿಗೆಯನೇಱಿದರ್ಮುಗಿಲನೇಱುವ ಖೇಚರರಾಜರಂದದಿಂ ||೬೬||

ಅನಿ[4]ಮೇ[4]ಷ ................... .............................. ........... ...
............ ...ರ್ಗೆಡೆಯಿಲ್ಲದಂತು ಗಗನಂ ಬಂದಿರ್ದನಿಂದ್ರಂ ಮಹಾ
ಧ್ವನಿಯಿಂ ನಾರದನಾಱಿ ತನ್ನ ತನುವಂ ತೀವಿರ್ದ ಕಂಸಾರಿ ಕೃ
ಷ್ಣನ ಚಾಣೂರನ ಮಲ್ಲಗಾಳೆಗವನಾಗಳ್ ನೋಡುವಾನಂದದಿಂ ||೬೭||

ವ|| ಅನ್ನೆಗಂ ನೆಲಕ್ಕಮಾಗಸಕ್ಕಂ ಕೀಲ್ಗೊಂಡಂತಪ್ಪ ದೀರ್ಘಾಕಾರಮುಮೇಱಿಂ ಟಾನೆಯನೊಂದು ಮಾಡಿದಂತಪ್ಪ ತೋರಮುಂ ಎರಡು ತೊಡೆಯುಂ ತೋಱಿ ತೆಮಳ್ದು ಬಿಗಿದುಟ್ಟ ನೇತ್ರಾವಳಿಯ ಚಲ್ಲಣಮುಂ ತಲೆಗೆ ಮೂದಲೆಯಾದ ಭೂರಿಭೂಜಶಿಖರಂಗಳ್ಗೆ ದಿಟ್ಟಿಯಾಗದಂತಿಟ್ಟ ಕತ್ತುರಿಯ ಬೊಟ್ಟುಂ ನೆಲನಂ ತಕ್ಕೈಸಲ್ತಕ್ಕಂತಪ್ಪ ತೋಳ್ಗಳುಂ ಮಿಡಿದ ಬೆರಲೊಡೆವಂತಪ್ಪ ಮುಷ್ಟಿಯುಮುರ್ಕಿಂಗೆ[5]ಮೆಚ್ಚ[5]ಲ್ನೆಱಿವಂತಪ್ಪ

---

1 ಣಂವಂ (ಜ) 2 ಶೃತಿ (ಚಜಟಡ) 3 ಡ (ಜ) 4 ಮಿ (ಚಟಡಣ) 5 ಮುಳ್ಳ (ಜ)

ಮುಷ್ಟಿಯುಂ ಸಱಿಯನುರ್ಚಿ [1]ಪ್ರೋಗಲ್ ಸಾ[1]ಲ್ವಂತಪ್ಪ ತಿಣ್ಪಿಂ ಮಿಂಚಿಂ ಮಾಡಿ ದಂತಪ್ಪನುಣ್ಪುಮನೆ ನೇರಿತಾಗಿ ಚೂರಿಸಿದ ಸಿರಿಖಂಡದ ತಿಮಿರುಮಿಕ್ಕಿದ [2]ಜವಿ[2]ಯ ದಂಡೆಯುಂ ಸೊರ್ಕಾನೆಯ ಕಯ್ಯ ಕರಿಯ ಪಿರಿಯ ಪಿಲ್ಲಣಿಗೆಯಮಗುರ್ವುಮದ್ಭುತ ಮಾಗೆ

ಕಡೆದಂತಪ್ಪಂಗಮುಂ ಕಂಡರಿಸಿ ಬೆರಸಿದಂತಪ್ಪ ಪಾಂಗಂಗಳುಂ ಮುಂ
ದಿಡೆ ಬಲ್ಪಿಂ ತುಂಬಿ ಬೀಳ್ಕೊಟ್ಟಿದ ಮಳಯಜದೊಳ್ಮಿಕ್ಕ ನಿಳಾಳಕಂಬೋಲ್
ಕುಡೆ ಚೆಲ್ವಂ ಚಲ್ಲಣಂ ಚಂಡಿಕೆ ಮಿಳಿರೆ ಭುಜಾಸ್ಫಾಳನಂಗೆಯ್ಯುತುಂ ಬೊ
ಬ್ಬಿಡುತುಂ ಗಂಡೇಱಿ ಬಂದಂ ಮದಗಜಗತಿಯಿಂದುರ್ವಿ ಚಾಣೂರಮಲ್ಲಂ ॥೬೮॥

ಮಲ್ಲನ ಗಂಡಸ್ಥಳಿಗಳ
ವಲ್ಲದೆ ಕವಿದತ್ತು ಕಿವಿಯ ಕತ್ತುರಿ [3]ಮದಮೊಂ[3]
ದಲ್ಲುಗುವಂತಿರೆ ತನ್ನೊಳ್
ಪಲ್ಲಟಿಸಿ ಕರೀಂದ್ರಕಾಯ[4]ಬಲಮುಂ ಚಲ[4]ಮುಂ ॥೬೯॥

ನಗವೆಂಪೆ ಮೊಗಸಿ ಮುತ್ತುವ
ಮುಗಿಲಂತಿರೆ ಮಲ್ಲನಿಕ್ಕಿದಣ್ಪಿನ ಕಂಪಿಂ
[5]ದ[5]ಗಿದಗಿದು ಮುಸುಱಿ ಮುತ್ತಿದು
ವಗಣಿತಮತಿ ಒಹಳ ಮಧುವ್ರತಪಟಳಂ ॥೭೦॥

ಐರಾವಣದಯೆ ಪೆಱಗನೆ
ವಾರಣಗಣವಾಸೆಯಿಂದೆ ಬರ್ಪಂತಿರೆ ಚಾ
ಣೂರನ ಪೆಱಗನೆ ಮುಷ್ಟಿಕ
ಧೀರೋದ್ಧತ ಮುಖ್ಯರಪ್ಪ ಮಲ್ಲರ್ವಂದರ್ ॥೭೧॥

ವ॥ ಬಂದು ಕಡಿತಮುಂ ಬಳಸಿಕೊಂಡಿರ್ಪ ಜೂದುಗಾಱರಂತೆ[6]ಯಖ್ಖ[6]ಡಮಂ ಬಳಸಿಕೊಂಡು ಕುಳ್ಳಿರಲೊಡನೆ

ಎಡೆವಿಡದೆ ಮಲ್ಲಗಳನಂ
ಕುಡಿಮಿಂಚಿನ ತಟ್ಟೆ ಸುತ್ತಿದಂತಿರೆ ಬಾಳುಂ
ಕಡಿತಲೆಯುಂ ಹಲಗೆಯುಮವು
ಕಿಡಿಗುಟ್ಟೆ ಪಳಂಚೆ ಸುತ್ತಿದರ್ಕೂರಾಳ್ಗಳ್ ॥೭೨॥

---

1 ಸಾ (ಚಟಡಣ) 2 ವಿಜ (ಟಣ) 3 ವ.ದವೊ (ಚಡಣ) ಪೊದವು (ಟ) 4 ವುಂ ಚಲಕರ (ಚಟಡಣ) 5 ನ (ಚಟಡ) 6 ಯಸ್ಥ (ಚಟಡ)

ಶರನಿಧಿಯ ತೆರೆಗಳುಂ ದಿ
ಕ್ಕರಿಕುಳಮಂ ಬಳಸಿದಂತೆ ನೆಲನಂ ನೆಲೆಯೊಳ್
ತುರಗದಟಮುಂ ಮಧೇಭೋ
ತ್ಕರ[2]ಮುಂ[1] ಬಳಸಿದುವು ಮಲ್ಲರಂಗಮನಾಗಳ್ ॥೭೩॥

ವ॥ ಅಂತು ಕಂಸಂ ಕೃಷ್ಣಂಗೆ ಕೆಡೆವಂದುದಂ ಕಂಡು ವಸುದೇವಂ ಬಲದೇವಂಬೆರಸು ಚಾತುರ್ದಂತ ಬಲಮಂ ಕೂಡಿಕೊಂಡು ನಿಯುದ್ಧರಂಗದ ಕೆಲದೊಳ್ ಯುದ್ಧಸನ್ನದ್ಧರಾಗಿರ್ದಾಗಳುದ್ಧತನಾಗಿರ್ದ ಕಂಸಂ ಪಡಿಯಱನಂ ಕರೆದು ಕಿವಿಯೊಳ್ ಪರ್ಚುವುದುಮಾತನಂತೆಗೆಯ್ವೆನೆಂದು ಪೋಗಿ ಯಶೋದೆ ಗೆಂದಂ ನಿನ್ನ ಮಗನೆಲ್ಲಿಗಾದೊಡಂ ಕಾಳೆಗವೆಂದೊಡೆ ಪೂಣಿಗನಾಗಿ ಪಱಿವಱಿ ಯಪ್ಪನ ವ್ಯಸನಮುಂ [2]ಬೆಸನಮುಳ್ಳೊಡೆ ಬಂದು ಚಾಣೂರಮಲ್ಲನೊಳ್ ಮಲ್ಲ ವೋರ್ದು ಪರ್ವಕ್ಕೆ ನೆರೆದರಸುಮಕ್ಕಳ ಕಣ್ಗೆ ಪರ್ವಮಂ ಮಾಡಿಕ್ಕೆಂದು ಕಂಸಮಹಾ ರಾಜಂ ಬೆಸಸಿಯಟ್ಟಿದನಿವೆ ತಿವುರುಂ ತಿಳಕಮುಂ ಬೆರಸುತ್ತೂರಿಸಿಕೊಂಡು ಬರ್ಕೆ ಕೊಳ್ಳಿಮಾತನೆಲ್ಲಿದನೆಂಬುದಂ ಯಶೋದೆ ಮುಗುಳ್ನಗೆ ನಗುತಿಂತೆಂದಳ್

ಎನ್ನ ಮಗನಾವ ತಿವುರಿಂ
ಮುನ್ನಿಕ್ಕಿದನಣ್ಣ ಶಕಟನರ ಪೂತನಿಯಂ
ಪನ್ನಗನಂ ಯಮಳಾರ್ಜುನ
ರನ್ನರಕ[3]ನೆನವನಿನಧಿಕನೇ ಚಾಣೂರಂ ॥೭೪॥

ವ॥ ನಿಜದಿಂ ಕೂರ್ಪುಳ್ಳನುಮಂ ಕತ್ತರಿವಾಣಿಯುಮಂ ಮನೆಯಲೇಕೆ ಸಿಂಗಮಾನೆಯಂ ಮುಱಿವಲ್ಲಿಗಾವಭ್ಯಾಸಮಂ ಮಾಡಿದುದು ಮುರಾಂತಕ[4]ನಂ ಅಂತಕನುಂ ಕೊಲ್ವುದನಿನ್ನು ಕಲ್ತಪರಿ ಕೇಳಿಮೆನ್ನ ಮಗಂ ನೀರೊಳ್ಳಾನಂ ಬಿಸಿಲೊ ಳ್ಬಾಡಂ ಬೆಂಕಿಯೊಳ್ಬೀಯಂ ಜವನ ಕಯ್ಯೊಳ್ ಸಾಯಂ ಏನುಂ ಬೇಡೊಡಗೊಂಡು ಪೋಗಿಮೆಂಬನಿತರ್ಕೆಯಂಬುಜೋದರಂ ಬಂದಬ್ಬಾ ಹಸಿದೆನೆಂಬುದುಂ ಯಶೋದೆ ಯಿಂತೆಂದಳ್

ಸಮೆದೆಂ ಮೊಸರಂ ಬಾಟಟ್ಟ್ಮಾಸ
ರುಮನಾಂ ಘನವಾಗಿ ತಂದೆನಿಕ್ಕಿದಪೆಂ ಲಂ
ಚಮನೆನ್ನ ಮಲ್ಲ ಚಾಣೂ
ರಮಲ್ಲನಂ ಮುಱಿದು ಬಂದು ಹಸಿವಂ ಮುಱಿಯಾ ॥೭೫॥

1 ವಂಂ (ಚಟ) 2 ಬ್ಯ (ಚಟ) ವ್ಯ (ಡಣ) 3 ಲಿ (ಚಟ) ರಿ (ಜ) 4 ನಂ (ಜ) ನುಂ ಅಂ (ಣ)

ವ॥ ಅನಿತರ್ಕೆ ನಿನ್ನ ಪೊಡಪುರ್ಗಂ ಪಸಿವುಂ ಕೂರಿತಕ್ಕುವೆಂಬುದುಮಕ್ಕಟಾ ! ಸಗ್ಗಮೆ ಕಾಳೆಗವುಳ್ಳೊಡೆ ಕೊಟಿಳ್ಳಿವುದೆಂದು ಪಡಿಯಱಿರನೀ ಬಂದೆನೆ ನಡೆಯಿಮೆಂದು ಮುಂದೆ ಕಳಿಪಿ ತಾನುಟಿಾಯ ತನ್ನೋರಗೆಯ ಗೋಪರೆಲ್ಲರಂ ಮಲ್ಲವಸದನಂಗೊಳಿಸಿ ತಾಯ್ಗೆಱಗಿ ಪೊಡೆವಟ್ಟನಂ ಯಶೋದೆ ವೀರಶ್ರೀಗಾಣ್ಮನಾಗೆಂದು ಪರಸೆ ಪರಕೆಯನಾಂತು ಗೋವಳರೊತ್ತುವ ತಿತ್ತಿರಿಗಾಳೆಯ ತೂತ್ಕಾರಮುಮೂದುವ ಕೊಟಿಲ ಸರನುಂ ಪಿಡಿವ ಕೊಂಬಿನ ನಿನದಮುಂ ಪೊಯ್ವಕ್ಕವದ್ದಳೆಯ ದನಿಯುಂ ಊದುವ ಱುಂಚೆಯ ರವಮುಂ ಬಾರಿಪ [1]ಜಂಕ[1]ರವುಂ ರವಳಿಯಂ ನೆರಪೆ ನರಪತಿಯ ಪುರಕ್ಕಾಗಿ ನರಕಮಥನಂ ಮಸಗಿ ಬರ್ಪನನ್ನೆಗಂ [2]ಕಂ[2]ಸನಿಂ ಮುಂದೊಂದು ಕಾಲಮು ಪಕೃತನಾದ ಮಧುವೆಂಬ ದಾನವನವನ ಬೆಸದಿನಸಗನಾಗಿ ವಿಸರುಹೋದರನನಸಗವೊ[3]ಯ್ಲಿನು[3]ಯ್ವೆನೆಂದು ಬಂದೊಗೆಯುತ್ತುಮಿರ್ಪ ಮಡಿವಳನ ಮುಂದಣ ಮಡಿಯುಮಂ ತನ್ನೊಡನೆಯ ಗೋವಳಿಗರುಟ್ಟ ಮೈಲಗೆಯುಮಂ ಮಧುಸೂದನಂ ಕಂಡು ಸಮೀಪಕ್ಕೆ ವಂದು

ಒಗೆದೊಗೆದು ಮುರಿದು ಜಗುನೆಯೊ
[4]ಳಗಲೊಗೆದುಂ[4] ಓಂಡುತಿರ್ಪ ರಜಕನನೀ ಸೀ
ರೆಗಳನುಡಲೀವುದೆಮಗೆನೆ
ಜಗಳಂ ಜಕ್ಕುಲಿಸಿದಂತೆ ನಕ್ಕಂ ರಜಕಂ ॥೭೬॥

ವ॥ ನಕ್ಕು ರಜಕಂ ಸೀರೆಗಳಂ ಕಂಸದೇವನುಡುಗುಮೆಂದಾತನ ಬೀಱುಡೆಯ ವರುಮುಡುಗುವಲ್ಲದೆಡೆಯ ಕಡೆಯ ಬಡವರುಡಬಾರದೆನೆ ಮುಕುಂದನಿವನಂದಮಕ್ಕುಮೆಂದು ಮತ್ತಂ ಕೇಱಿ ಬೇಡೆ

ಅಣ್ಣ ಟಿಯದರಸರುಡುವೀ
ಬಣ್ಣಂಗಳನುಡ[5]ಲ[5] ಬಯಸಿದಣ್ಣನ ನೊಸಲೊಳ್
ಕಣ್ಣುಂಟೆ ತೋ[6]ಱಿ[6] ನೊಸಲೊಳ್
ಕಣ್ಣುಳ್ಳನುಮಾಱಿ[7]ನಾರ್ಪ[7]ಡುಡುವನೆ ತೊವಲಂ ॥೭೭॥

ವ॥ ಎನೆ ವನಮಾಳಿ ಮಾಳಾಪ್ರಪಂಚಂ ಬೇಡ ಬಿಡುಬಿಡೆಂದು ರಣರಂಗಾರ್ಥಿಯಾಗಿ ರಂಗಕಾಱನ ಕಯ್ಯ ಸೀರೆಯಂ ಸೆಳೆಯಲನುಗೆಯ್ಯಲೊಡನೆ

---

1 ಜಂಕರದ ಜಿಂಕ (ಜ) ಚಿಂಕಾ (ಡ) ಚಿಂಕಿ (ಙ) 2 ಮುಂದೆ ಕಂ (ಜ) 3 ಯ್ಲುವೊ (ಚಜಟ) ಯ್ಲಿಪೊ (ಡ) 4 ಳೊಲೆದೊಲೆದು (ಜ) ಳಗಲೂಗೆದಾಂ (ಡ) 5 ಲು (ಚಟಡ) 6 ಱ (ಜ) 7 ಮಾರ್ಪ (ಚಡ) ನಾರ್ಪೊ (ಙ)

ಕಟ್ಟಣ್ಮು ಕಾಱನಿವನಿ
ನ್ನುಟ್ಟಲ್ಲದೆ ಮಾಣನುಡಿಸುವೆಂ ಗಡಮಿವನಾ
ನುಟ್ಟಪೆನೆಂಬನ ಮುನ್ನು
ಳ್ಳುಟ್ಟುದುಮಂ ಸುಲಿದು ದೇಸೆ[1]ಯಂ[1] ಕಾಸೆಯುಮಂ ॥೭೮॥

ವ॥ ಇವಂ ಮುಟ್ಟಿದೊಡೆ ಕಂಸದೇವನಾಣೆಯೆನೆ ನೀ ಕುಡದೊಡೆ ಕಂಸದೇವ ನಾಣೆಯೆಂದ[2]ಪೀ[2]ತಾಂಬರಂ[3]ಗಂ[3]ಬರನೆ ರಜಕನಂಬರಂಬರಂ ತುಂಬುರಗೊಳ್ಳಿಯಂತೆ ಪಿಡಿದಿಂತಪ್ಪ ಪಿತಗನನೆಲ್ಲಿಯುಂ ಕಾಣೆನಾಣೆಗೆ ಮಾಱಾಣೆಯಿಟ್ಟಪಂ ನಾಯ ಬಾಯ ಸೀರೆಯಪ್ಪೊಡೆ ಸೀರೆಯತ್ತ ಸಾರೆಂದು ಮುಂದೀಡಾಡಿ

ಉಡುವೊಡುಡು ಪೇೞ್ವಿನರಸರ
ಮಡಿವರ್ಗಮಿವುಟ್ಟುಕೊಳ್ವ ಕಲಿಗಳ ಕಾಲಂ
ಪಿಡಿದಡಿಸಿ ಕಂಸದೇವನ
ಮಡಿವಳನೊಗೆದಾಱಿ ಪರಪಲಿಂ ಕಲ್ತಪನೇ ॥೭೯॥

ವ॥ ಎನೆ ಕೃಷ್ಣಂ ಕಿಱುಮುನಿಸು ಮುನಿದು

ಇದು ಸತ್ಯಮೊಗೆವ ಕಯ್ಯಾ
ವುದು ತೋಱಿಂದಸಗನೆರಡು ಕಯ್ಯಂ ಮುಱಿದಿ
ಕ್ಕಿದನೂರ ಸೀರೆಗಸಗಂ
ತಡೆವಡೆದನೆನಿಪ್ಪ ನಾಡ ನುಡಿ ಪರೆವಿನೆಗಂ ॥೮೦॥

ವ॥ ಮುಱಿದಿಕ್ಕಿ ಸು[4]ಬ್ಬ[4]ರಸೂಱಿ[5]ಯಾ[5]ಗೆ ಮಡಿವರ್ಗಮಂ ಗೋವರ್ಕಳ್ಗೆ ಸೂಱೆಗೊಟ್ಟಸಗವೊಟಱಿಯುಂ ಪುಯ್ಯಲಿಡಿಸೆ ಪೊಟಲಂ ಪುಯ್ಯಲಿಡಿಸಲೆಂದು ಪುರು ಷೋತ್ತಮನಾ ಪುರದ ಗೋಪುರಮಂ ತಾಗೆವರೆ ತೊಟ್ಟನೆ ಕಟ್ಟಿದಿರೊಳ್

ಮುಗಿಲಂ ಮುಟ್ಟಿದ ಕಾಳಕಾಯ ಬಲದಿಂದರ್ಕಂಗೆ [6]ಕೋಡಿ[6]ಟ್ಟ ಕೋ
ಡುಗಳಿಂ ಬೆಟ್ಟದ ಬೀಟಲಂತಲೆವ ಕ[7]ಯ್ಯಿಂ[7] ಪೃಥ್ವಿಪಾತಾಳಮುಂ
ಪುಗೆ ಗಾತ್ರಾಪರಮಿಟ್ಟು ಮೆಟ್ಟುವಳವಿಂ ಸಪ್ತಾರ್ಚಿಯಂ ಸೂಸುವ
ರ್ಚಿಗಳಿಂದೇಂ ಕೆದಱುತ್ತೆ ಬಂದುದೊ ಮದಸ್ತಂಬೇರಮಂ ಬೇರಮಂ ॥೮೧॥

---

1 ಯುಂ (ಜಡ) 2 ಪೀ (ಜಡ) 3 ಗಳಂ (ಜ) 4 ಚ (ಜ) 5 ಯೋ (ಚಟಡಣ) 6 ಬಟ್ಟ (ಜ) 7 ಯ್ಯಂ (ಚಟಡಬ)

ಕಕುಭಂ ಮುಂಗಾಲ್ ಕ[1]ಕು[1]ದ್ಮತ್ವತಿ ವಿಷಮ ವಿಷಾಣಂ ರದಂ ಪೂತನಾ ತುಂ
ಗಕುಚಂ ಕುಂಭಸ್ಥಳಂ ಕಿಟ್ಟಿ್ಟಪನಿಧರವೊಡಲ್ಕಾಳಿಯಂ ಸ್ಥೂಳಹಸ್ತಂ
ಶಕಟಂ ಪೃಷ್ಠಪ್ರ[2]ದೇಶಂ[3]ಹರಿಖುರಪರಿಕೋಪಾಗ್ನಿ ಕಣ್ಣುಗ್ರ ವಿದ್ವೇ
ಷಕವೊರ್ಮೆಯ್ಯಾಗೆ ಮತ್ತಂ ಹರಿಗೆ ಮುನಿದು ಬರ್ಪಂತೆ ಬಂದತ್ತಿಭೇಂದ್ರಂ ||೮೨||

ಜಗಳದಿಭ ಮಾಡುವಂತೆವೊ
ಲುಗೆ ನೆತ್ತರ್ಕುತ್ತಿ ಕೆಡಪೆ ಮದದಾನೆಗಳಂ
ಮೊಗಮಿಕ್ಕಿಯಾನೆಯಿಱಪೆಗೆ
ಮೊಗಮಿಕ್ಕಿದ ತೆಱದಿನಿರ್ದುದೇಂ ಕರಿ ಪಿರಿದೋ ||೮೩||

ಅಂಗಕ್ಕೆಯ್ದದು ಗಗನಂ
ತುಂಗರ[5]ದ[5]ಕ್ಕೆಯ್ದದಿಱಿಯಲಗನಿಕರಂ ಧೀಂ
ಕಿಂಗೆಯ್ದದು ಧಾರಿಣಿ ಮುಳಿ
ಸಿಂಗೆಯ್ದದು ಮೂಱು ಲೋಕಮಾ ಮದಗಜದಾ ||೮೪||

ವ|| ಆ ಕೈಟಭನೆಂಬ ಕಟ್ಟಾನೆ ಮುನ್ನಮೆ ತಾಂ ರಕ್ಕಸನಪ್ಪುದಱಿಂ ಮಾನಿಸರನೆ ಕಡಿಗೊಂಬುಗೊಂಡುಮೆಂತಾಂ ಮೆಚ್ಚಿದ ಕೂಲಿಗಡಿಯನಾಗಿ ಬಿಟ್ಟ ಕಣ್ಣುಂ ಬಿಗಿದ ಮೊಗಮುಂ ಮನದ ಮುನಿಸುಂ ಮೆಯ್ಯ ಮುಱುಕಮುಂ ಪ್ರತಿಮಾನದ ಪೆಣನುಮಣ ಲೊಳಡಸಿದಾನೆಯಡಂಗುಂ ಕೋಡ ಕಯ್ಯ [4]ಪೋ[4]ೞಿಪಣೆಯ ನೆತ್ತರನೊಂದು ನಿಮಿಷ ಮುಂ ಕುಂದಿಸದ ಕ್ರೋಧಿನಿಯೆಂಬಯ್ದಾನೆಯ ಮದದೊಳ್ ಮದಕ್ಕೆ ವಂದ ಕೀನಾಶ ನಂತೆ ಮಾಮುಸಕಂ ಮುಸಗಿ ಬರೆ ಮುಂದೆ ಪರಿತಪ್ಪ ಪರಿಕಾಱರ್ ರಾಮಕೃಷ್ಣ[5]ರಂ[5] ತೊಲಗು ತೊಲಗೆನೆ ಗೋಪರೇಕಣ್ಣ ಕಣ್ಣ ತಲೆಯೊ[6]ಳ್ತೊ[6]ಲಗುವಂತಾಗಿ ಕಟ್ಟಾನೆಗೆ ಕಿಟ್ಟಳಮಾದುದೇಮಾನೆಯು[7]ಮಿಡಿ[7]ರ್ವಪ್ಪುದನಾರ್ಪಡೆವರಿನೆ ಪರಿಕಾಱ[8]ರೆ[8]ಗೊರ್ವಂ [9]ಗೊ[9]ರ್ವಿದ ಗೋವಳಿಗರ ಗರವಂ ಕಳೆದಾನೆ ತಾನೆ ತೊಲಗಿಸಿದಪುದು ನಮ್ಮಚ್ಚಿಗ ಮೇಕೆಂಬನಿತು ಬೇಗೆಯುಂ ಅಂಬುಂ ದೃಷ್ಟಿವಿಷಮುಂ ದಿಷ್ಟಿಯ ಮುಖಮುಂ ಮುಷ್ಟಿಯುಮಪ್ಪ ಮದದಾನೆಯೊಳ್ ಕೃಷ್ಣಂ ಕಯ್ಯಿಕ್ಕಿ ಕರಿಯ ಕಯ್ಯಂ ತನ್ನ ಕಯ್ಯ ಪವಣುಂ ತ್ರಾಣಮುಮಂ ಪಡಿಯಿಟ್ಟುನೋಟ್ಪಂತೆ ಪಿಡಿದು ಪೊಣರ್ದು ಬಣಿವಾವಿನಂತೆ ಪೆಣೆದ ಕಯ್ಯ ಕಾಲ ಕೊಂಬಿನ ಕುಂಭಸ್ಥಳದೆಡೆಗಳೊಳ್ ಬೆಣ್ಣೆದೊಡೆದ ಬಟ್ಟನಂತೆ ನುಣ್ಚಿ ನುಸುಳ್ದು ನೆರೆದು ನೋಟ್ಪರ ಕಣ್ಣಾರೆ ತನ್ನ ಮನಮಾರೆ ವಿನೋದಕ್ಕಾನೆ

---

1 ಕೆ (ಚಜಟಡ) 2 ದಂಕಂ (ಚಟಿದಣ) 3 ಪ (ಚಟಡಣ) 4 ಪೊಸಂ (ಜ) 5 ನಂ (ಚಜಟಡ) 6 ಳೊಳ (ಜ) 7 ಸಂದು (ಚಟಿಣ) ಸಂದು (ಡ) 8 ರೊಳೂ (ಚಣ) ರಳ (ಟ) ರ (ಡ) 9 ಕೊ (ಣ)

ಯೊಳೊಡಕೊಂಡಲಿಕ್ಕಿ ಲ[1]ಕ್ಕೆ[1]ತೆಱದಿಂ ಚಾಣೂರಮಲ್ಲನೊಳ್ ಮ[2]ಲ್ಲಿಕ್ಕುವುದಕ್ಕೆ ಶ್ರಮ
ಮಂ[2] ಮಾಡುವಂತೆ ಗಜಮಲ್ಲನೊಳ್ ಪ್ರತಿಮಲ್ಲಂ ಮಲ್ಲವೋ್ದುರ್ ಸಿಂಹನಾದದಿನಾರ್ದು

ಒತ್ತಿದೊಡೊತ್ತಿ ಪತ್ತಿದೊಡೆ ಪತ್ತಿ ಪೊರಳ್ಚಿದೊಡಂ ಪೊರಳ್ಚಿ ಕಾ
ಯ್ದೆತ್ತಿದೊಡೆತ್ತಿ ಕುತ್ತಿದೊಡೆ ಕುತ್ತಿದ ಕೊಂಬನೆ ಕೂಂಕೆ ಕು[3]ತ್ತಿ[3] ಕೂ
ರ್ಗತ್ತಿಗೆಯಂ ಕನಲ್ದೊಱಯಿನುರ್ಚುವವೋಲ್ ಮೊ[4]ಗ[4]ದಿಂದಮುರ್ಚೆ ಮು
ನ್ನೆತ್ತಿ ಪಿಸುಳ್ದ [5]ಮುತ್ತ[5]ನುಗೆ ಮತ್ತಿಭಮಂ ಹರಿ ಪೊಯ್ದುರುಳ್ಚಿದಂ ||೮೫||

ವ|| ಕಮ್ಮಱನಂಬು ಕಮ್ಮಱಂಗೆಂಬಂತೆ ಬಟ್ಟ ಉತ್ತರಬಾ[6]ಳಂ[6]ತೆ ತನ್ನ ಕೊಂಬೆ
ತನಗೆ ಘಾತಕಮಾಗೆ ಸೊವಡಿಂಗಮುಗ್ಗಿಸಿ ತುಂಬಿವೆರಸು ಕೂಂಕೆ ಬಂಕೆ ಬಿ[7]ಟ್ಟು[7]
ಕುವಳಯಾಪೀಡನಂ ಕುವಳಯಾಪೀಡನಂ ಮಾಡಿ

ಮತ್ತಗಜೇಂದ್ರದೊಳ್ಪೊಣರ್ದು ಪೋರೆ ಮದಂಬೊರೆದಂಗಯಷ್ಟಿಯೊ
ಳ್ಕತ್ತುರಿಯಣ್ಪಿನಂತೆಸೆಯೆ ನೆತ್ತಿಯ ಸಿಂಧುರಮುಂ ಲಲಾಟದೊ
ಳ್ಪತ್ತಿ ಲಲಾಮದಂತಮರೆ ಕುಂಭಿಯ ಕೊಂಬರುಣಾಂ ಕವುಂಕುಳೊ
ಳ್ಕತ್ತಿದ ಪೊನ್ನ ಪಿಲ್ಲಣಿಗೆಯಂತಿರೆ ಕೈಟಭಮಲ್ಲನೊಪ್ಪಿದಂ ||೮೬||

ವ|| ಆ ಗಜಮಲ್ಲನೋಳ್ಪೋರ್ತಂಗೊಂಡುದೆ ಮಲ್ಲಸಿಂಗರಂಗೆಯ್ದಂತಾಗೆ ಗ[8]ಲ್ಲಂ
ಗೊಂಡು[8] ಜೀವವಿರ್ದಂದದೊಳಾ ದ್ವಿಪದ ಪಿಂಗಾಲಂ ಪಿಡಿದು ಪಂದಿಯನೆಟ[9]ವಂತೆಟ[9]ದು
ಕೊಂಡು ಬಂದು ಮೂಱುಂ ಲೋಕಮುಮೊಂದೆಡೆಗೆ ವಂದಂತಿರ್ದ ಮಲ್ಲಗ[9]ಜ[9]ದ ನಡು
[10]ವ[10] ತಂದಿಡೆ ತವಗದ ಮೇಲಿರ್ದ ಕಂಸಂಗೆ ಹಾಸ್ಯಗರ್ಭಮಪ್ಪ ಗಂಡಗರ್ವದಿಂ
ಕೃಷ್ಣನಿಂತೆಂದಂ

ಅವಧರಿಸು ದೇವ ನಿನ್ನಂ
ತೆವೊಲಾರ್ಮೆಯ್ಯಱಿಯವರಸರಾರಿರ್ದಾರಿದಂ
ನವನವದಾವಸ್ಥಿತಮಿ
ನ್ನವು ಮದಗಜಮೊಳವೆ ಕಾಡೊಳಂ ಕಂ[11]ಜ[11]ದೊಳಂ ||೮೭||

ಬಳವದ್ದಂತಿಯನಿಂತುಪೇಕ್ಷಿಸುವರೇ ಬಿದ್ದಿರ್ದುದೀ ದಂತಿ ಭೂ
ತಳದೊಳ್ ತೋಱುವೆನೆಂದು ತಂದೆನಿದನಾಂ ದೇವರ್ಗಿದೆನ್ನೋಲಗಂ
ಗಳಮೋ ಗಾಳಿಯೊ ಸ[12]ಪ್ತ[12]ಮೋಗ್ರಮುದಮೋ ಕಾಷ್ಠಾಗ್ನಿಯೋ ಕೂಟಪಾ
ಕಳಮೋ ತೋಱಿಸು ವೈದ್ಯರಂ ಕರೆದಲೇ ಕಂಸಾವನೀಪಾಳಕಾ ||೮೮||

1 ಕ್ಕಿ (ಚಟಡಣ) 2 ಲ್ಲಿಕ್ಕುರ್ದಕ್ಕೆ ಸವಂ ಮಾಡುವಂತೆ ತನ ನಿಲ್ಲನೊಳ್ಮಲ್ಲಿಕ್ಕುರ್ವುದಕ್ಕೆರ್ ಸೇವಂ (ಜ) ಲ್ಲ ಕೂಟಕ್ಕೆ ಶ್ರವಮುಂ ಮಾಡುವಂತೆ ಗಜಮಲ್ಲನೊಳ್ಮಲ್ಲಿಕ್ಕುದಕ್ಕೆ ಶ್ರಮವಂ (ಟ) 3 ಕ್ಕಿ (ಜ) 4 ದ (ಚಟಡಣ) 5 ಯಾತರ್ (ಚಟಡಣ) 6 ಳದಂ (ಜ) 7 ರ್ದು (ಚಟಡಣ) 8 ಸ್ಲಂ (ಚಟಡಣ) 9 ಳ (ಜಡ) 10 ವೆ (ಜ) 11 ಬ (ಜ) 12 ರ್ಪ (ಚಟಡಣ)

ವ॥ ಈ ದಂತಪೆಟ್ಟಿತರ್ಪಲ್ಲಿ ಕಯ್ಯ ಬಾಯಿಗೆ ಬಂದುದಿದಂ ದೇವರವಧಾರಿಸಿ ಭಂಡಾರದೊಳಿರಿಸುವುದೆಂದೆಳವೆಱಿಯನೀಡಾಡುವ [1]ಸ್ಯಂ[1]ಹಿಕೇಯನಂತೆ ಮುಂದೀಡಾಡುವನಿತಕ್ಕೆ ಕರಿಯ ಕಯ್ಯುಂ ಕಾಲುಮಂ ಬಡಿದಸುವಂ ಕಳೆಯೆ ಕಾಳಿಯ ಮಥನ ನಕ್ಕಟಾ ಸತ್ತುದೀಯಾನೆಯಾನೆಯನಡ್ಡದೆಗೆದಂತಿರ್ದೀ ಚಾಣೂರ ಮುಷ್ಟಿಕಾದಿಗಳಪ್ಪ ಮಲ್ಲರಿಂದಮೆಟ್ಟಿದೀಡಾಡಿಂ ಪೋರ್ತಕ್ಕೆ ಪೊತ್ತುವೆಳದಪರೆನೆ ಮಲ್ಲರೆಲ್ಲರ ಮೊಗನೊಯ್ಯನಾದುದಿನಿಸಱಿಂ ಕಂಸಂ ಗಂಡಗರ್ವದೊಡನೆ ವಿಗುರ್ವಣೆಯನೆ ತನಗೆ ತಾನೆ ಕಾರ್ಮುಗಿಲಂತೆ ಕರಗಿ ಪೋಗಿ

ಗಜಮದವಿಲಿಪ್ತನಿಜಗುರು
ಭುಜಯುಗದೊಳ್ ಪಾಯ್ದ ಮಧುಪಮಾಳಾಯುಗದಿಂ
ವಿಜಯೋತ್ಸುಕನಾಗಿ ಚತು
ರ್ಭುಜನಾದವೊಲಿರ್ದನುಪನಿಯುದ್ಧಂ ಕೃಷ್ಣಂ ॥೮೯॥

ವ॥ ಇರ್ಪುದುಮೇವಯಿಸಿ ಕಂಸಂ ಕುಂಚಮಂ ಬೀಸುವುದುಂ

ಎಲೆಯಿತ್ತಿತ್ತಲಿದಿರ್ಚಿದಿರ್ಚು ಕಡುಕೆಯ್ ನೀಂ ಬೇಗವಣ್ಮಾಣ್ಮು ಮೆ
ಯ್ಗಲಿಯಾಗಾಗು ಕೊಲಲ್ಕೆ ನಿನ್ನ [2]ಪವನಂ[2] ಸುತ್ತಿತ್ತು ಮುತ್ತಿತ್ತು ಪೆ
ಣ್ಗೊಲೆಯೇನೀಗುಮೆ ಪೋಗ[3]ಲುಣ್ಣ[3]ದುರಿದ್ಯೆ ಮಣ್ಣಾಗಲೆಂದೆನ್ನ ತೋ
ಳ್ವಲೆಯೊಳ್ ಸಿಲ್ಕಿದೆಯಿಂದೆ ಸತ್ತೆಯೆನುತುಂ ಚಾಣೂರನೊಟ್ಟೈಸಿದಂ ॥೯೦॥

ವ॥ [4][ಒಟ್ಟೈಸೆ] ಮುಕುಂದಂ[4] ಮುಗುಳ್ನಗೆ ನಗುತ್ತುಮಟ್ಟೆ ತಿಂಬ ದೈವಕ್ಕೆ ಪಾಟಿಂಬಟ್ಟೆಯೆಂದೇಟಿ[5]ಟುಗೊಂಡು ಸಪ[5]ರದಿಂದಪ್ಪಳಿಸಲೊಡನೆ

ಮುಱಿವನ್ನಂ ಮೋದಿ ಮಾರ್ಮಲ್ಲರ ಗುರುಭುಜಮಂ ಶೇಷನಂ ಧಾತ್ರಿ ಮುಂದ
ಣ್ಗೆಱಪನ್ನಂ ಪೊಯ್ದು ಪಾಯ್ದಪ್ಪಳಿಸಿ ಶಿಖರಶೃಂಗಂಗಳಂ ಮಚ್ಚರಂ ಬೇ
ಡೆಱಿಗಿಂ ನೀವೆಂಬವೊಲ್ ಡೊಕ್ಕರಿಸಿ ದಿಗಿಭಹಸ್ತಂಗಳಂ ಮೂಜಗಂ ಬ
ಳ್ಕುಱಿ ಪರ್ವಿತ್ತುರ್ವಿ ವೈಕುಂಠನ ವಿಜಯಭುಜಾಸ್ಫಾಳನಾಭೀಳನಾದಂ ॥೯೧॥

ಉಭಯವ್ಯೂಹಭವನ್ಮಹಾಕಳಕಳಂ ದೌವಾರಿಕೋ[6]ದ್ಘುಷ್ಟ[6]ಮ
ಲ್ಲಭುಜಾಸ್ಫಾಳನನಿಸ್ವನಂ ನೃಪಸಭಾಕೋಳಾಹಳಂ ದೇವದುಂ
ದುಭಿನಾದಂ ಮೊಳಪೆಲ್ಲ ಮಲ್ಲವಱಿಯೊಂದಿಂದೋಳಮೊಕ್ಕೆಕ್ಕೆಯಿಂ
ನಭಮಂ ದಿಕ್ಕುಮನೊಕ್ಕಲಿಕ್ಕಿ ಪೊಣರ್ದರ್ ಚಾಣೂರಚಕ್ರಾಯುಧರ್ ॥೯೨॥

---

1 ಸಿಂ (ಜ) 2 ನೇಕತಾಂ (ಜ) 3 ಲಣ್ಮ (ಜ) 4 ಉದ್ದಯಿಸೆ (ಜ) ಉರಲಿಸಿ ಮುಕುಂದನಪಂ (ಚಟಜ) 5 ಡುಕೊಂಡು ಸಪ್ಪಸ (ಜ) 6 ದ್ಘುಟ್ಟ (ಜ)

ತಳಗಳ ಕೋಳ್ ಛಟಚ್ಚಟಿನೆ ಮಲ್ಲರ ತೋಳ್ಗಳ ಕೋಳ್ಕರಂ ಫಳಿಲ್
ಫಳಿಲೆನೆ ಥಟ್ಟು ಪೊಟ್ಟೆನೆ ಘನೋರುಯುಗಂಗಳ ಕೋಳ್ಕರಂಗಳಿಂ
ಬಳಸುವ ಬೇಡಿಕೊಳ್ವ ಪಿಡಿಪೀವ ಮರುಳ್ಚುವ ನುಣ್ಚುವಾಸೆಯೊಳ್
ಸೆಳೆವೆಡೆ [1]ಸಾ[1]ರ್ವ ಪೋರ್ವಳವಿಯೊಪ್ಪಿದುದಿರ್ವರ ಹಸ್ತಯುದ್ಧದೊಳ್ ||೯೩||

ಉತ್ತಮಸತ್ವದಿಂ ಪಿಡಿದು ಚಾಣುರನಂ ನೆಲಕಿಕ್ಕಿ ಕೃಷ್ಣನಾ
ಳ್ದೊತ್ತಿದೊಡೊತ್ತಿ ಧಾತ್ರಿ ರಸೆಗರ್ದುದು ರಕ್ಕಸನೊಯ್ದ ಧಾತ್ರಿಯಂ
[2]ತೆ[2]ತ್ತಿದನಾತನುಂ ಹರಿಯ ಗೋ[3]ಣ[3]ನಿಱುಂಕೆ ತದಂಘ್ರಿಘಾತದಿಂ
ದತ್ತ ಪತಂಗವೊಂದು ಶಕಟಂ ಮುಱಿದಾ ಶಕಟಂಬೊ[4]ಲೊಪ್ಪಿದಂ[4] ||೯೪||

ಓರೊರ್ವರನಕ್ಷಡದಿಂ
ದೂರಂ ಪೊಱಗಿಕ್ಕಿ ಪೋರ್ದು ಪಾದಾಹತಿಯಿಂ
ಭೂರೇಣುವಾಗೆ ಹರಿಚಾ
ಣೂರರ್ಮತ್ತೊಂದು ಮಲ್ಲಗಳನಂ ಸಮೆದರ್ ||೯೫||

ಬೆದಱಿದ ಬೆಱಗಿಂ ಬೆನ್ನಿ
ಕ್ಕಿದ ಕೃಷ್ಣಂ ಮೊಗದೆಗೊಂಡು ಮೊಗದೊಳ್ಮಿಯ್ಯಿ
ಕ್ಕಿದ ಚಾಣೂರನನಾರ್ದೆ
ತ್ತಿದನವನಿಯನೆತ್ತುವಂತಿರಾದಿವರಾಹಂ ||೯೬||

ಕೆಡೆದರ್ಪೋರ್ದರ್ ಪೊರಳ್ದರ್ಮಿಗೆ ಪಿಡಿಯಿದರಾರ್ದೊತ್ತಿದರ್ಮತ್ತಮೆರ್ದರ್
ನಿಡುಗಯ್ಯಂ ಬೇಡಿದರ್ನೀಡಿದರೆಟೆದು ನೆಲಕ್ಕಿಕ್ಕಿದರ್ಕೊಂಕಿದರ್ಮೇ
ಗಡಿಯಾದರ್ಪತ್ತಿ ಗಾಯಂಗೊಳಲೆ ಮಿಡುಕದಾರಯ್ದರಾರಯ್ದ ಗಾಯ
ಕ್ಕೆಡೆಗೊಟ್ಟರ್ಕೊಟ್ಟುಕೊಂಡರ್ಪ್ರೇಳೆದು ಬಿಡಿಸಿದರ್ ಕೃಷ್ಣ ಚಾಣೂರಮಲ್ಲರ್ ||೯೭||

ಪಿಡಿವಡೆ ಕೃಷ್ಣನ ತೋಳುಂ
ತೊಡೆಯುಂ ದೊಡ್ಡಿದುವಿಪೆನ್ನ ಮುಷ್ಟಿಗೆ ಪವಣೆಂ
ದಡಹಡಿಸಿ ನಳಿನನಾಭನ
ನಡುವಂ ಮುಱಿಯಲ್ಕೆ ನೋಡಿದಂ ಚಾಣೂರಂ ||೯೮||

---

1 ಸೋ (ಜ) ಪಾ (ಡ) 2 ಕೆ (ಚಟಣ) 3 ವ (ಚಟಡಣ) 4 ಅರ್ಪಿನಂ (ಚಟಡಣ)

ಮರನಂ ಕಿಟ್ತುಮುರಾರಿಯಾಱನೆ ಕಿೞಲ್ಕುಂಗಯ್ಯ ರೋಮಂಗಳಂ
ಕರಮಂ ಕೊಟ್ಟೊಡಮಾರ್ತನಿಲ್ಲ ಪಿಡಿಯಲ್ತತ್ಕಾಳಿಯಗ್ರಾಹಕಂ
ಧರೆಯಂ ಬೆಂಬಲದೊತ್ತಿಪತ್ತೆ ಗಿರಿಯಂ ಮುನ್ನೆತ್ತಿ ಪೊತ್ತಾ ಮಹೀ
ಧರನಂತಿಂತು ತಳರ್ಚಲಾಱನೆ ಕರಂ ಚಾಣೂರನೇಂ ಶಕ್ತನೋ ||೯೯||

ವ|| ಅಂತು ಮುನ್ನ ಮಾಡಿದ ಸಾಹಸಂಗಳಂ ಮಾೞ್ಪಂತೆ ಮುಂಗೆಯ್ವೞಲ ದೊಳ್[1]ಬೆ[1]ದಕಿ ನೋಡಿಯವನರಿಯನುಂ [2]ಪ[2]ರಿಯನುಮಪ್ಪುದನಱಿದು

ನರರುಂ ದೇವರ್ಕಳುಂ ನೋಡಿದಪರಿಳೆಯೊಳಂ ಬಾನೊಳಂ ನೂಂಕೆ ನುಗ್ಗಾ
ಗಿರೆ ನೋಟ್ಪರ್ ನಾಳೆಯೇಂ ನೋಡಿದಪರೆ ನೆಱೆನೋಟ್ಕೆಂದು ಚಾಣೂರನಂ ನೋ
ಟ್ಪರ ನೇತ್ರಾನಂದಮಂ ನಂದಿಸುವುದುಚಿತಮಲ್ತೇಂ ಪ್ರೌಢರ್ದಂ ವಿನೋದ
ಕ್ಕರಿಗಾತ್ಮ ಪ್ರಾಣಮಂ ಕೋಱದ ಹರಿ ಹರಿಗೊಟ್ಟಂತು ಒಲ್ಲೊಂದು ಜಾವಂ ||೧೦೦||

ವ|| ಇ[3]ವನನ[3]ನಿತೆನಿತಂ ಕೊಂಡಾಡುವೆನೆಂದು ವಿಶ್ವಂಭರಂ ಭರಂಗೆಯ್ಯಲೊಡನೆ

ದಾರುಣದೊಳ್ ನಿಷ್ಠುರ ಚಾ
ಣೂರ ಭುಜಾದಂಡ ಪೃಷ್ಠದೊಳ್ ಪುಟ್ಟಿದುದಾ
ನಾರಾಯಣನುರು ಭುಜಶಾ
ಖಾರಣಿಯೊಳ್ ಶಕ್ತಿರೂಪ ತೇಜೋಜ್ವಲನಂ ||೧೦೧||

ವ|| ಅಂತು ಜಳಧರದೊಳಶನಿ ಪುಟ್ಟುವಂತೆ ಜಳಧರಶ್ಯಾಮನೊಳ್ ಸರ್ವ ಶಕ್ತಿ ಪುಟ್ಟೆ

ಎೞವಿ ಮ[4]ಳಪಿ[4]ಕ್ಕಿ ಕಳಲುಂ
ಕೆೞಗಂ ತರಹರಿಸಿಕೊಳಲುಮಿಕ್ಕಿದ ಕಯ್ಯಂ
ಕಿೞಲುಮಣಮಾಱದಸುರಂ
ನೆೞಲೊಳ್ಪೊಣರ್ವಂತೆ ಪೋರ್ದು ಕೞಿಯೆ ಬೞಲ್ದಂ ||೧೦೨||

ಪೋರ್ಕುಳಿ[5]ಯಾದಡೆ[5] ಹರಿಯಂ
ಮಾರ್ಕೊಳ್ವದೆ ತೆಗೆದ ಕಯ್ಯ ಬೞಿಯನೆ ಬಂದಂ
ಸೊರ್ಕಿದಿಭಪತಿಯ ಕಯ್ಯೊಳ್
ಸಿಕ್ಕಿ ತೊಗಲ್ವಾಪೆಯಂದದಿಂ ಚಾಣೂರಂ ||೧೦೩||

---

1 ಕೆ (ಚಟಣ) 2 ಪಿ (ಜ) 3 ನ್ನೆ (ಜ) 4 ಱಪಿ (ಜ) ಳಬ (ಡ) 5 ಯಾಡದೆ (ಜ)

ಹೊಣಿಸಿ[1]ದಿ[1]ದ ಕ[2]ತ್ತು[2]ರಿಯಂ
ಕಾಣಿ[3]ಸೆ[3] ಕ[4]ತ್ತು[4]ರಿಯ ನಡುವಣ[5]ಳೆ[5]ರೋಮದವೋಲ್
ಚಾಣೂರನಿರ್ದನೆನೆ ಸ
ಪ್ರಾಣಮೊಳೇನನನಿ[6]ಸಾರ[6]ನೋ ಪುರಮಥನಂ (?) ||೧೦೪||

ಪೊರೆದು ಪೊರಲ್ವನವ್ವಳಿಪ ತೇಂಕುವ ತೇಂಕ[7]ದೆ[7] ಸುಯ್ವ ಸುಯ್ಕಿದೆ
ರ್ದರೆ ಜಡಿವಂ ಜವಂಗಿಡುವನೂರ್ಮಡಿಯಪ್ಪ ಬೆಮರ್ತು ಮಲ್ಲರಂ
ಗುರುಗುಣರೇಣುವಂ ತೊಡೆವ ಮೆ[8]ಯ್ಬೆ[8]ಮರೇಱದ ಭಂಗಿ ಕಣ್ಗೆ ಚಾ
ಣುರ[9]ನು [ರು][9] ಸೋಲಮಂ ಹರಿಯ ಗೆಲ್ಲಮನೇಂ ಪಿಸುಣಾಡುತಿರ್ದುದೋ ||೧೦೫||

ಡೊಕ್ಕರಮಿಕ್ಕೆ ತಾಯೆನಿಸಿ ಕರ್ಚಿ ಬೆರಲ್ಗೊನೆಯಂ ಧರಾತಲ
ಕ್ಕಿಕ್ಕೆ ಮರುಳ್ಚಿ[10]ಸ್ಸೈಕಟೆಯ[10] ಕ[11]ಟ್ಟಿಲೆಗಳ್ಕಿ[11] ಸಡಿಲ್ಚಿ ಕಂದರ
ಕ್ಕಿಕ್ಕಿದ ಬಾಹುಕತ್ತರಿಗೆ ಬಾಯ್ಬಿಡೆ ಕಾಯ್ದು ಪೊರಳ್ದು ಪೋಗೆ ಗಾ
ಯಕ್ಕೊಳಗಾದೊಡಂ ಮುಱಿಯಲೊಲ್ಲದೆ ಬಿಟ್ಟಱಗಂಡಿವಿಟ್ಟವೋಲ್ ||೧೦೬||

ವ|| ಅಂದಂ ಕಂಡು ಕಂಸಂ ಪಂದಿಗೆಱಗಿದ ನಾಯಂ [12]ಹೆಕ್ಕ[12]ಳಿಸುವಂತೆ ತೊಡೆಯ ನಪ್ಪಳಿಸಿದುಲ್ಲಹಮಲ್ಲದೊಳ್ ಘಟಿತಶೂರಚಾಣೂರವಿಕ್ರಮದಿಂ ಸಮುಕರ್ತರಿಯನೆನ್ನ [13]ಯ್ಯಂ[13] ಕೊಂಡನೆಂದು ಪಡಿಗಯಿಸಲೊಡನೆ ಸಿಗ್ಗಾಗಿ ಬೇಗಮಾಗಿ ಮನಂಗೆಯ್ದು

ಹರಿಹೊಂಗಿ[14]ಬಿಟ್ಟು[14] ಮಿಡುಕದೆ
[15]ಶರೀರದೊಳ್[15]ಕೂಡೆ ಶಕ್ತಿಯಂ ಪೂರಿಸೆ ಸೈ
ತೆರೆಯಂ ವೇಲ್ವಾಯ್ದಲಗಿನ
ಗರುಡನನಪ್ಪಿದವೊ[16]ಲಾದನಾ[16] ಚಾಣೂರಂ ||೧೦೭||

ಚಳಕಿ ಚಳವಾಗೆ ಪಾರಂ
ಸೆಳೆವೆಳೆವಂ ಪಟ್ಟಿ ಸಂಡಿ ಪುಟಪಟ್ಟರೆ [17]ಕೆ[17]
ಚ್ಚಳುರ್ದ[18]ರಿ[18]ಲೋಹದವೋಲ್ [19]ಕಂ[19]
ತಳಲೋಹಂ ಕರಗಿ ಕೊರಗಿದಂ ಚಾಣೂರಂ ||೧೦೮||

---

1 ದ (ಚಟಡಣ) 2 ತ್ತ್ರ (ಜ) 3 ಸಿ (ಜಡ) 4 ತ್ತ್ರ (ಜ) 5 ರಿ (ಜ) 6 ಗಾರ (ಟಡಣ) 7 ರ (ಚಟಡಣ) 8 ಲ್ಬೆ (ಜ) 9 ನನ (ಚಟ) ನ (ಜಡ) 10 ವಾಣಕಟ (ಜ) ಣ್ಯೆಕಟ್ಟ (ಡ) 11 ತರಿಗಳ್ (ಜ) 12 ಪೆಕು (ಜ) 13 ಕ್ಕೆಯ್ಯಂ (ಡ) 14 ವಿಟ (ಚಟ) ದಿಟ್ಟ (ಡ) 15 ದುರದೊಳ್ ತಾಂ (ಚಟಣ) ದೊಳ್ ತಾಂ (ಡ) 16 ಲಪ್ಪಲಾ (ಚಟಣ) ಲಾ (ಡ) 17 ಕಿ (ಜ) 18 ರಿ (ಜ) 19 ಕಂ (ಚಟ)

ಒಡೆದುದು ಮುಷ್ಟಿಯುಂ ಪಿಡಿದ ಕಯ್ಯತಳಂ ಕಡು ಸೋಂಕು ಸೋಂಕೆ ಮೆ
ಯ್ಯಡಗಡಗಾಯ್ತು ಡೊಕ್ಕರಿಸಿ ಕಂಸವ ಮಲ್ಲನ ಕಕ್ಷವಕ್ಷದೆ
ಲ್ವುಡಿದುವು ಪೊಯ್ಯುತುಂ ತುಡುಕಿ ತುಟ್ಟಿಸಿ ಕತ್ತರಿವಾಣಿಯಲ್ಲಿ ಕೆ
ಯ್ದುಡುಕಿದವೊಲ್ ಬೆರಲ್ಪಱಿದುವಾ ಹರಿ ಪೂರಿಸೆ ಮೆಯ್ಯ ಶಕ್ತಿಯಂ ||೧೦೯||

ಮುಸಗಿದೊಡೆ ತನ್ನ ನೆಲೆಯಂ
ಮಿಸುಕದೆ ಮುನ್ನಿರ್ದ ತೆಱದಿನಿರ್ದುದೆ ಕಡೆಯೊಳ್
ಮುಸಗಿದೊಡೋವೋವೇಕೆ
ಗ್ರಸನಂಗೊಳ್ಳದೆ ಮಹಾಬ್ಧಿ ಮೂಱುಂ ಜಗಮಂ ||೧೧೦||

ನೆಲನುಂ ಜಲನಿಧಿಯುಂ ಸಲೆ
ತಲೆವತ್ತುವ ತೆಱದಿನಿರ್ದು ಕಡೆಯೊಳ್ ನೆಲನಂ
ಜಲಧಿ ಕಿಡಿಪಂತೆ ಕಿಡಿಸಿದ
ನಲಸದೆ ಚಾಣೂರಮಲ್ಲನಂ ಮುರಮಥನಂ ||೧೧೧||

ಬಿನ್ನಾಣಂ ಬಿನ್ನಗಾಯ್ತೆನ್ನ[1]ಳವಳವಱಿದತ್ತೆನ್ನ ಬಲ್ಪೆಯ್ದೆ ಮೆಲ್ಪಾ
ಯ್ತೆನ್ನಣ್ಮಂತಣ್ಮಿತಾ[2]ಯ್ತುಂ ನಿಮಗೆ[2]ಮುಗಿದುದೆನ್ನೋಜೆ ಕಟ್ಟೋಜೆಯಾಯ್ತಾ
ನಿನ್ನೇವೆಂ ಸಾವೆನೆಂಬಂತಿರೆ ಬಳಲಿಸಿ ಚಾಣೂರನಂ ಭೂತಳಕ್ಕಂ
ಬನ್ನಕ್ಕಂ ತಂದು ತಂದಂ ರಿಪುನೃಪನ ಮನಕ್ಕಂದು ಕುಂದಂ ಮುಕುಂದಂ ||೧೧೨||

ವ|| ಆಗಳ್ಮುಷ್ಟಿಕಂ ಮುಷ್ಟಿಗೊಂಡು ಮುನಿದು ಮೇಲ್ವಾಯಲೊಡನೆ

ಎರಡುಂ ಕಯ್ಯಿಂ ಕೊಂಡಿ
ರ್ವರುಮಂ ಬೊಂಬೆಗಳನಾಡಿಪವನವೊಲವನೀ
ರ್ವರ ತಲೆಯಂ ತಾಟಿಸಿದಂ
ಬಿರಿವಿನೆಗಂ ತಾಳಕಾಯ್ಗಳಂ ತಾಟಿಪವೋಲ್ ||೧೧೩||

ವ|| ಅಂತು ತಾಟಿಸಿ ಮಲ್ಲರಂಗದೊಳ್ ಪೂವಲಿಗೆದಱಿದಂತೆ ಮಸ್ತಿಷ್ಕಪೆತ್ತಲುಂ ಸೂಸೆ ಕುಂಕುಮರಸದಿಂ ಜೇಕೊರ್ಟಿವಿಯನೊತ್ತಿದಂತೆ ಮೂಗಿಂ ಬಾಯಿಂ ಬಿಸುನೆತ್ತ ರುಚ್ಚಳಿಸಿ ಸೂಸೆ ಬಿಸುಬಿಸುವೊಯ್ದು[3] ಚಾಣೂರನ ಮುಷ್ಟಿಕನ ಪೆಣದ ಪೆಣರ

1 ೪ (ಜ) 2 ಯ್ತಿಂ ನಗಿಪ (ಜ) 3 ಲ್ (ಜ)

ನಿಪ್ಪುರಿಗೂಡೆ ಕಂಡು ಕೆಳರ್ದು ಧೀರೋದ್ಧತ [1]ದುಂದುಭಿಧ್ವಾನಮಹೀಧರ[1] ದುರ್ಧರ ಮಹಾಕಾಳ ಪ್ರಳಯಕಾಳ ಕೋಳಾಹಳ ತಾಳ ಜಂಘೆತಳ ಪ್ರಹಾರಿ ವಜ್ರಮುಷ್ಟಿ ಮೊದಲಾಗೆ ಪೂಸಿದ ಸಿಂಧುರಮುಂ ಬೀಸುವ ಬಾಲಗಚ್ಚೆಯುಂ ಬೆರಸು

[2]ತ್ರೆ[2]ರ್ಕೆಯೊಳುಲಿದೆಯ್ತಂದು ಪೊ
ಣರ್ಕೆಗೆ ಮೇಲ್ವಾಯೆ ಮುಸುಱೆ ಮಲ್ಲ ಸಹಸ್ರಂ
ಮರ್ಕ[3]ಟ[3]ಕಟಕಂ ಮುತ್ತಿದ
ಟರ್ಕೆಯ ನೀಳಾಚಲಂಬೊಲಿರ್ದಂ ಕೃಷ್ಣಂ ||೧೧೪||

ವ|| ಅಂತು ಮುಂತಣ ಶೂಲಮನೇಱುವಂತೇಱಿದ ಮಲ್ಲರ ಮೆಯ್ಗಳೆಲ್ಲಂ ಮುಱಿದು ನುರ್ಗುನುರ್ಗಾಗೆ ಮಲ್ಲಲಂಘನಂಗೆಯ್ದು

ಭ್ರಮರಿಗುಡೆ ಕೃಷ್ಣನಾ ಸಂ
ಭ್ರಮದಿಂ ಮತ್ತಿರ್ದ ಮಲ್ಲರೆಂಟುಂ ದೆಸೆಗಂ
ದಮರಿಸಿದ ಮದಸ್ತಂಭೇ
ರಮದಿಂದುದಿರ್ವಂತಿರುದಿರ್ದು ಪಱಿವಱಿಯಾದರ್ ||೧೧೫||

ಗುರು[4]ಭುಜದಂಡ[4]ದ್ವಯದೊಳ್
ತಿರಿತ[5]ರ್ಗೆ[5] ಪತ್ತಿರ್ದ ಮಲ್ಲರುಲ್ಲಸಿತಾಕ್ಷಂ
ಹರಿಚಕ್ಕಂದೊಳಲಿಯನನು
ಕರಿಸಿರ್ದಂ ಬಹಳ ಬಾಹುಚಾಳನ ಗತಿಯೊಳ್ ||೧೧೬||

ವ|| [6]ಮತ್ತಂ ಪತ್ತಿ[6] ಬಿಡದ ಮಲ್ಲರನಾನೆ ಮೆಟ್ಟಿದುದೆ ಸಂ[7]ತೆಂಬಂತಾ[7]ವೆಡೆಯುಂ ಪಿಡಿದೊಡಂ ಪಿಡಿದೆಡೆಯೆ ಗಾಯಮಾಗೆ ಬಳೆಯ ಪೇಱನಾನೆ ಮೆಟ್ಟಿದಂತೆ[8]ಲುವೆಲ್ಲಂ ನುರ್ಗುನುರ್ಗಾಗೆ ಮೆಯ್ಯ ತೊವಲಾಗೆ[8] ಸಡಿ[9]ಯೋ[9]ಡುಗಳಂ ತೀವಿದವಲ ಬೇರಂಗಳ ನೀಡಾಡುವಂತೀಡಾಡಿದ ಚಾಣೂರ ಮಥನನ ಮೇಲೆಯಗಸ್ತ್ಯನ ಮೇಲೆ ಕವಿದ ಕಡಲಂತೆ ಕವಿವ ಕಂಸನ ಚಾತುರ್ಬಲಮುಂ ಬಲದೇವನುಂ ವಸುದೇವನುಂ ಕಂಡು ತಮ್ಮ ಬಲಮಂ ಕೈವೀಸೆ ಪೆಣಮಯಂ ಮಾಡೆ ನೆತ್ತರುಗಡಲಂ ಪರಿಯಿಸೆ ಕಟ್ಟೇವಮುಂ ಕಡುಮುಳಿಸುಮಳವಿಗಱಿಯೆ ಸಿಗ್ಗಾಗಿ ಸೈರಿಸಲಾಱದೆ ಅಭಿನವ ನಾರಸಿಂಹಾಡಂಬರ ಮಗುರ್ವುಮದ್ಭುತಮುಮಾಗೆ

---

1 ದಂದುವಾರವುದಂ (ಜ) 2 ಡೊ (ಜ) 3 ಡೆ (ಚಟಡಣ) 4 ಭುಂಡ (ಚ) ಭಂಡ (ಟಡಣ) 5 ರೆಯುಲ್ (ಚಟಡಣ) 6 ಮಲ್ಲರ ಮಸ್ತಕಂ ಕವುಳ ಮತ್ತ (ಚಟಡಣ) 7 ಡೆಂಬಂದಾ (ಚಟಣ) ದೆಂಬಂದಾ(ಡ) 8 ನುರ್ಗಾಗೆ (ಜ) 9 ಯಾ (ಚಟಡಣ)

ಮಾಡಪ ಕಂಭಮಂ ಮುಲಗನೊಳ್ಪರಿಪಾಯ್ದು ನೆಲಕ್ಕೆ ಬಾಳನೆ
ಲ್ಲಾಡೆ ನೆಗಪ್ಪಿಕೊಂಡು ತೊಡೆಗಾ ನರಸಿಂಹನೆವುಂಕಿ ಕಂಭದಿಂ
[1]ಮಾ[1]ಡಿದ ಕಾಳರಕ್ಕಸನನಿಕ್ಕುವವೋಲ್ ನಖದಿಂ ಕರುಳ್ಗಳಂ
ತೋಡಿ ಪಿಸುಳ್ದು ಸೀಟ್ಟು ಬಿಸುಟಂ ಕಲಿಕಂಸನನಬ್ಜಲೋಚನಂ ||೧೧೭||

ವ|| ಅಂತು ಸೀಟ್ದೀಡಾಡೆ[2]ಯು[2]ಮದಂ ಕೈಕೊಳ್ಳದೆ ಕೊಳ್ಳೆನಾರ್ದು ಮುರಿದೆರ್ದು ಖೇಟಕದಿಂ ಕರುಳಂ ತಕ್ಕೈ[3]ಸಿ ಕತ್ತಿಗೆಯನೆತ್ತಿ ಮೇಲ್ವಾಯ್ದು ಪೊಯ್ವ ಕಂಸನ ಕಲಿತನಕ್ಕೆ ಕೌತುಕಂಬಟ್ಟು ಕಡಿತಲೆಯನೆಡದ ಕಯ್ಯೊಳ್ಪಿಡಿದು ತಳಿಗೆಲೆಯ ನೊರಸುವಂತೊರಸಿ ಬಿಸುಟು

ಕೆಡೆ ಕೆಡೆಯೆಂದರಮಗನೊದೆ
ದೆಡಗಾಲೊಳ್ ತೊಡರ್ದು ಕರುಳೊ[3]ಳೇನೆ[3]ರ್ದಂ ಕ
ರ್ದಡಿಗಂ ಗೋವಳನಿಕ್ಕಿದ
ತೊಡರೊಳ್ ಮಿಗೆ ಕೋಡದಿಟಲ್ವ ಪಾಪೆಯ ತೆಱದಿಂ ||೧೧೮||

ಕ್ಷಿತಿಗೊರ್ವನೆ ದುರ್ಜನನೊಂ
ದತಿವೇಗದೆ ಸತ್ತು ಮಾಡುವುಪಕಾರಮನ
ಪ್ರತಿಮರ್ ಸಜ್ಜನರಾಚಂ
ದ್ರತಾರಕಂ ಬರ್ದು ಮಾಡಲೇನಾರ್ತಪರೇ ||೧೧೯||

ವ|| ಅಂತು ಮಲ್ಲಾಮಲ್ಲಿಯಾಗಿ [4]ಪೋ[4]ರ್ದ ಮಲ್ಲರಂ ಮೇಲ್ವಾಯ್ದು ಕಂಸನುಮಂ ಕೃಷ್ಣನೊಂದೆ ಕಯ್ಯೊಳೆ [5]ಕಯ್ಯ ಕೊ[5]ಸನಿಕ್ಕುವಂತಿಕ್ಕಲೊಡನೆ

ಅನಿಮೇಷಾಂಬೋಧಮುಕ್ತಂ ಸುರಿದುದಲರನಟ್ಟೇಱು ಬಾನ್ವಟ್ಟೆಯುಂ ಕೃ
ಷ್ಣನ ಮೇಗೋರಂತೆ ಭೃಂಗವ್ಯತಿಕೃತ ಸುಮನೋ ರೇಣು ಗೀರ್ವಾಣ ಬಾಣಾ
ಸನರಮ್ಯಂ ಚೈತ್ರ[6]ತೂ[6]ರ್ಯಸ್ತ[7]ನಿತ[7]ಮುಖರಿತಂ ಮಾಕರಂದಾರ್ದ್ರಧಾರಾ
ತನುಬಂಧೂಕೇಂದ್ರಗೋಪಂ ವಿಚಕಿಳಕುಳ ಮೇಘೋಪಳಾಸಾರ ಸಾರಂ ||೧೨೦||

ಮಧುಮಾಯಾ ಮಥನಂ ಸಮುದ್ಧೃತ ಮಹಾಗೋತ್ರಂ ಗುಣೋದ್ದಾಮ ಧ
ರ್ಮ ಧರಾ ಕಂಟಕ ಕೈಟಭಾಪಹರಣಂ ವಾಚಾಳ ಚಾಣೂರ ವಾ
ರಿಧಿ ಸಂಶೋಷಣ ಬಾಡಬಾಗ್ನಿ ಕಲಿಕಂಸಧ್ವಂಸಕಂ ತಾಳ್ದಿದಂ
ಕದನಕ್ರೀಡೆಯನಾಡಿ ನಿತ್ಯಜಯಮಂ ಶ್ರೀ ವೀರನಾರಾಯಣಂ ||೧೨೧||

---

1 ಮೂ (ಜ) 2 ಗೆಯ್ದು (ಚಟಡಣ) 3 ಳೆನಿಸಿ (ಜ) 4 ಪೊಣ (ಚಟಣ) 5 ಕೊ (ಜ)
6 ಷಮಾ (ಜ) 7 ಬಳ (ಜ)

ಇದು ಮೃದುಪದಬಂಧ ಬಂಧುರ ಸರಸ್ವತೀ ಸೌಭಾಗ್ಯ[1]ವ್ಯಂಗ್ಯ ಭಂಗಿ-
ನಿಧಾನ ದೀಪವರ್ತಿ [2]ಚತುರ್ಭಾಷಾ ಕವಿಚಕ್ರವರ್ತಿ ನೇಮಿಚಂದ್ರಕೃತಮುಂ ಶ್ರೀಮ-
ತ್ಪ್ರತಾಪ ಚಕ್ರವರ್ತಿ ವೀರಬಲ್ಲಾಳದೇವ ಪ್ರಸಾದಾಸಾದಿತ ಮಹಾಪ್ರಧಾನ [3]ಸೇಜ್ಜೆ-
ವಳ್ಳ ಪದ್ಮನಾಭದೇವ ಕಾರಿತಮುಮಪ್ಪ ನೇಮಿನಾಥಪುರಾಣದೊಳ್

ಅಷ್ಟಮಾಶ್ವಾಸಂ

ಸಮಾಪ್ತಂ.

ಅರ್ಧನೇಮಿಪುರಾಣಂ ಸಮಾಪ್ತಂ

1 ಭಂಗಿನಿ (ಜ) ವ್ಯಂಗಭಂಗಿನಿ (ಟ) 2 ಕವಿ (ಜ) 3 ಪದವೀ [illegible] ಸೆ ([illegible]) ಗೆ

# ಪದ್ಯಗಳ ಅಕಾರಾದಿ

| | ಘಟ್ಟ—ಪದ್ಯ | | ಘಟ್ಟ—ಪದ್ಯ |
|---|---|---|---|
| ತರುಣತರಂಗೋತ್ಕಿ ತ | ೧೩೪-೧೧೧ | ಕರಯಿಂ ಕಯ್ನೀಡಾಡು | ೧೩೩-೧೧೧ |
| ತರುಣತರು ವಿಪಧರಂ | ೬೪-೮೦ | ಕೇಚಂ ಬಾಡಿಸುತಿರ್ಪ | ೮೪-೫೪ |
| ತರುಣ ಬಿಸಸದನಮಬ್ಜಾ | ೧೩೩-೧೦೪ | ಕೊಡರ್ದರಿಯಂ ಕೇಸರಿ | ೯೬-೧೧೧ |
| ತರುಣಿಯ ಮೆಯ್ಯ | ೯೬-೧೦೨ | ತೊಡರ್ದ ಗಾಣದ ಗೂಳಿ | ೪೬-೫ |
| ತರುವಿಂದತ್ತತ್ತ ನೀಳ್ದಂ | ೧೪೭-೨೮ | ತೊಡೆದು ಸುಗಂಧಮಂ | ೧೧೮-೩೨ |
| ತಲ್ಲಣಿಸಿ ನೆಗಟ್ದ | ೩೪-೪೫ | ತೊದಳೇನೊ ಮೆಚ್ಚಿದಂ | ೧೯೮-೩೯ |
| ತಲ್ಲಲನೆಯ ಉಳಿತಾಳಕ | ೪೩.೮೭ | ತೊಳಗುವ ಮೈಗಳೊಳ್ | ೨೭-೧೧ |
| ತಲೆಕೆಳಗಾಗಿ ನೇಲ್ವುದು | ೧೧೯-೩೭ | ತೋರದರೆ ಮುಟಾಯ | ೧೩೫-೧೧೩ |
| ತವಕದೆ ಕಂಸಂ ಕೈನೀ | ೧೭೩-೪೦ | ತೋಟಾಸುಗುಮಮಗೆ | ೧೬೫-೯ |
| ತವರುಂ ಪೊಕ್ಕಿಲುವಾಗಿ | ೧೩೮-೧೯ | ದಯಿತೇಕ್ಷಣ ಮಗ್ನಮೃಗಂ | ೭೮-೨೪ |
| ತಳಗಳ ಕೋಳ್ ಭಟ | ೨೧೨-೯೩ | ದಾರುಣದೊಳ್ ನಿಷ್ಠುರ | ೨೧೩-೧೦೯ |
| ತಳಿರಂ ತೂಗಿ ಪರಾಗಮಂ | ೧೩೨-೯೭ | ದಾವಿನೊಳಡಸಿ ಯಶೋದಾ | ೧೮೩-೮೨ |
| ತಳಿರುಡೆ ಫುಲ್ಲಕಂಕಣ | ೫೯-೬೧ | ದಿಕ್ಕರಿವೋಲ್ ಕೃಷ್ಣಂ | ೧೭೩-೩೯ |
| ತಳೆದತ್ತುದ್ವೃತ್ತಿಯಂ ತದ್ವ್ರ | ೧೦೦-೧೨೧ | ದಿಟ್ಟ ಪೂಜಿಪಾಯೆ | ೧೯೨-೨೦ |
| ತಾಂ ಗಡಮಿಕ್ಕುವಂ ಸೆಟಿ | ೧೧೩-೧೦ | ದೀಪ್ರ ಸುವರ್ಣ ಪತ್ರ | ೪೧-೭೯ |
| ತಾಪಸ ಭದ್ರವಾಂಬುಧಿಯ | ೧೧೬-೨೪ | ದೂಟಾದು ತಮ್ಮಯ | ೧೨೧-೪೪ |
| ತಾರಗೆಯೆನೆ ತೊನೆದೊಟ್ಟಿದ | ೫೬-೪೫ | ದೂಸಕರ ದೂಟುಗೇಳ್ದಂ | ೧೧೪-೧೩ |
| ತಾಳತರು ಪಣ್ಣಳಂ | ೧೮೫-೮೮ | ದೆಸೆದೇವತೆಯ ಕುಸುಂಬೆ | ೧೭೦-೩೨ |
| ತಾಳಸ್ಥೂಳಕರಂ ತಮಾಳ | ೧೩೧-೯೦ | ದೆಸೆಯಂ ನುಂಗೆಂಬುದೇ | ೨೦೩-೬೦ |
| ತಿಳಿಗೊಳನಬ್ಜಗಂಧಿ | ೧೨-೬೩ | ದೇವಕಿಗಪ್ಪ ತನೂಜಂ | ೧೬೫-೧೧ |
| ತೀಡುವ ಗಾಳಿಯುಂ | ೩೪-೪೩ | ದೇವಕಿಯುಮುಳಂ ಬೆಸ್ತ್ರಳ್ | ೧೭೦-೨೯ |
| ತುಡೆ ಕೋಲಂ ಮುನಿ | ೬೩-೭೯ | ದೇವರ್ಗಲ್ಲದೆ ಕಳೆಯಂ | ೮೨-೪೫ |
| ತುದಿ ಮೊದಲಪ್ಪುದಿಂ | ೧೩೯-೬ | ದೊರೆಗೆಡೆ ತಮ್ಮವಿಯೋಗ | ೩೮-೨೯ |
| ತುಟುಗಿದ ಕಡಲಂ | ೧೩೮-೨ | ದೊರೆವೆತ್ತೀ ವ್ಯೋಮ | ೫೦-೨೦ |
| ತುಟುಗೆವೆ ನಿಂದು ನೋಡೆ | ೬೨-೩೩ | ದ್ಯುಮಣಿ ಪ್ರದ್ಯೋತದಿಂ | ೮೯-೬೫ |
| ತುಟೀಯ ಪದಾತಿಯಂ | ೧೫೫-೬೩ | ಧರೆಗಿತ್ತುದತ್ತನಾದಪೆ | ೯೬-೧೦೦ |
| ತೂಗುವ ತೊಟ್ಟಿಲೊಳಾಡಿದ | ೩೧-೩೦ | ಧರೆ ಲೇಸೆಂಬಾಸೆಗಾಣಂ | ೭-೩೭ |
| ತೆಗೆದತಿ ವರ್ತಗಳಂ | ೬೫-೮೭ | ಧವಳ ವಿಲೋಚನ | ೫೮-೫೮ |
| ತೆರ್ಕೆಯೊಳುಲಿದೆಯ್ತಂದು | ೨೧೬-೧೧೪ | ಧೃತಿಯಿಂ ಮಚ್ಚರಿಸುವ | ೧೪೪-೨೦ |
| ತೆರತೆರೆಗೊಂಡು ಬಾನ್ನದರ್ವ | ೧೧೬-೫೧ | ಧೃತಿವೆತ್ತಾ ಪದದಿಗ್ಗಯೋ | ೮೦-೩೪ |
| ತೆರೆ ಪಲ್ಲಿನೆ ಪಲ್ಲವತರು | ೧೧-೬೨ | ಧೈರ್ಯನಿಧಿ ಕೊಂಡಕುಂಪಾ | ೩-೧೪ |

| ಪದ | ಪುಟ—ಪದ್ಯ |
|---|---|
| ಅಳ್ವಿಱ್-ಭೇದಿಸು | ೯೫-೯೫ವ |
| ಅೞ್ಕು-ಅಳುವುದು | ೨೨-೧೧೧ |
| ಅೞ್ತಿಗೆ-ಇನಿಯಳು | ೩೦-೨೬ |
| ಆಘ್ರಾತ-ಮೂಸು, ವಾಸಿಸು | ೧-೨ |
| ಆಟಂದು-ಮೇಲೆ ಬೀಳು | ೧೮೦-೬೯ |
| ಅನೀಕ-ಸೈನ್ಯ, ಗುಂಪು | ೮೪-೫೩ |
| ಅಪೋದನ-? | ೬೬-೯೨ |
| ಅಭೀಳ-ಭಯವನ್ನುಂಟುಮಾಡುವ | ೧೦೦-೧೨೧ |
| ಆಮ್ರ-ಮಾವಿನಮರ | ೪೦-೭೧ |
| ಆಮ್ನಾಯ-ಸದ್ವಂಶ | ೨-೭ |
| ಆಯತಿ-ಉನ್ನತಿ | ೨-೭ |
| ಆರ್ತ-ಆಸೆ | ೨-೫ |
| ಅರಣಿಗೊಳ್—? | ೧೯೨-೧೯ |
| ಆರ-ಹಾರ | ೨೦-೧೦೨ |
| ಅರಮೆ-ಆರಾಮ, ಉದ್ಯಾನ | ೧೨-೬೩ |
| ಆಲೀಢ-ಬಲ ಮೊಣಕಾಲನ್ನು ಮುಂದು ಮಾಡಿ ಎಡಗಾಲನ್ನು ಹಿಂದಿಟ್ಟು ನಿಲ್ಲುವುದು | ೪೮ ೧೪ವ |
| ಆವೇಷ್ಟಿಸು-ಆವರಿಸು, ಬಳಸು | ೧೬೧-೭೯ವ |
| ಆಸ್ಫಾಲನ-ಅಪ್ಪಳಿಸು | ೭೧-೧೧೬ |
| ಆಲೋಕನ-ನೋಡುವಿಕೆ | ೪೮-೧೩ |
| ಇಂಗುದಿ-ಇಂಗುದೀಮರ | ೫೪-೩೫ |
| ಇಱಿಗಾಱರು-ಕಡೆಗಣಿಸುವವರು | ೬-೨೯ |
| ಇೞ್ದು-ಎಳೆದುಕೊ, ಆಕರ್ಷಿಸು | ೧೭-೬೦ |
| ಈಷಾದಂಡ-ಕಿಱಿದಾದ ಕೋಲು | ೧೯೪-೨೨ವ |
| ಈಳೆ-ಹೇರಿಳೆಜಾತಿ ಮರ | ೧೧೨-೭ |
| ಉಕ್ಕೆವ-ಕಪಟ | ೧೬೮-೧೯ |
| ಉಗ್ರಾಸಿ ಭೀಕರವಾದ ಕತ್ತಿ | ೧೭೯-೬೪ |
| ಊಗ-? | ೩೨-೩೬ |
| ಉತ್ಕರ್ಣ-ಮೇಳಕ್ಕೆ ಎದ್ದಿರುವ ಕಿವಿ | ೧೩೧-೯೩ |
| ಉತ್ತಂಸ-ಶಿರೋಭೂಷಣ | ೧೦೭-೧೫೨ |
| ಉತ್ಪ್ರಸ್ರವ-ಮೇಲಕ್ಕೆ ಚಿಮ್ಮುವ | ೫೯-೬೨ |
| ಉದ್ದವಣ-ವಾದ್ಯವಿಶೇಷ | ೩೩-೩೯ |
| ಉದ್ವೃತ್ತತೆ-ಅತಿಶಯತೆ | ೪೫-೪ |
| ಉಪಾರ್ಜನ-ಸಂಪಾದನೆ | ೨೧-೧೦೮ |
| ಉಪಾಂಸ-ಕಾಪಟ್ಯ | ೨೦೦-೫೧ವ |
| ಉಪ್ಪರವಟ್ಟ-ಮೆಲ್ಕಟ್ಟಿನ ಬಟ್ಟೆ | ೧೨-೬೪ |
| ಉಮುಱ್-ಉಗುಳು | ೬೫-೮೬ |
| ಉರ್ವೀಧರ-ಬೆಟ್ಟ | ೧೦-೫೬ |
| ಉರ್ವು-ಉಬ್ಬು, ಹೆಮ್ಮೆಪಡು | ೧೧೮-೩೬ |
| ಉಲೂಖಲ-ಒರಳು | ೧೮೩-೮೨ವ |
| ಉಳ್ಕ-ಉಲ್ಕಾಪಾತ | ೮೪-೫೩ |
| ಊರುಬ್ಬೆ-ಊರಿಗೆ ಆವಿಗೆಯಂತಿರುವ | ೧೧೧-೨ವ |
| ಊಷ್ಮ-ಝಳ, ಉಷ್ಣ | ೧೧೬-೨೦ |
| ಋತ-ಸತ್ಯ | ೧೧-೫೯ |
| ಎಡೆಗಱ್-ತುಂಬು | ೫೧-೨೩ |
| ಎಱಿಲ್ಕೆ-ಜೋತುಬಿದ್ದಿರುವುದು | ೧೧೯-೩೭ |
| ಎಱವಿ-ನೀವಿ | ೨೧೩-೧೦೨ |
| ಏಣ-ಜಿಂಕೆ | ೫೯-೬೨ |
| ಏವೈಸು-ವ್ಯಥೆಪಡು | ೧೨೫.೬೩ವ |
| ಏಳ-ಒಂದು ಬಗೆಯ ಕುರಿ | ೧೫೪-೫೬ |
| ಒಚ್ಚತ-ಒಂದೇ ಸಮನೆ | ೬-೩೨ |
| ಒಟ್ಟಜೆ-ಅತಿಶಯ, ಶೌರ್ಯ | ೧೯೨ ೨೦ |
| ಒಱಲೆ-ಗೆದ್ದಲು | ೨೦೦-೫೧ |
| ಕೊಸಗು-ಕರ್ಣಿಕಾರ, ಬೆಟ್ಟದಾವರೆ | ೧೪೩-೧೯ |
| ಓಜೆ-ಶಕ್ತಿ | ೨೧೫-೧೧೨ |
| ಔರ್ವ-ಬಡಬಾಗ್ನಿ, ಕಡಲುರಿ | ೭೭-೧೭ |

| ಪದ | ಪುಟ—ಪದ್ಯ |
|---|---|
| ಆಳ್ಳಿಱು-ಭೇದಿಸು | ೯೫-೯೫ವ |
| ಆಟ್ಟ್ಯ-ಅಳುವುದು | ೨೨-೧೧೧ |
| ಆಟ್ತಿಗೆ-ಇನ್ನಿಯುಳು | ೩೦-೨೬ |
| ಆಘ್ರಾತ-ಮೂಸು, ವಾಸಿಸು | ೧-೨ |
| ಆಟಂದು-ಮೇಲೆ ಬೀಳು | ೧೮೦-೬೯ |
| ಅನೀಕ-ಸೈನ್ಯ, ಗುಂಪು | ೮೪-೫೩ |
| ಆಪೋದನ-? | ೬೬-೯೨ |
| ಆಭೀಳ-ಭಯವನ್ನುಂಟುಮಾಡುವ | ೧೦೦-೧೨೧ |
| ಆಮ್ರ-ಮಾವಿನಮರ | ೪೦-೭೧ |
| ಆಮ್ನಾಯ-ಸದ್ವಂಶ | ೨-೭ |
| ಆಯತಿ-ಉನ್ನತಿ | ೨-೭ |
| ಆರ್ತ-ಆಸೆ | ೨-೫ |
| ಆರಣಿಗೊಳ್—? | ೧೯೨-೧೯ |
| ಆರ-ಹಾರ | ೨೦-೧೦೨ |
| ಆರಮೆ-ಆರಾಮ, ಉದ್ಯಾನ | ೧೨-೬೩ |
| ಆಲೀಢ-ಬಲ ಮೊಣಕಾಲನ್ನು ಮುಂದು ಮಾಡಿ ಎಡಗಾಲನ್ನು ಹಿಂದಿಟ್ಟು ನಿಲ್ಲುವುದು | ೪೮-೧೪ವ |
| ಆವೇಷ್ಟಿಸು-ಆವರಿಸು, ಬಳಸು | ೧೬೧-೭೯ವ |
| ಆಸ್ಫಾಲನ-ಅಪ್ಪಳಿಸು | ೭೧-೧೧೬ |
| ಆಲೋಕನ-ನೋಡುವಿಕೆ | ೪೮-೧೩ |
| ಇಂಗುದಿ-ಇಂಗುದೀಮರ | ೫೪-೩೫ |
| ಇಬಾಗಾಜಿರು-ಕಡೆಗಣಿಸುವವರು | ೬-೨೯ |
| ಇಟ್ಟ್ದ-ಎಳೆದುಕೊ, ಆಕರ್ಷಿಸು | ೧೭-೬೦ |
| ಈಷಾದಂಡ-ಕೀಱಾದ ಕೋಲು | ೧೯೪-೨೨ವ |
| ಈಳೆ-ಹೇರಿಳೆಜಾತಿ ಮರ | ೧೧೨-೭ |
| ಉಕ್ಕೆವ-ಕಪಟ | ೧೬೮-೧೯ |
| ಉಗ್ರಾಸಿ-ಭೀಕರವಾದ ಕತ್ತಿ | ೧೭೯-೬೪ |
| ಉಱ-? | ೩೨-೩೬ |
| ಉತ್ಕರ್ಣ-ಮೇಳಕ್ಕೆ ಎದ್ದಿರುವ ಕಿವಿ | ೧೫೧-೫೩ |
| ಉತ್ತಂಸ-ಶಿರೋಭೂಷಣ | ೧೦೬-೧೫೨ |
| ಉತ್ಪ್ರಸ್ರವ-ಮೇಲಕ್ಕೆ ಚಿಮ್ಮುವ | ೫೯-೬೨ |
| ಉದ್ಧವಣ-ವಾದ್ಯವಿಶೇಷ | ೩೩-೩೯ |
| ಉದ್ವೃತ್ತತೆ-ಅತಿಶಯತೆ | ೪೫-೪ |
| ಉಪಾರ್ಜನ-ಸಂಪಾದನೆ | ೨೧-೧೦೮ |
| ಉಪಾಂಸ-ಕಾಪಟ್ಯ | ೨೦೦-೫೧ವ |
| ಉಪ್ಪರವಟ್ಟ-ಮೆಲ್ಕಟ್ಟಿನ ಬಟ್ಟೆ | ೧೨-೬೪ |
| ಉಮುಱ್ ಉಗುಳು | ೬೫-೮೬ |
| ಉರ್ವೀಧರ-ಬೆಟ್ಟ | ೧೦-೫೬ |
| ಉರ್ವು-ಉಬ್ಬು, ಹೆಮ್ಮೆಪಡು | ೧೧೮-೩೬ |
| ಉಲೂಖಲ-ಒರಳು | ೧೮೩-೮೨ವ |
| ಉಲ್ಕಾ-ಉಲ್ಕಾಪಾತ | ೮೪-೫೩ |
| ಊರುಬ್ಬೆ-ಊರಿಗೆ ಆವಿಗೆಯಂತಿರುವ | ೧೧೧-೨ವ |
| ಊಷ್ಮ-ಝಳ, ಉಷ್ಣ | ೧೧೬-೨೦ |
| ಋತ-ಸತ್ಯ | ೧೧-೫೯ |
| ಎಡೆಗಱು-ತುಂಬು | ೫೧-೨೩ |
| ಎಬಲ್ಕೆ-ಜೋತುಬಿದ್ದಿರುವುದು | ೧೧೯-೩೬ |
| ಎಱವಿ-ನೀವಿ | ೨೧೩-೧೦೨ |
| ಏಣ-ಜಿಂಕೆ | ೫೯-೬೨ |
| ಏನ್ನೈಸು-ವ್ಯಥೆಪಡು | ೧೨೫-೬೩ವ |
| ಏಳ-ಒಂದು ಬಗೆಯ ಕುರಿ | ೧೨೪-೫೬ |
| ಒಟ್ಟೈಕ-ಒಂದೇ ಸಮನೆ | ೬-೩೭ |
| ಒಟ್ಟಜೆ-ಅತಿಶಯ, ಶೌರ್ಯ | ೧೯೨-೨೦ |
| ಒಱಲೆ-ಗೆದ್ದಲು | ೨೦೦-೫೧ |
| ಕೊಸಗು-ಕರ್ಣಿಕಾರ, ಬೆಟ್ಟದಾವರೆ | ೧೪೩-೧೯ |
| ಓಜೆ-ಶಕ್ತಿ | ೨೧೫-೧೧೨ |
| ಔರ್ವ-ಬಡಬಾಗ್ನಿ, ಕಡಲುರಿ | ೭೭-೧೭ |

| | ಪುಟ—ಪದ್ಯ |
|---|---|
| ಕಕ್ಕಡೆ-ಈಟಿ, ಆಯುಧ | ೫೧-೨೫ |
| ಕಕುಭ-ವೀಣೆಯ ಕೆಳಭಾಗದಲ್ಲಿ ಬಗ್ಗಿರುವ ಭಾಗ | ೨೦೯-೮೨ |
| ಕಕುದ್ಮತ್-ಎತ್ತು | ೨೦೯-೮೨ |
| ಕಂಕಣ-ಬಳೆ | ೧೭೩-೪೧ |
| ಕಂಕಪತ್ರ-ಹದ್ದಿನ ರೆಕ್ಕೆಗಳುಳ್ಳ ಬಾಣ | ೫೮-೬೦ವ |
| ಕಂಕಾಳ-ಅಸ್ಥಿಪಂಜರ | ೧೧೯-೩೮ |
| ಕಚ-ತಲೆಗೂದಲು | ೧೨-೬೫ |
| ಕಂಜ-ತಾವರೆ | ೧೩-೭೨ |
| ಕಟ-ಗಂಡಸ್ಥಳ | ೧೩೧-೯೨ |
| ಕಡುಗಂದಿ-ಮಕ್ಕಳನ್ನು ಹೆಚ್ಚಾಗಿ ಹಡೆದವಳು | ೧೯೩-೨೧ವ |
| ಕಡೆ-ರಂಗವಲ್ಲಿ | ೨೬-೬ |
| ಕಣಿಕೆ-ಚೂರು | ೮-೪೬ |
| ಕಂಟಣಿಪು-ಹಿಗ್ಗು, ಅರಳು | ೧೦೬-೧೪೮ |
| ಕಂಡಿಕೆ-ತುಂಡು | ೧೧೦-೨ವ |
| ಕಣ್ಬರಿ-ಒಪ್ಪುವ ನೋಟ | ೯೨-೮೬ |
| ಕಣ್ಬೇಲಿ-ಕಣ್ಣುಳ್ಳ ನವಿಲುಗರಿ | ೧೨೩-೫೫ವ |
| ಕಣ್ಬೊಣರ್-ಜೊತೆಗಣ್ಣುಗಳು | ೨೨-೧೧೩ |
| ಕಣ್ಮರಲ್-ಕಣ್ಣೆಂಬ ಹೂವು | ೮೩-೫೧ |
| ಕತ್ತಿಗೆ-ಒಂದು ಬಗೆಯ ಕತ್ತಿ | ೧೧೯-೩೮ |
| ಕದಳಿ-ಬಾಳೆ | ೪೦-೭೧ |
| ಕಂತುಮನ-ಕಾಮಾಕಾಂಕ್ಷೆ | ೯೬-೯೯ |
| ಕಂದರ್ಪ-ಮನ್ಮಥ | ೧-೨ |
| ಕಂದಳಿತ-ಚಿಗುರೊಡೆದ | ೧೪೭-೨೯ |
| ಕಂದುಕ-ಚೆಂಡು | ೭೧-೧೧೪ |
| ಕಮಠ-ಆಮೆ | ೧೯೦-೧೩ |
| ಕಂಪಿಲ್ಲ-ಹುಳಿಹೀರೆ | ೫೪-೩೫ |
| ಕರಂಡಗೆ-ಸಂಪುಟ, ಭರಣಿ | ೧೪೬-೨೩ |
| ಕರಪಾತ-ಕಿರಣಗಳ ಬೀಳುವಿಕೆ | ೯೧-೮೩ |
| ಕರಸಾದಂ-ನಿರ್ಋತಿ ದೇವತೆ(ನೈರುತ್ಯ) | ೧೫೩-೫೫ |
| ಕರಿಮುರಿ-ಸುಟ್ಟು ಕಪ್ಪಾಗುವುದು | ೭೦-೧೦೮ |
| ಕರುಮಾಡ-ಉಪ್ಪರಿಗೆ | ೪೩-೯೨ |
| ಕರುವಿಡು-ರೂಪಿಸು | ೩೭-೫೪ವ |
| ಕರ್ಬುರ-ನಾನಾವಿಧವಾದ ಬಣ್ಣ | ೧೬-೯೭ |
| ಕಲನ್-ಪಾತ್ರೆ | ೫೭-೫೧ |
| ಕವ-ಕ್ರಮ | ೩೦-೨೩ |
| ಕವಡಿಕೆ-ಕವಡೆ | ೧೮೬-೯೨ವ |
| ಕವಿಲ್ತ-ಕಂದು ಬಣ್ಣದ | ೧೪೬-೨೩ |
| ಕಸವರ-ಚಿನ್ನ | ೧೭೯-೬೪ |
| ಕಳಮ-ಬತ್ತ | ೪೯-೧೮ವ |
| ಕಳಿಂಚು-ವಂಚನೆ | ೫೨-೨೮ವ |
| ಕಳ್ಳಸಿಗ-ಹೆಂಡ ಮಾರುವವ | ೯೯-೧೧೪ವ |
| ಕಾಕ್ಷ> ಕಕ್ಷ : (?)—ಗೇರುಮರ | ೫೪-೩೫ |
| ಕಾಜು-ಗಾಜು | ೯-೪೭ |
| ಕಾಂಚನ-ಚಿನ್ನ | ೮-೪೬ |
| ಕಾನೀನ-ಕನ್ಯಾಪುತ್ರ, ಕರ್ಣ | ೯೫-೯೭ |
| ಕಾಮಿತ-ಇಚ್ಛಿಸುವುದು | ೪-೨೨ |
| ಕಾಯ್ಗಾಲಿಗೊಡು ? | ೧೨೦-೪೧ವ |
| ಕಾವಣ-ಚಪ್ಪರ | ೧೨೨-೫೨ |
| ಕಾಶ್ಮರ್ಯ-ಶಿವನೇಮರ | ೫೪-೩೫ |
| ಕಾಸರಪತಿ-ಕೋಣ | ೫೫-೪೪ |
| ಕಾಸಾರ—ಸರೋವರ | ೨೦೨-೫೭ವ |
| ಕಾಳ್ಕೊಚಿ-? | ೩೨-೩೬ |
| ಕಾಟ್ಬುರ-ಕಾಡಿನ ಪ್ರವಾಹ | ೪೪-೯೬ |
| ಕೆಂಜಲ್ಕ-ತಾವರೆಯ ಕುಸುಮ | ೮೮-೬೮ವ |
| ಕಿಟಿ-ಕಾಡು ಹಂದಿ | ೫೯-೬೨ |

| ಪದ-ಅರ್ಥ | ಪುಟ—ಪದ್ಯ |
|---|---|
| ಕಿತವ-ಮೋಸ | ೧೭೬-೫೦ |
| ಕಿಸಲಯ-ಚಿಗುರು | ೧೯-೧೦೧ |
| ಕಿಸುರು-ಜಗಳ | ೧೦೭-೧೪೯ |
| ಕೀನಾಶ-ಯಮ | ೨೦೯-೮೪ವ |
| ಕೀಲಣೆ-ಜೋಡಿಸುವಿಕೆ | ೧೩೩-೧೦೭ |
| ಕೀಲಾಲ-ರಕ್ತ | ೧೧೭-೨೭ |
| ಕುಂಜರ-ಆನೆ | ೬೦-೬೫ |
| ಕುಟ್ಟಿನಿ-ತಲೆ ಹಿಡುಕಿ | ೧೦೭-೧೫೦ |
| ಕುಣಪಾಲಯ-ಶ್ಮಶಾನ | ೧೧೭-೨೭ |
| ಕುತ್ತು-ಬಾಗು | ೪೧-೭೭ |
| ಕುತ್ಸಿತ-ತುಚ್ಛ | ೧೦೩-೧೨೮ |
| ಕುದ್ದಾಳ-ಗುದ್ದಲಿ | ೧೮೬-೯೦ |
| ಕುಂದ-ಮೊಲ್ಲೆ | ೩೮-೬೨ |
| ಕುಂಬು-ನಮಸ್ಕರಿಸು | ೪೨-೮೫ |
| ಕುಂಭೀ-ಶಿವನಿ ಅಥವಾ ತೇಗದಮರ | ೫೪-೩೫ |
| ಕುಮತ-ಕೆಟ್ಟ ಅಭಿಪ್ರಾಯ | ೯೫-೯೮ |
| ಕುಯಕ-ಕುಹಕ | ೨೦೦-೫೧ |
| ಕುರವಕ-ಗೋರಂಟೆ ಅಥವಾ ಮದರಂಗಿ ಮರ | ೫೪-೩೫ |
| ಕುಲಟೆ-ದುಷ್ಟೆ | ೬೨-೭೨ |
| ಕುವಳಯ-ಕನ್ನೈದಿಲೆ | ೬-೩೩ |
| ಕುಸುಂಕುೞು-ಇಕ್ಕಟ್ಟಾದ ಪ್ರದೇಶ | ೬೪-೭೯ವ |
| ಕುಸುಂಬೆ-ಕುಸುಮೆಗಿಡ | ೧೭೦-೩೨ |
| ಕುಳಕ-ಎಬೊನಿ (ಕಪ್ಪುಜಾತಿ) ಮರ | ೫೪-೩೫ |
| ಕೂಜನ-ಉಲಿವು | ೮೭-೬೮ವ |
| ಕೂನ-ಕುಱುಹು, ಚಿಹ್ನೆ | ೨೫-೩ವ |
| ಕೂಪಾರ-ಸಮುದ್ರ | ೧೩೮-೧ |
| ಕೂರ್ಮೆ-ಪ್ರೀತಿ | ೧೧೪-೧೧ |
| ಕೂಜಿಕಿ-ವಸ್ತು | ೧೬೫-೯ |
| ಕೃತಾಂತ-ಯಮ | ೧೩-೬೯ |
| ಕೃಪಣ-ಲೋಭಿ | ೯೯-೧೧೪ |
| ಕೆಕ್ಕಳ-ಭಯವಿಕಾರ | ೯೯-೧೧೪ವ |
| ಕೆತ್ತ-ಮುಚ್ಚಿದ | ೧೭-೮೯ |
| ಕೆಂದಳ-ಕೆಂಪಾದ ಅಂಗೈ | ೧೯-೧೦೦ |
| ಕೆಪ್ಪನೆ-ಸುಮ್ಮನೆ | ೧೩೬-೧೧೩ವ |
| ಕೆಮ್ಮಗೆ-ಸುಮ್ಮನೆ | ೧೧೪-೧೧ |
| ಕೆಯ್ತಂ > ಗೆಯ್ತಂ-ಕೆಲಸ | ೩೭-೫೮ |
| ಕೆರಸಿ-ಗೆರಸಿ | ೧೨೧-೪೩ |
| ಕೆಳರ್-ಕೆರಳು | ೧೯೮-೪೦ |
| ಕೇಯೂರ-ತೋಳಬಂದಿ | ೪೫-೧ |
| ಕೇರ್ಗಟ್ಟು-ಗೋಡೆಕಟ್ಟು | ೬೧-೬೯ |
| ಕೇವಣಿಸು-ಕೆತ್ತಿಸು | ೬-೩೦ |
| ಕೇಸಡಗು-ಕೆಂಪು ಮಾಂಸ | ೫೬-೫೦ |
| ಕೈತವ-ಮೋಸ | ೫೧-೨೪ |
| ಕೈಪೆ-ಕಹಿ | ೮೧-೪೩ |
| ಕೈಪೊಡೆ-ಕೈಚೀಲ | ೫೯-೬೧ |
| ಕೈವಲ-ಕೈಶಕ್ತಿ | ೧೪-೭೪ |
| ಕೈವಾರ-ಹೊಗಳಿಕೆ | ೧೨೭-೬೮ |
| ಕೊಕ್ಕರಿಸುಂ-ಅಸಹ್ಯಪಡಿಸು | ೧೫೪-೫೬ |
| ಕೊಡಂಕೆ-ಕಿವಿ | ೧೮೪-೮೪ |
| ಕೊಣಕಿಡು-ನೆಗೆ, ಹಾರು | ೧೮-೯೨ವ |
| ಕೊಣಸು-ಕರು | ೧೮-೯೨ವ |
| ಕೊಂತ-ಒನಕೆ | ೯೧-೮೪ವ |
| ಕೊಪ್ಪು-ಕಿವಿಯ ಮೇಲ್ಭಾಗ? | ೧೪೬-೨೩ |
| ಕೊಂಬು-ವಾದ್ಯ ವಿಶೇಷ | ೪೨-೮೫ |
| ಕೊರ್ವಿಸು-ಕೊಬ್ಬಿಸು | ೯೯-೧೧೪ವ |
| ಕೊಸಗು-ಬೆಟ್ಟದಾವರೆ | ೮೮-೬೮ವ |
| ಕೊಳಗು-ಗೊರಸು | ೧೦೧-೧೨೩ವ |

| | ಪುಟ—ಪದ್ಯ |
|---|---|
| ಕೊಟಕ್ಕಿಸರ್-ರಾಡಿಯಾದ ಕೆಸರು | ೫೯-೬೪ |
| ಕೋಟರ-ಮರದ ಪೊಟರೆ | ೫೫-೪೩ |
| ಕೋದು-ಪೋಣಿಸಿ | ೧೦೨-೧೨೭ |
| ಕೋವಣ-ಕೌಪೀನ | ೧೪೬-೨೩ |
| ಕೋಟಿಶೃಗ-ಕೊಂಬು ಮೂಡಿದ ಮುಖ | ೯೫-೯೬ವ |
| ಕ್ವಣಿತ-ಶಬ್ದ | ೧೨೬-೬೬ವ |
| ಕ್ನೋದ-ಕದಡುವಿಕೆ | ೧೩೨-೯೭ |
| ಖದಿರ-ಕಾಚಿನಮರ | ೧೨೯-೮೨ |
| ಖರಕರ-ಸೂರ್ಯ | ೪೩-೯೨ |
| ಖಡ್ಗಿ-ಕತ್ತಿಯುಳ್ಳದ್ದು | ೨೦೧-೫೫ |
| ಖೇಟಕ-ಗುರಾಣಿ | ೨೦೪-೬೪ವ |
| ಗಜಗಲಿಸು-ಮಿನುಗು, ಹೊಳೆ | ೯೯-೧೧೪ವ |
| ಗಂಧಿಗ-ಗಂಧವನ್ನು ಮಾರುವವ | ೧೩೨-೯೭ |
| ಗರಗರಿಕೆ-ಲಾಲಿತ್ಯ | ೧೪೫-೨೦ವ |
| ಗರ್ತ-ಕುಳಿ | ೧೯೪-೨೨ವ |
| ಗಹ್ವರ-ಗುಹೆ | ೪೨-೮೩ |
| ಘಟ್ಟಿವಟ್ಟಿ-ಗಚೆಯ ದಾರಿ | ೧೩೫-೧೧೩ವ |
| ಗಾಡಿ-ಸೌಂದರ್ಯ, ಚೆಲ್ವು | ೪೮-೧೫ |
| ಗಾಯಿಲೆ- ಖಾಯಿಲೆ ? | ೧೧೦-೨ವ |
| ಗಾರುತ್ಮತ-ಗರುಡಮಣಿ | ೨೦೦-೪೮ |
| ಗಾವರ-ಶಬ್ದ | ೧೨೭-೬೮ |
| ಗಾಳಿಸು-ಬಿಗಿಯಾಗಿ ಕಟ್ಟು ? | ೧೪೦-೧೦ |
| ಗೀರ್ವಾಣ-ದೇವತೆ | ೨೧೭-೧೨೦ |
| ಗುಗ್ಗುಳ-ಸುವಾಸನಾ ದ್ರವ್ಯ | ೧೩೨-೯೭ |
| ಗುಣಾಚೆ-ಸ್ತ್ರೀಯರ ಶೃಂಗಾರದ ಕೊಠಡಿ ? | ೮೭-೬೮ವ |
| ಗುಂದ್ರಾ-ಪ್ರೇಂಕಣಗಿಡ | ೫೪-೩೫ |

| | ಪುಟ—ಪದ್ಯ |
|---|---|
| ಗೂಂಟು-? | ೧೧೧-೨ವ |
| ಗೃಹಮೇಧಿ-ಗೃಹಸ್ಥ | ೧೫-೭೯ |
| ಗೇಯ-ಸಂಗೀತ | ೧೨೭-೬೮ |
| ಗೊಂಕೆ-ಕೊರಳು | ೧೯೩-೨೨ವ |
| ಗ್ರಾವ-ಬಂಡೆ | ೫೯-೬೩ |
| ಗ್ರೀವ-ಕೊರಳು | ೫೯-೬೨ |
| ಗ್ರೈವೇಯಕ-ಕೊರಳಹಾರ | ೩೫-೪೯ |
| ಚಂಚರೀಕ-ತುಂಬಿ | ೮೮-೬೮ವ |
| ಚಂಡಿಕೆ-ತಲೆಗೂದಲ ಗಂಟು | ೧೮-೬೨ವ |
| ಚದುಕ-? | ೩೩-೩೯ |
| ಚಪೇಟ-ಅಂಗೈ | ೫೬-೪೬ |
| ಚರೆಯು-? | ೧೫೬-೬೬ವ |
| ಚಲ್ಲ-ಸೊಗಸು | ೪೪-೯೫ |
| ಚಲ್ಲಣ-ಚಡ್ಡಿ | ೨೦೪-೬೭ವ |
| ಚಳೆಯ-ತಳೆಯುವುದು | ೪೪-೯೫ |
| ಚಾಂಪೇಯ-ಸಂಪಿಗೆಗೆ ಸಂಬಂಧಪಟ್ಟ ಮರ | ೩೭-೫೬ |
| ಚಾಳಯ-ಗತಿಲಂಘನ | ೬೮-೧೦೧ವ |
| ಚಿಕುರ-ಮುಂಗುರುಳು | ೨೭-೧೨ |
| ಚೌಪಳಿಕೆ-ಮನೆಯ ಮುಂಭಾಗದ ಮಂಟಪ ? | ೪೭-೧೦ವ |
| ಜಕ್ಕುಲಿಸು-ಚಕ್ಕಳಗುಳಿ ಇಡು | ೨-೯ |
| ಜಂಗಮವಿಷ-ಓಡಾಡುವ ವಿಷ | ೧೧೮-೩೪ |
| ಜತಿ-ಯತಿ, ಲಯ | ೧೫೦-೪೦ |
| ಜತ್ರುಕುಜ-? | ೧೮೪-೮೫ |
| ಜಂಬೂ—ನೇರಿಲೆ ಮರ | ೪೦-೭೧ |
| ಜಂಭ—ನಿಂಬೆಗಿಡ | ೫೪-೩೫ |
| ಜರಗು—ಚಿನ್ನದ ಕಣಗಳನ್ನುಳ್ಳ ಮರಳು | ೯-೪೯ |
| ಜಲಕನಾಗು—ಶುಭ್ರವಾಗು, ಪ್ರಕಾಶವಾಗು | ೧೧೩-೮ |

| | ಪುಟ—ಪದ್ಯ | | ಪುಟ—ಪದ್ಯ |
|---|---|---|---|
| ಜಾಣ್-ಜಾಣತನ | ೩೬-೫೩ವ | ತಿಸರ-ಮೂರೆಳೆಯ ಸರ | ೧೨೩-೫೫ವ |
| ಜಾದುಕಲ್ಲು-ಕಾವಿಯಕಲ್ಲು | ೧೯೪-೨೨ವ | ತುಟುಗಲ್-ಗೊಂಚಲು | ೩೯-೬೭ |
| ಜಿಂಕರ-ವಾದ್ಯ | ೨೦೭-೭೫ವ | ತುಟುಪಟ್ಟಿಗೆ-ದನಗಾಹಿಗಳ ಹಳ್ಳಿ | ೧೯೩-೨೦ವ |
| ಜುಟು-ಸುರಿ, ಸದ್ದುಮಾಡಿ ಕುಡಿಯುವುದು | ೧೯೪-೨೨ವ | ತುಟುಂಬು-ತುರುಬು | ೧೩-೭೦ |
| ಜೂದು-? | ೫೭-೫೧ | ತುಷಾರ-ಮಂಜು | ೧೩-೬೮ವ |
| ಜೊನ್ನ-ಬೆಳುದಿಂಗಳು | ೧೩-೬೮ | ತುಹಿನಕರ-ಚಂದ್ರ | ೨೦-೧೦೬ |
| ಡಾಳೆಯರ್-ತಳುಕನ್ನುಳ್ಳವರು | ೧೦೬-೧೪೭ | ತೂಳ್-ತಳ್ಳು, ನೂಕು | ೯೭-೧೦೭ವ |
| ಡಿಂಡಿಮ-ಭೇರಿ | ೪೮-೧೪ | ತೂಳಿಕೆ-ಬಣ್ಣ ಹಾಕುವ ಕುಂಚ | ೧೨೦-೪೧ವ |
| ತಂತ್ರಾವಾಪ-? | ೩೪-೪೨ವ | ತೆಮಳ್-ಒಟ್ಟಾಗು ? | ೬೫-೮೬ |
| ತಂದಲ್-ತುಂತುರು | ೩೩-೪೧ | ತೆಟುಂಬೊಳೆ-ಬಗೆಬಗೆಯಾಗಿ ಪ್ರಕಾಶಿಸು | ೧೪೮-೩೩ |
| ತಬುಕ್ಯ-ಒಂದು ಹಕ್ಕಿ ? | ೧೧೯-೪೧ | ತೆಲ್ಲಂಟಿ-ಬಳಹಳಿ | ೩೩-೩೮ವ |
| ತಮಾಳ-ಹೊಂಗೆಮರ | ೮೫-೬೦ | ತೊಂಗಲ್-ಗೊಂಚಲು | ೧೨೩-೫೫ವ |
| ತರಕ್ಷು-ಹುಲಿ | ೫೭-೫೧ | ತೊಡಂಕೆ-ತೊಡರಿಕೊಳ್ಳುವುದು | ೧೪೦-೧೧ |
| ತರಸ್ವಿ-ಗರುಡ | ೪೬-೫ | ತೋಯ-ನೀರು | ೮೧-೪೪ |
| ತಲಕಟಿವಾಡು-ಒರಟುತನವನ್ನು ತೋರಿಸು ? | ೧೬೭-೧೫ವ | ತೋಲ್ವನೆ-ತೋಲ್+ವನೆ= ತೊಗಲು ಮತ್ತು ಕೊದಲು | ೬೩-೭೬ |
| ತವಂಗ-ವೇದಿಕೆ | ೧೮-೯೨ವ | ತೋಷ-ಸಂತೋಷ | ೧೧-೫೯ |
| ತವಿಲ್-ಕ್ಷಯ, ನಾಶ | ೭೫-೧೧ | ದಗಿ ಅಥವಾ ದಗೆ-? | ೧೧೪-೧೫ |
| ತವೆ-ಮುಗಿದುಹೋಗು | ೮೨-೪೫ | ದಡ್ಡು-ಜಡ್ಡು | ೧೦೬-೧೪೬ |
| ತಸ್ಕರರ್-ಕಳ್ಳರು | ೧೧೭-೩೦ | ದಂತಾವಳ-ಆನೆ | ೧೩೫-೧೧೨ |
| ತಟು-ಕೊಡೆ | ೧೫-೮೩ | ದಂದಶೂಕ-ಸರ್ಪ | ೧೧೯-೪೪ವ |
| ತಾಪಿನಂ-ತಗುಲುತ್ತಿರಲು | ೧೪೭-೩೦ | ದಂದುಗ-ಕಷ್ಟ | ೧೫-೮೨ |
| ತಾರಗೆ-ನಕ್ಷತ್ರ | ೫೬-೪೫ | ದಬ್ಬುಕ-ದಬ್ಬಳ | ೪೯-೧೮ |
| ತಾಟಿ-ತಾರೆಮರ | ೧೮೬-೯೧ | ದಯಿತ-ಪ್ರಿಯ | ೭೮-೨೪ |
| ತಿಕ್ಷ-? | ೨೦೧-೫೩ | ದಾಡಿಮ-ದಾಳಿಂಬೆ | ೪೦-೭೧ |
| ತಿಗ್ಮಾಂಶು-ಸೂರ್ಯ | ೧೬೦-೭೭ | ದಾವತಿ-ಶ್ರಮ, ಆಯಾಸ | ೧೭೬-೫೦ |
| ತಿಂಕುಮೊಳಗು-? | ೧೩೬-೧೧೩ವ | ದಿವ-ಸ್ವರ್ಗ | ೫೫-೪೩ |
| ತಿರೋಹಿತ-ಮರೆಯಾದ | ೧೨೯-೭೮ | | |
| ತಿವುರು-ಲೇಪನ | ೨೦೬-೭೩ವ | | |

ಪುಟ—ಪದ್ಯ

ದೀಂಟಿ-ಮರಳಿನ ರಾಶಿ ೫೭-೫೧
ದೀಧಿತಿ-ಪ್ರಕಾಶ ೨೦೪-೬೬
ದೀಪ್ರ-ಹೊಳೆಯುವ ೪೧-೭೯
ದೀಪ-ಮೃಗಗಳನ್ನು ಆಕರ್ಷಿಸಲು ಉಪಯೋಗಿಸುವ ಪ್ರಾಣಿ ೮೮-೬೮ವ
ಧೀವರ-ಬೇಡ ೬೪-೮೪
ದುಮ್ಮನ-ವ್ಯಥೆ ೨೨-೧೧೧
ದುರಘ-ಪಾಪ ೪೯-೧೮ವ
ದೂವೆ-ಧೂಮ, ಹೊಗೆ ೧೨೦-೪೧ವ
ದೂರ್ವಾಪಣ-ಗರಿಕೆಯ ಮೊಳಕೆ ೨೦೦-೪೮
ದೃಪ್ತ-ಗರ್ವಿತ, ಸೊಕ್ಕಿನ ೭೧-೧೧೬
ದೊಣೆ-ಬತ್ತಳಿಕೆ ೧-೨
ದೊಮ್ಮಳಿಸು-ಗಾಬರಿಗೊಳ್ಳು ೧೫೦-೩೯ವ
ದೋಹಳ-ಬಯಕೆ ೩೦-೨೬
ದೌವಾರಿಕ-ದ್ವಾರಪಾಲಕ ೨೧೧-೯೨
ದ್ಯುತಿ-ಪ್ರಕಾಶ ೯೮-೧೦೯
ದ್ವಿರದ-ಆನೆ ೭೬-೧೩ವ
ದ್ವಿಷ-ಶತ್ರು ೮೮-೬೮
ಧೂರ್ಜಟಿ-ಶಿವ ೧೦೭-೧೫೨
ನನೆಗಣೆ-ಹೂಬಾಣ ೧೪೨-೧೫
ನವಾಸಾರ-ಹೊಸದಾದ ಮಳೆ ೪೭-೧೨
ನಳಿನ-ತಾವರೆ ೮೫-೬೨
ನಾಗವಲ್ಲಿ-ವೀಳೆಯದೆಲೆಯ ಬಳ್ಳಿ ೮೭-೬೮ವ
ನಾದೇಯ-ಕಾಗಿಹೇರಳೆ ಗಿಡ ೫೪-೩೫
ನಾರಂಗ-ಕಿತ್ತಳೆ ೪೦-೭೧
ನಾಟ್-ನಾಡು ೧೧-೬೨ವ
ನಿಚಯ-ರಾಶಿ, ಸಮೂಹ ೧೪೧-೧೪ವ
ನಿಚುಳ-ನೀರುಹಲಸಿನ ಮರ ೫೪-೩೫
ನಿಚ್ಚಡ-ನಿಶ್ಚಲ? ೯೧-೮೨

ಪುಟ—ಪದ್ಯ

ನಿಬ್ಬಣ-ಉತ್ಸವ ೧೫೨-೪೮
ನಿರ್ಧೂಮಧೂಮ-ಕಾಂತಿಯಿಲ್ಲದ ಹೊಗೆ ೧೦೯-೨
ನಿರ್ಬಾಧ-ಕಷ್ಟವಿಲ್ಲದ ೭೪-೪
ನಿಷಾದಿ-ಮಾವುತ ೨೦೨-೫೭ವ
ನಿಸದ-ಸತ್ಯ ೧-೪
ನಿಸ್ತ್ರಿಂಶ-ಕ್ರೂರ ೧೧೩-೮
ನಿಳಿಂಪ-ದೇವತೆ ೫೩-೩೨ವ
ನೀಕರಿಸು-ಅವಹೇಳನ ಮಾಡು ೧೧೦-೨ವ
ನೀರಾಜನ-ಆರತಿ ೩೮-೫೯ವ
ನುಣ್ಬಸೆ-ನಯವಾದಹಾಸಿಗೆ ೧೦೬-೧೪೬
ನೃಶಂಸ-ಕ್ರೂರ ೧೭೦-೩೦
ನೆಕ್ಕ-ನೆಗ್ಗಿಹೋದ ೧೮೧-೭೦
ನೇವುರ-ಕಾಲಂದುಗೆ ೧೮-೯೨ವ
ನೊಣೆ-ನುಂಗು ೧೮೦-೬೯
ನೊಪ್ಪು-ಹಗುರವಾಗಿರುವಿಕೆ ೪೯-೧೬ವ
ನೋಗು-ವ್ಯಥೆಪಡು ೧೧೨-೫ವ
ನೋಂಪಿ-ವ್ರತ ೧೯೩-೨೦ವ
ನ್ಯಗ್ರೋಧ-ಆಲದಮರ ೫೪-೩೫
ಪಕ್ಕಣ-ಬೇಡರಹಳ್ಳಿ ೫೬-೫೦
ಪಕ್ಕರಿಸು-ಜೇನನ್ನು ಹಾಕು ೧೦೫-೧೪೧
ಪಕ್ಷ್ಮ-ಕಣ್ಣಿನ ರೆಪ್ಪೆ ೯೩-೯೧
ಪಂಗಿಗ-ಹಂಗಿಗ, ಋಣಿ ೧೫೮-೭೧
ಪಚ್ಚಡ-ಹಚ್ಚಡ, ದುಪ್ಪಟಿ ೧೨೬-೬೭
ಪಚ್ಚವಡಿಸು-ಹೊದೆಸು ೮೩-೫೦ವ
ಪಟಳ-ಸಮೂಹ ೫೫-೪೩
ಪಡಲಗೆ-ತಟ್ಟೆ ೧೬೪-೫ವ
ಪಡಲಿಡು-ಚೆದರಿಹೋಗು ೧೦೬-೧೪೫
ಪಡಿಯಱತಿ-ಬಾಗಿಲು ಕಾಯುವವಳು ೨೭-೧೩

| ಪದ | ಪುಟ—ಪದ್ಯ |
|---|---|
| ಪಣವ-ಮದ್ದಲೆ | ೧೫೦-೩೯ವ |
| ಪತ್ತಿ-೧ರಥ, ೧ಆನೆ, ೩ಕುದುರೆ ಗಳು ಮತ್ತು ೫ಕಾಲಾ ಳುಗಳ ಗುಂಪು | ೩೬-೫೩ |
| ಪಥ-ಅಳಲೇಕಾಯಿ ಮರ | ೫೪-೩೫ |
| ಪದಿರ್-ಸಂಕೇತದ ಮಾತು | ೪೦೨-೧೨೬ವ |
| ಪನಸು-ಹಲಸು | ೩೭-೫೬ |
| ಪನೆ-ಮೋಳೆವ ಹಲ್ಲು | ೧೮೨-೭೬ |
| ಪಂದರ-ಚಪ್ಪರ | ೫೭-೫೧ |
| ಪಯೋಜ-ಕಮಲ | ೮೫-೫೮ |
| ಪಯೋದ-ಮೋಡ | ೧೭೬-೪೯ |
| ಪರಲು-ಹರಳು | ೧೯೦-೧೧ |
| ಪರಾಂಗಣ-ಅಂಗಣದ ಹಿಂಭಾಗ | ೮೩-೫೦ವ |
| ಪರಿಜು-ಆಕಾರ, ರೂಪು | ೧೧೦-೨ವ |
| ಪರಿಮರಿ-ಹಾರುಗುಪ್ಪೆ | ೮೬-೬೪ |
| ಪರಿವಿಷ್ಟ-ಕುಳಿತುಕೊಂಡ | ೨೧-೧೯ವ |
| ಪರಿವೇಷ-ಸೂರ್ಯಚಂದ್ರರ ಸುತ್ತ ಬೆಳಕು ಕಟ್ಟುವುದು | ೪೧-೮೦ |
| ಪರೇತವನ-ಶ್ಮಶಾನ | ೧೧೬-೨೧ |
| ಪಲಗೆಜೂಜು-ಜೂಜಿನ ಒಂದು ಬಗೆ | ೧೧೮-೩೬ |
| ಪಲಾಶ-ಮುತ್ತುಗದ ಮರ | ೧೪೬-೨೩ |
| ಪಲ್ಲವ-ಚಿಗುರು | ೨-೮ |
| ಪಲ್ಲೆ-ಹಲ್ಲೆ | ೧೯೪-೨೭ವ |
| ಪಸದನ-ತೊಡಿಗೆ | ೨೭-೧೩ವ |
| ಪಸಲೆ-ಹಸಲೆ, ಗರಿಕೆ | ೧೭೫-೪೭ವ |
| ಪಸಾಯ-ಪ್ರಸಾದ | ೧೨೬-೬೭ವ |
| ಪಸುಗೆ-ಕ್ರಮ | ೩೬-೫೨ |
| ಪಟಯಿಗೆ-ಬಾವುಟ | ೭೧-೧೧೪ |
| ಪಾಟಳ-ನಸುಗೆಂಪು | ೧೦೦-೧೨ |
| ಪಾಟಿತ ಒಡೆದ | ೫೬-೪೬ |
| ಪಾಣವಿಕ-ಮದ್ದಲೆಯವ | ೧೫೦-೩೯ವ |
| ಪಾಣ್ಬ-ಜಾರ, ಸಿತಗ | ೩೪-೪೫ |
| ಪಾದಪ-ಮರ | ೧೧-೬೧ |
| ಪಾಪೆ-ಕಣ್ಣಿನ ಪಾಪೆ | ೧೧೬-೨೪ |
| ಪಾಯ್ದಾಳ-ಕಾಲಾಳು ? | ೮೮-೬೮ವ |
| ಪಾರಾವತ-ಪಾರಿವಾಳ | ೭೦-೧೦೭ |
| ಪಾಱ್-ವಿಮಾನ | ೧೫೩-೫೫ |
| ಪಾಱುಗಳ್-? | ೪೨-೮೩ |
| ಪಾರ್ವಣಶಶಿ-ಪರ್ವ ಕಾಲದ ಚಂದ್ರ | ೩೦-೨೭ |
| ಪಾವಸೆ-ಪಾಚಿ | ೧೬-೮೭ |
| ಪಾಷಾಣಕ-ಕಲ್ಲು | ೯೯-೧೧೩ |
| ಪಿಚುಳ-ಕಕ್ಕೇಗಿಡ | ೫೪-೩೫ |
| ಪಿಂಛ-ನವಿಲುಗರಿ | ೧೨೭-೬೯ |
| ಪಿಂಜರ-ಪಿಂಗಲ, ನಸುಗೆಂಪು | ೪೦-೬೯ |
| ಪಿಣಿಲ್-ಹೆರಳು | ೬೬-೯೨ |
| ಪಿಪ್ಪಲ-ಹಿಪ್ಪಲಿಮರ | ೧೦೭-೧೫೩ |
| ಪಿಲ್ಲಣಿಗೆ-ಪಿಲ್ಲಿ ಎಂಬ ಕಾಲುಂಗುರ | ೪೮-೧೪ |
| ಪಿಲ್ಲಿಸು-? | ೪೮-೧೪ |
| ಪಿಶುನ-ಚಾಡಿಕೋರ | ೧೧೫-೧೯ |
| ಪೀತನ-ಅಂಬಟೆಮರ | ೪೦-೭೧ |
| ಪೀಲಿ-ನವಿಲುಗರಿ | ೧೫-೮೩ |
| ಪುಡಿಕೆ-ಪೆಟ್ಟಿಗೆ | ೪೧-೭೫ |
| ಪುಣಿಲ್-ಮರಳು | ೮೦-೨೭ |
| ಪುತ್ರಕಾಮ್ಯ-ಮಗನ ಬಯಕೆ | ೨೬-೮ |
| ಪುದು-ಸಮಾನ | ೨೦೧-೫೬ |
| ಪುನ್ನಾಗ-ಸುರಹೊನ್ನೆ | ೫೪-೩೮ |
| ಪುರುಡು-ಹುರುಡು, ಸ್ಪರ್ಧೆ | ೫೩-೩೨ |
| ಪುಳುಂಬು-ಬಾಣ | ೧೨೩-೫೫ವ |

ಪುಟ—ಪದ್ಯ

ಪುಳ್ಳಳೆ-ಹುಳಿ ಮಜ್ಜಿಗೆ ೧೫೯-೭೪ವ
ಪೂಣ್-ಪ್ರತಿಜ್ಞೆ ೬೪-೭೯ವ
ಪೂತ-ಪರಿಶುದ್ಧ ೬೧-೭೧ವ
ಪೇಚಕ-ಬಾಲದಬುಡ ೧೩೦-೮೯
ಪೇರಣೆಮಣಿ--? ೧೦೧-೧೨೨
ಪೇಳಿಗೆ-ಪೆಟ್ಟಿಗೆ ೧೯೧-೧೫
ಪೈಶೂನ್ಯ-ಚಾಡಿ ಹೇಳುವಿಕೆ ೧೮೦-೬೮ವ
ಪೊಕ್ಕುಬಿಗೊಡು-? ೧೦೯-೨ವ
ಪೊಗಸು-ಪ್ರಾತಃಕಾಲ ೭೯-೩೨
ಪೊಂಗು-ಉಬ್ಬು, ಸಂತೋಷಪಡು ೭೮-೨೧
ಪೊಟ್ಟಣ-ಪಟ್ಟಣ ೯೫-೯೮
ಪೊಡೆಸೆಂಡು-ಹೊಡೆಯುವ ಚೆಂಡು ೪೩-೯೧
ಪೊಂತಿವಣೆ-? ೨೦೯-೮೪ವ
ಪೊಂಬಡಲಗೆ-ಚಿನ್ನದ ತಟ್ಟೆ ೨೯-೧೯
ಪೊರಜೆ-ಆನೆಯ ಕೊರಳಿಗೆ ಬಿಗಿಯುವ ಹಗ್ಗ ೧೩೬-೧೧೩ವ
ಪೊಳೆಯ-? ೬೮-೧೦೧ವ
ಪೋತಕ-ಮರಿ ೧೮-೯೪
ಪೋರ್-ಬಿಲ ೧೭-೯೦
ಪೋಳಿಯನ್-? ೧೯೯-೪೩
ಪೋಟಿಲ್-ಪೊಟರೆ ೬೪-೮೦
ಪ್ರಗಲ್ಭ-ಪ್ರೌಢ ೨೯-೧೯
ಪ್ರಥಿತ-ಪ್ರಸಿದ್ಧ ೧-೧
ಪ್ರಪಂಚಿತ-ವಿಸ್ತರಿಸಲ್ಪಟ್ಟ ೭೫-೯ವ
ಪ್ರವಾಳ-ಹವಳ ೨೨-೧೧೩
ಪ್ರಸ್ವನಿತ-ಹೆಚ್ಚು ಶಬ್ದ ಮಾಡುವ ೧೩೨-೯೬
ಪ್ರಾಜ್ಯ-ಶ್ರೇಷ್ಠ ೩೬-೫೨
ಪ್ರಾಲೇಯ-ಹಿಮ ೧೦-೫೩

ಪುಟ—ಪದ್ಯ

ಪ್ರಾವೃಟ್-ಮಳೆಗಾಲ ೮೪-೫೬ವ
ಪ್ರಾವೃಷ್-ಮಳೆಗಾಲ ೬೮-೧೦೨
ಪ್ರಿಯಕ-ಹೊನ್ನೇಮರ ೫೪-೩೫
ಪ್ರಿಯಾಳ-ಮೊರಟೇಗಿಡ ೫೪-೩೫
ಪ್ರೇಂಖ—ಉಯ್ಯಾಲೆ ೧೩೭-೧೧೯
ಪ್ರೋಚ್ಚಳಿತ—ಮೇಲಕ್ಕೆ ಚಿಮ್ಮಲ್ಪಟ್ಟ ೧೩೭-೧೧೯
ಪ್ಲಕ್ಷ—ಬಸರೀಮರ ೫೪-೩೫
ಫುಲ್ಲಶರ—ಮನ್ಮಥ ೮೭-೬೮ವ
ಫುಲ್ಲಾಂಬುಜ-ಅರಳಿದಕಮಲ ೬೭-೯೯
ಫೇರವ—ನರಿ ೫೪-೩೫
ಬಕುಳ—ಗೋಳೀ ಹೂವಿನಮರ ೩೪-೩೫
ಬಕ್ಕಳೆ—? ೫೫-೪೩
ಬಕ್ಕುಡಿ—ಚರ್ಚೆ ೧೨೭-೭೧
ಬಗರಗೆ—ಚಿಲುಮೆ ೧೪೫-೨೨ವ
ಬಂಚಿಸು—ವಂಚಿಸು ೨೦೦-೮೯
ಬಟ್ಟಸರಿ—ಹುತ್ತಾಡು? ೧೧೧-೪ವ
ಬಟ್ಟಸಾಮಿ—ವೇಶ್ಯೆಯರಪರವಾಗಿ ಕೆಲಸಮಾಡುವವ? ೭-೩೫
ಬಣಂಬೆ—ರಾಶಿ ೧೧೦-೨ವ
ಬಣೆವಾವು—ಒಂದು ಬಗೆಯ ಹಾವು ೨೦೯-೮೪ವ
ಬದರ—ಎಲಚೀಗಿಡ ೫೪-೩೫
ಬದ್ದವಣ—ಮಂಗಳವಾದ್ಯ ೩೩-೩೯
ಬದ್ದೆ—ಪತಿವ್ರತೆ ೧೦೦-೨ವ
ಬಂಬಳಂಬಾಡು—ಬಂಬಲಿನಂತೆ ಬಾಡು ೧೬೪-೫ವ
ಬರುಂಟು—ಪುಸಲಾಯಿಸು ೧೮೦-೬೬
ಬರ್ಹಿಣ—ನವಿಲು ೧೨-೬೫
ಬವಣೆಗೆ—ಸುತ್ತಾಟ ೧೧೧-೨ವ

| ಪದ | ಪುಟ—ಪದ್ಯ |
|---|---|
| ಬವಸೆ-ಉದ್ಯೋಗ | ೧೪-೭೮ |
| ಬಸ-ವಶ | ೧೮೪-೯೬ |
| ಬಸನ-ವ್ಯಸನ, ಗೀಳು | ೩೭-೫೪ವ |
| ಬಳ್ವಳ-ಅತಿಶಯ | ೪೭-೧೦ವ |
| ಬಾಂದೊಱೆ-ದೇವಗಂಗೆ | ೧೧-೬೨ವ |
| ಬಾನಂಗುೞಿ-ಗಗನಗರ್ತ ? | ೧೬೩-೨ |
| ಬಾಯಿಪ-ಬಾಗಿನ, ಉಡುಗರೆ | ೧೯೩-೨೧ವ |
| ಬಾಯ್ವಸವು-ಬಾಯಿನ ಕ್ಷಾಮ | ೧೩೯-೭ |
| ಬಾರಸ-ದ್ವಾದಶ | ೧೪೬-೨೩ |
| ಬಾಸಿಗ-ಪೂಮಾಲೆ | ೧೯೭-೩೫ |
| ಬಾಸುಱಿ-ಬಾಸುಂಡೆ | ೧೫೬-೬೬ |
| ಬಿಕ್ಕ-ಮಾಂಸ | ೧೧೯-೪೦ |
| ಬಿಂಜ-ವಿಂಧ್ಯ | ೧೦೦-೧೧೬ |
| ಬಿತ್ತರಿಗೆ-ಪೀಠ | ೧೨೫-೬೧ |
| ಬಿದುತಟ-ಕುಂಭಸ್ಥಲ | ೬೦-೬೫ |
| ಬಿಸ-ಮೃಣಾಲ | ೨೮-೧೫ |
| ಬಿಸಟಂಬರಿ-ವಿಸ್ತಾರವಾಗಿ ಓಡು | ೧೩೫-೧೧೩ವ |
| ಬಿಸರುಹ-ತಾವರೆ | ೧೨೫-೬೩ |
| ಬಿಸಲತೆ-ತಾವರೆಯ ಬಳ್ಳಿ | ೮೦-೩೭ |
| ಬಿಸಸದನ-ಸರೋವರ | ೧೩೩-೧೦೪ |
| ಬಿಸುಗದಿರ-ಸೂರ್ಯ | ೫೯-೬೩ |
| ಬೀಸರ-ವ್ಯರ್ಥ | ೯೨-೮೬ |
| ಬುಗುಟು-ಏಟು ಬಿದ್ದೆಡೆ ಊದುವುದು | ೧೮೪-೮೫ವ |
| ಬುಭುಕ್ಷಿತ-ಹಸಿದ | ೧೨೯-೭೮ |
| ಬೆಗಡು-ಭಯ | ೧೮೬-೯೧ವ |
| ಬೆಟ್ಟು-ಬೆಟ್ಟ | ೧೦೦-೧೨೦ |
| ಬೆಡಂಗು-ಸೊಬಗು | ೮-೪೨ |

| ಪದ | ಪುಟ—ಪದ |
|---|---|
| ಬೆಬ್ಬಸ-ಅತಿಯಾಗಿ ಗರ್ವಿಸು | ೧೮೬-೯೧ವ |
| ಬೆಳಂತಿಗೆ-ಹೊಳಪು, ಪ್ರಕಾಶ | ೨೮-೧೪ |
| ಬೆಳ್ವಾಸ-ಮೊಣಕಾಲುದ್ದ ನೀರಿನಲ್ಲಿ ನಿಂತು ತಪಸ್ಸು ಮಾಡುವುದು | ೮೬-೬೩ |
| ಬೇಕರಿ-ಬೆಂದು ಇಜ್ಜಲಂತೆ ಕಾಣುವ | ೧೬೩-೨ |
| ಬೇಳ್ವೆ-ಹೋಮ | ೧೪೫-೨೦ವ |
| ಬೊಜಗ-ವಿಟ | ೧೧೯-೪೧ವ |
| ಬೋಧಾಸಿ-ಜ್ಞಾನವೆಂಬ ಕತ್ತಿ | ೨-೫ |
| ಬ್ರಾತ-ಸಮೂಹ | ೧೭೯-೬೩ |
| ಭಗಣ ನಕ್ಷತ್ರದ ಗುಂಪು | ೧೪೫-೨೧ |
| ಭಂಜಿತ-ಭಂಗಮಾಡಲ್ಪಟ್ಟ | ೧೪೭-೨೯ |
| ಭಟ್ಟಿತ್ತಿಗೆ-ಪೂಜೆ ಮಾಡುವ ಭಟ್ಟನ ಹೆಂಡತಿ | ೧೪೩-೧೭ವ |
| ಭರ್ತಾರ-ಒಡೆಯ | ೫೧-೨೬ |
| ಭಾಃ-ಪ್ರಕಾಶವನ್ನುಳ್ಳ | ೫೫-೪೦ |
| ಭಾಸುರ-ಪ್ರಕಾಶ | ೧-೧ |
| ಭಿಲ್ಲ-ಬೇಡ | ೫೭-೫೬ |
| ಭುಂಭುಕ-ಪ್ರಸಿದ್ಧವಾದ ? | ೬೭-೯೭ವ |
| ಭೂಜ-ಮರ | ೫೪-೩೫ |
| ಭೈಕ್ಷ-ಭಿಕ್ಷೆ | ೧೭-೯೧ |
| ಮಂಜೂಷ-ಪೆಟ್ಟಿಗೆ | ೯೫-೯೬ |
| ಮಂಡನ-ಅಲಂಕಾರ | ೪೯-೧೬ |
| ಮದಿಲು-ಪೌಳಿ ಗೋಡೆ | ೧೧೫-೧೮ವ |
| ಮನ್ಯು-ದುಃಖ | ೧೭೧-೩೫ವ |
| ಮಂದಸ-ಚಿನ್ನದ ಪೆಟ್ಟಿಗೆ | ೯೪-೯೫ |
| ಮರಕತ-ಪಚ್ಚೆ | ೧೭೮-೫೮ |
| ಮರಮುಸಕ-ಹೆಚ್ಚಾದ ಕೋಪ | ೧೩೫-೧೧೩ವ |
| ಮರಾಳ-ಹಂಸ | ೧೮-೯೨ವ |
| ಮಲಹಾರಿ-? | ೧೧೩-೭ವ |

| | ಪುಟ—ಪದ್ಯ | | ಪುಟ—ಪದ್ಯ |
|---|---|---|---|
| ಮಲ್ಲಂತಿಗಿಱ-ಕಾಸೆಯನ್ನು | | ಮೇಪು-ಮೇವು | ೧೭೮-೫೬ |
| ತೊಡುವುದು | ೫೨-೨೮ವ | ಮೇಷ-ಆಡು | ೧೦೦-೧೧೮ |
| ಮಲ್ಲೀಮುಕುಳ-ಮಲ್ಲಿಗೆಯ | | ಮೇಳಾಪಕ-ಜೊತೆ | ೧೧೬-೨೪ |
| ಮೊಗ್ಗು | ೧-೨ | ಮೊಟಕಲಿಸು-? | ೧೫೧-೪೧ |
| ಮಸ್ತಿಷ್ಕ-ತಲೆಯ ಮಿದುಳು | ೧೧೯-೪೧ | ಮೌಂಜಿ-ಮುಂಜಿ | ೧೪೭-೩೧ |
| ಮಳಪಿಕ್ಕ-? | ೨೧೩-೧೦೨ | ಯಾದವೋದ-ಮೊಸಳೆ ? | ೧೩೫-೫೫ |
| ಮಳೀಮಸ-ಕೊಳಕು | ೧೩೫-೧೧೩ವ | ಯುವಾನ-ತರುಣ | ೧೫೭-೫೦ |
| ಮಾಂಕರಿಸು-ತಿರಸ್ಕರಿಸು | ೬-೨೯ | ಯುಷ್ಮತ್-ನಿಮ್ಮ | ೧೬೦-೭೬ |
| ಮಾಚಾಳಿಕೆ-? | ೧೧೨-೭ | ರದನಿ-ಆನೆ | ೫೫-೩೫ |
| ಮಾರ್ಗಡೆ-? | ೧೭೫-೪೫ | ರಂಭಾ-ಬಾಳೆಗಿಡ | ೫೪-೩೫ |
| ಮಾಲೂರ-ಬಿಲ್ವಪತ್ರೆಮರ | ೫೪-೩೫ | ರಯ್ಯ-ರಮ್ಯ | ೩೯-೬೪ |
| ಮಿಸುಪು-ಹೊಳಪು | ೬೦-೬೫ವ | ರವಳಿ-ಶಬ್ದ | ೨೦೭-೭೫ವ |
| ಮಿಳಿ-ಹಗ್ಗ | ೧೦೭-೧೨೩ವ | ರಾಜಿಳ-ನೀರುಹಾವು | ೫೪-೩೭ |
| ಮಿಳ್ಳಿಸು-ಅಲುಗಿಸು | ೯೫-೯೫ವ | ರಾಳ-? | ೧೧೬-೨೦ |
| ಮೀಂಗುಲಿಗ-ಬೆಸ್ತ | ೭೪-೪ | ರಿಚೆ-? | ೩೩-೩೯ |
| ಮೀನಕೇತು-ಮನ್ಮಥ | ೬೬-೯೩ವ | ರಿಣ-ಋಣ | ೭೬-೧೩ |
| ಮುಟ್ಟುಪಡ-ಅಲಾಭ | ೬೨-೭೪ವ | ರುತಿ-ಧ್ವನಿ | ೧೨೮-೭೬ |
| ಮುನ್ನೇಸಱ್-ಪ್ರಾತಃಕಾಲ | ೨೨-೧೧೪ | ರುವತ್-ಶಬ್ದಮಾಡುವ | ೧೯೯-೪೫ |
| ಮುಮ್ಮಟಿ-ಗುಂಪಾಗು ? | ೧೫೦-೩೯ವ | ರೋಚಿ-ಪ್ರಕಾಶ | ೬೫-೮೫ |
| ಮುಱುಕ-ತಿರುಗಿಸುವಿಕೆ | ೨೦೯-೮೪ವ | ರೋಮಂಥ-ಮೆಲುಕು | |
| ಮುಸು-ಕೋತಿ | ೧೩೫-೧೧೩ವ | ಹಾಕುವುದು | ೫೬-೪೫ |
| ಮುಸುಂಬು-ಮೂತಿ | ೧೩೫-೧೧೩ವ | ಱುಂಚೆ-ವಾದ್ಯವಿಶೇಷ | ೨೦೭-೭೫ವ |
| ಮುಸ್ತಾಕ್ಷತ-ಗೇಕಿನ | | ಱಿಕೋಱಗ-ಹೀಯಾ | |
| ಗಡ್ಡೆಯಗಾಯ | ೫೯-೬೩ | ಳಿಸುವವ | ೧೩೬-೧೧೩ವ |
| ಮೂವೆ-ಮೂಱುಸಾರಿ | ೪೬-೯ | ಲಕ್ಕೆ-ಲಕ್ಷ | ೨೧೦-೮೪ವ |
| ಮೂರಿ-ಬಾಯಿ | ೫೬-೪೫ | ಲಟಹ-ರಮಣೀಯತೆ | ೨-೧೦ |
| ಮೂಷೆ-ಲೋಹಕರಗಿಸುವ | | ಲಪನ-ಮುಖ | ೧-೩ |
| ಮಣ್ಣಿನ ಕುಡಿಕೆ | ೧೪೫-೨೦ವ | ಲಂಪಳ-ಲಂಪಟ | ೧೦೩-೧೨೮ |
| ಮೃಣಾಳ-ತಾವರೆಯ ದಂಟು | ೩೭-೫೭ | ಲಲಾಮ-ಹಣೆ | ೨೧೦-೮೬ |
| ಮೆಡಱು-ಸುತ್ತಿಕೊಳ್ಳು | ೧೫೩-೧೧೩ | ಲಸತ್-ಪ್ರಕಾಶಮಾನವಾದ | ೭-೩೬ |
| ಮೇದಿನಿ-ಭೂಮಿ | ೮೭-೬೮ | ಲುಬ್ಧಕ-ಬೇಡ | ೬೧-೭೧ವ |

ಪುಟ—ಪದ್ಯ

ಉಳಿತಾಳಕ-ಗುಂಗುರು ಕುರುಳು ೪೩-೮೭
ಲೇಲಿಹಾನ-ನೆಕ್ಕುತ್ತಿರುವ ೧೯೭-೩೩
ಲೋಚ-ಕೇಶೋತ್ಪಾಟನ ೫೨-೨೮ವ
ಲೋಧ್ರ-ಸಾಂಬ್ರಾಣಿಮರ ೫೪-೩೫
ಲೋವೆ-ಮನೆಯಸೂರಿನ ಮುಂಭಾಗ ೧೮-೯೨ಪ
ವಕುಳ-ಬಕುಳ ೧೨೩-೫೫ವ
ವಕ್ತ್ರ-ಮುಖ ೪೪-೯೫
ವಟ-ಆಲದಮರ ೫೫-೪೩
ವಣಿಕ್ಪತಿ-ವರ್ತಕಶ್ರೇಷ್ಠ ೬೫-೮೫
ವಪ್ರ-ಗೋಡೆ ೪೧-೭೯
ವರುಡಲ್-ಉಜ್ಜುವಿಕೆ ೧೦೧-೧೨೨
ವಲ್ಲೂರ-ಒಣಗಿದಮಾಂಸ ೧೧೯-೪೧
ವಾಜಿ-ಕುದುರೆ ೮೮-೬೮ವ
ವಾನೇಯ-ಕಾಡಿಗೆ ೧೦೦-೧೧೬
ವಾಮಾಳಾಕ-ಕೊಂಕಿದ ಕುರುಳು ೫೪-೩೮
ವಾಂಶಿಕ-ಕೊಳಲು ೬೭-೯೭ವ
ವಾಸಕ-ದಿವಸ ೧೭೨-೩೬ವ
ವಾಳವಾಯಜ-ಒಂದು ಬಗೆಯ ರತ್ನ ೧೩೧-೯೧
ವಿಗುರ್ವಣೆ-ಭಯವನ್ನು ಹುಟ್ಟಿಸುವ ೨೧೧-೮೮ವ
ವಿಚಯನ-ಹುಡುಕು-? ೯೨-೮೫
ವಿಚ್ಛಿತ್ತಿ-ಕತ್ತರಿಸುವಿಕೆ ೩-೧೧
ವಿಟಪಿ-ಮರ ೫೫-೪೩
ವಿದ್ರುಮ-ಹವಳ ೧೧೬-೨೧
ವಿಪಂಚಿ-ವೀಣೆ ೧೪೩-೧೭ವ
ವಿಭ್ರಾಜಿಸು-ಪ್ರಕಾಶಿಸು ೮೫-೫೮
ವಿಯಚ್ಚರ-ಖೇಚರ ೯೨-೮೫ವ

ಪುಟ—ಪದ್ಯ

ವಿಲಸಿತ-ಪ್ರಕಾಶಮಾನವಾದ ೧೨೫-೬೦
ವಿಶಸನ-ಯುದ್ಧ ೧೧೯-೪೦
ವಿಶ್ರುತ-ಪ್ರಸಿದ್ಧವಾದ ೮೭-೬೮
ವಿಷಯ-ದೇಶ ೩೯-೬೫
ವಿಷಾಣ-ಕೊಡು ೧೦೦-೧೨೧
ವಿಷ್ಟರ-ಪೀಠ ೨೧-೧೦೯ವ
ವಿಹಾಯಸ-ಆಕಾಶ ೨೦೨-೫೭
ವೀತವೃಜಿನ (ತಪ್ಪು) ವೀರವೃಜಿನ-ಪಾಪವನ್ನು ಕಳೆದುಕೊಂಡವನು ೨೧-೧೦೭
ವೃಥೆ-ವ್ಯರ್ಥ ೫೧-೨೭
ವೃಷ-ಸದ್ಧರ್ಮ ೪-೨೨
ವೇದಂಡ-ಆನೆ ೧೩೪-೧೧೦
ವೈಕುರ್ವಣ-ರೂಪವನ್ನು ಬದಲಾಯಿಸುವ ವಿದ್ಯೆ ೧೪೯-೩೬ವ
ವ್ಯಾದಾನ-ಅಗಲವಾಗಿ ತೆರೆದಿರುವ ೧೮೬-೯೦
ವ್ಯಾಧೂತ-ಬೀಸಲ್ಪಟ್ಟ ೧೨೮-೭೪
ವ್ಯಾಲೋಲ-ಚಂಚಲ ೮೫-೫೯
ವ್ಯಾಳ-ಸರ್ಪ ೧-೨
ಶಠ-ನಾಯಕನಲ್ಲಿ ಒಂದುಭೇದ ೧೦೭-೧೫೪
ಶಫರಿ-ಹೊಳೆಯುವ ಹೆಣ್ಣು ಮೀನು ೫೭-೫೫
ಶಬಾಲಯ-ಶ್ಮಶಾನ ೧೧೬-೭೪
ಶರ್ವ-ಶಿವ ೬೭-೯೭ವ
ಶಲಾಟು-ಹೀಚು ೬೩-೭೭
ಶಲ-ಮುಳ್ಳುಹಂದಿ ೫೯-೬೨
ಶಾಕ್ವರ-ಗೂಳಿ ೧೯೨-೨೦ವ
ಶಾಖಾಚರ-ಕಪಿ ೧೦೨-೧೨೬ವ
ಶಾಬಕ-ಮರಿ ೧೮-೯೪
ಶಾರಿಕೆ-ಹೆಣ್ಣುಗಿಳಿ ೧೮-೯೪

| | ಪುಟ—ಪದ್ಯ | | ಪುಟ—ಪದ್ಯ |
|---|---|---|---|
| ಶಾಳಿ-ನೆಲ್ಲು | ೮೫-೬೨ | ಸವನ-ಸ್ನಾನ | ೪೧-೭೬ |
| ಶಿಲೀಮುಖ-ಬಾಣ | ೧೫೧-೪೫ | ಸವಿರತಿವ್ರತ-ವಿರತಿವ್ರತದೊಡನೆ ಕೂಡಿದ | ೧೪-೭೬ |
| ಶೈಲೂಷ-ನಟ | ೮೦-೩೫ | | |
| ಶ್ರೇಢಿ-ಶ್ರೇಣಿ, ಸ್ತೋಮ | ೪೫-೩ವ | ಸಹಕಾರ-ಮಾವು | ೪೦-೭೧ |
| ಸಕ್ಖಿ-ಸಾಕ್ಷಿ | ೧೩೯-೭ | ಸಾಗರಾವಾಸನ್-ವರುಣ | ೧೫೪-೫೬ |
| ಸಂಕ್ರಂದನ-ಇಂದ್ರ | ೧೫೩-೫೫ | ಸಾನು-ಬೆಟ್ಟದ ತಪ್ಪಲು | ೪೭-೧೨ |
| ಸಂಚಯ-ರಾಶಿ | ೧೧-೬೧ | ಸಾಂದು-ಸಾದು | ೧೧೨-೭ |
| ಸಂಚಳ-ಚಂಚಲ | ೧೧-೬೧ | ಸಾಭ್ರಾತ-ಒಡಹುಟ್ಟಿದ | ೧೧೨-೫ವ |
| ಸಂಛನ್ನ-ಮುಚ್ಚಿದ | ೬೭-೯೭ವ | ಸಾಂಯಾತ್ರಿಕ-ಹಡಗಿನ ವ್ಯಾಪಾರಿ | ೧೩೮-೨ |
| ಸಂಜನಿತ-ಹುಟ್ಟಿದ | ೩೯-೬೮ | | |
| ಸಪವುಡನ್-ಆತುರ, ಸಂಭ್ರಮ | ೭೫-೧೧ | ಸಾಂಯುಗೀನ-ಯುದ್ಧ ಚತುರ | ೭೬-೧೩ವ |
| | | ಸಾಯಕ-ಬಾಣ | ೬೧-೬೮ |
| ಸಣಗ-? | ೧೦೦-೧೧೮ | ಸಾರಿಕೆ-ಹೆಣ್ಣು ಗಿಳಿ | ೭೦-೧೦೭ |
| ಸಂಡಿ-? | ೨೧೪-೧೦೮ | ಸಾಸಿಗ-ಸಾಹಸಿಗ | ೧೧೪-೧೩ |
| ಸತ್ರಾರ್ಣ-ಹಿಂದುಮರ ? | ೫೪-೩೫ | ಸಾಸ್ನಾಪಟ-ಗಂದೊವಲು | ೧೧೦-೧೨೧ |
| ಸಪಶಿರ < ಸಪ್ತಶಿರ-ಮುಷ್ಠಿಯ ಒಂದು ವಿಧಾನ | ೨೧೧-೯೦ವ | ಸಿಗ್ಗು-ನಾಚಿಕೆ | ೬೬-೯೫ |
| | | ಸಿತಗ-ವಿಟ | ೧೪೮-೩೨ |
| ಸಪ್ತಚ್ಛದ-ಏಳೆಲೆ ಬಾಳೆ ಮರ | ೫೫-೩೫ | ಸಿತಚಂಚು-ಬಿಳಿಯ ಕೊಕ್ಕು | ೮೫-೬೦ |
| ಸಪ್ತಾರ್ಚಿ-ಅಗ್ನಿ | ೮೪-೫೪ | | |
| ಸಪ್ತಾರ್ಣವ-ಸಪ್ತ ಸಮುದ್ರ | ೧೮೯-೭ | ಸಿದ್ಧಿಗೆ-ಚಿತೆ | ೧೨೦-೪೧ವ |
| ಸಮವಾಯ-ಒಟ್ಟಿಗೆ ಸೇರುವುದು | ೧೨೦-೪೧ವ | ಸಿಂಜೆ-ಸಿತಗೆ, ಸೂಳೆ | ೪೫-೪ |
| | | ಸಿಪ್ಪು-ಚಿಪ್ಪು | ೨೯.೧೯ |
| ಸಂಭೇದ-ಕೂಡುವಿಕೆ | ೯೭-೧೦೭ವ | ಸೀಕರ-ತುಂತುರು ಹನಿ | ೧೩೨-೯೮ |
| ಸಂಮದ-ಸಂತೋಷ | ೪೨-೮೨ | ಸೀತೋದೆ-ಸೀತೋದಾನದಿ | ೭೯-೬೩ |
| ಸಮೀರ-ಗಾಳಿ | ೧೩೨-೯೬ | ಸೀರ-ನೇಗಿಲು | ೧೦೧-೧೨೩ |
| ಸಮ್ಮುಡಿ-ನೇರವಾದ ವಾದ | ೩೭-೫೭ | ಸೀವರ-ತುಂತುರುಹನಿ | ೧೩೧-೯೨ |
| ಸರಟ-ಓತಿ | ೧೨೯-೮೨ | ಸುಸಿಲ್-ಸುರತ | ೧೧೦-೨೫ |
| ಸರಿಗಲ್ಲ-ಬಂಡೆಗಲ್ಲು | ೪೯-೧೮ | ಸೂನಂಗಳ್-ಹೂವುಗಳು ? | ೧೪-೨೮ |
| ಸಲಗೆ-ಶಲಾಕೆ | ೪೯-೧೮ವ | ಸೂಸು-ಚೆಲ್ಲು | ೧೫-೮೧ |
| ಸಲಿಲ-ನೀರು | ೪೮-೧೪ವ | ಸೂಳ್ಳಿಸು-ಶಬ್ದ ಮಾಡು | ೩೬-೫೩ |
| ಸವಡಿ-ಜೋಡಿ | ೩೦-೨೪ | ಸೆಗಳಿ-ಶಾಖ | ೧೬೩-೪ |

| | ಪುಟ—ಪದ್ಯ | | ಪುಟ—ಪದ್ಯ |
|---|---|---|---|
| ಸೆಜ್ಜೆವಳ್ಳ-ಶಯ್ಯಾಗೃಹದ ಅಧಿಕಾರಿ | ೨೪-೧೨೦ | ಸ್ನಪನ—ಸ್ನಾನ | ೧೩೬-೧೧೬ |
| | | ಸ್ಮರ-ಮನ್ಮಥ | ೬೬-೯೩ವ |
| ಸೆಂದುರ-ಲಕ್ಕೀಹೂವು | ೧೩೪-೧೧೧ವ | ಸ್ಫಾರ-ಪ್ರಕಾಶಿಸುವ | ೫೪-೩೫ |
| ಸೆಲ್ಲಿಸು—ಸೆಕ್ಕಿಸು ? | ೫೧-೨೫ | ಸ್ಯಾದ್ವಾದ-ಜೈನ ತರ್ಕ | ೨-೧೦ |
| ಸೆಳೆಗೊಂಬು-ತೆಳ್ಳಗಿರುವ ಕೊಂಬೆ | ೨೭-೧೧ | ಸ್ರೋತ-ಪ್ರವಾಹ | ೫೬-೪೮ |
| | | ಸ್ವಾಯತ್ತ-ತನ್ನಲ್ಲಿಯೇ ವಶವಾಗಿರುವುದು | ೧-೧ |
| ಸೇದೆವಡು-ಬಳಲು | ೮೩-೫೦ವ | | |
| ಸೈರಿಭ-ಕೋಣ | ೫೬-೪೫ | ಹಿಮಕೃನ್ಮಂಡಳ-ಚಂದ್ರ | ೧೯೭-೩೬ |
| ಸೈವಳ-ಸೈವಾಲ, ಪಾಚಿ | ೧೩೪-೧೦೮ | ಹೀಲಿ-ನವಿಲುಗರಿ | ೮೫-೬೨ |
| ಸೋಂದು-ಓಡಿಸು | ೮೩-೫೦ವ | ಹೂಹೆ>ಹಾಹೆ-ಬೊಂಬೆ | ೧೦೭-೧೫೦ |
| ಸೋವು—ಎಬ್ಬಿಸಿ ಓಡಿಸು | ೯೧-೮೪ವ | ಹೆಕ್ಕಳಿಸು-ಅಧಿಕವಾಗು | ೨೧೪-೧೦೬ವ |
| ಸೌರಭೇಯ-ಎತ್ತು | ೧೦೧-೧೨೩ | ಹೆ-ಚಂದ್ರ | ೨೮-೧೫ |
| ಸ್ತಬಕ-ಹೂಗೊಂಚಲು | ೧೪೦-೧೩ವ | ಹ್ರದ-ಮಡು | ೧೯೮-೩೯ |